೭೨



ಪ್ರಿಲ್ - ಜೂನ್ ೨೦೦೭

# ಅನಿಕೇತನ

ಕರ್ನಾಟಕ ಸಾಹಿತ್ಯ ಅಕಾಡೆಮಿ ತ್ರೈಮಾಸಿಕ

ಸಂಪಾದಕರು
ಡಾ. ಮಲ್ಲಿಕಾ ಘಂಟಿ

# ಅನಿಕೇತನ

ಕರ್ನಾಟಕ ಸಾಹಿತ್ಯ ಅಕಾಡೆಮಿಯ ತ್ರೈಮಾಸಿಕ

ಏಪ್ರಿಲ್ – ಜೂನ್ ೨೦೦೭

ಸಂಪಾದಕರು

ಡಾ. ಮಲ್ಲಿಕಾ ಘಂಟಿ



ಕರ್ನಾಟಕ ಸಾಹಿತ್ಯ ಅಕಾಡೆಮಿ

ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು–೫೬೦ ೦೦೨

✆ ೦೮೦–೨೨೨೧ ೧೬೫೦ / ೨೨೧೦೬೪೬೦

**ANIKETHANA : A Literary Journal (Quarterly)**

**Edited by** : **Dr. Mallika Ghanti,** Reader, Dept of Kannada,
P.G. Centre, Sondur - 583119 Bellary Dist.

**Published by** : **V. N. Mallikarjunaswamy,** Registrar, Karnataka Sahithya Academy, Kannada Bhavana, J.C. Road, Bengalooru-02.

Pages : V + 147

Registration No. 45646/88

ಸಂಪುಟ : ೧೮

ಸಂಚಿಕೆ : ೪

ಪ್ರತಿಗಳು : ೧೫೦೦

ಪುಟಗಳು : V + ೧೪೭

**ಪ್ರಕಾಶಕರು :**

**ವಿ. ಎನ್. ಮಲ್ಲಿಕಾರ್ಜುನಸ್ವಾಮಿ**

ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ,

ಕನ್ನಡ ಭವನ, ಜೆ. ಸಿ. ರಸ್ತೆ, ಬೆಂಗಳೂರು– ೫೬೦ ೦೦೨

ಬಿಡಿ ಪ್ರತಿ : ರೂ. ೩೦/–

ವಾರ್ಷಿಕ ಚಂದಾ : ರೂ. ೧೦೦/–

ಅಜೀವ ಚಂದಾ : ರೂ. ೩೦೦/–

ಮುಖಪುಟ ಕಲೆ : ದಿನೇಶ್ .ಬಿ

ಕೃಪೆ : ಕರ್ನಾಟಕ ಲಲಿತಾಕಲಾ ಅಕಾಡೆಮಿ

ಮುದ್ರಕರು : ಭಾಗ್ಯಂ ಬೈಂಡಿಂಗ್ ವರ್ಕ್ಸ್
ನಂ. ೨೫/೧, ೧ನೇ ಮುಖ್ಯರಸ್ತೆ, ೧ನೇ ಅಡ್ಡರಸ್ತೆ
ನ್ಯೂ ಟಿಂಬರ್ ಯಾರ್ಡ್ ಲೇಔಟ್
ಮೈಸೂರು ರಸ್ತೆ ಬೆಂಗಳೂರು – ೫೬೦ ೦೨೬
ದೂರವಾಣಿ : ೨೬೭೫೮೨೮೦, ಫ್ಯಾಕ್ಸ್ : ೨೬೭೫೯೦೮೮

## ಸಂಪಾದಕರ ಮಾತು

ಟಿ.ವಿ., ಸಿನೇಮಾ, ಕಂಪ್ಯೂಟರ ಬಂದು ಪುಸ್ತಕ, ಪತ್ರಿಕೆ ಓದುವ ಅಭಿರುಚಿ, ಆಸಕ್ತಿ ಮಾಯವಾಯಿತು ಎಂಬ ಕಳವಳವನ್ನು ಸುಳ್ಳುಮಾಡುವ ಹಾಗೇ ಕನ್ನಡಿಗರು ಅನಿಕೇತನದ ಬರುವಿಕೆಯ ಬಗ್ಗೆ ಕಾತುರ ತೋರುತ್ತಿರುವ ಈ ಹೊತ್ತಿನಲ್ಲಿ ಒಂದಿಷ್ಟು ಅಳುಕಿನಿಂದಲೇ ಸಂಪಾದಕಿಯಾಗಿ ಕ್ಷಮೆ ಕೋರುತ್ತೇನೆ. ಗೀತಾ ನಾಗಭೂಷಣರ ಅಧ್ಯಕ್ಷತೆಯಲ್ಲಿ ಅಕಾಡೆಮಿಯ ಎಲ್ಲ ಸದಸ್ಯರು ಸೇರಿ ಅನಿಕೇತನದ ಸಂಪಾದನಾ ಜವಾಬ್ದಾರಿ ನನಗೆ ನೀಡಿದರು. ಪ್ರೀತಿಯಿಂದ ಈ ಕೆಲಸ ಒಪ್ಪಿಕೊಂಡು ಜವಾಬ್ದಾರಿಯಿಂದ ಮಾಡುವುದು ನನ್ನ ಕರ್ತವ್ಯ. ವರ್ತಮಾನದ ತಲ್ಲಣಗಳಿಗೆ ಕಾರಣಗಳನ್ನು ಹುಡುಕುವಾಗ ಭೂತದಲ್ಲಿಯೂ ಕಣ್ಣಾಡಿಸಬೇಕಾಗುತ್ತದೆ. ಭೂತವನ್ನು ಸೋಸುತ್ತ ವರ್ತಮಾನಗಳ ಸಹ್ಯವಾಗಿಸಿ ಭವಿಷತ್ತಿನ ಕನಸುಗಳಿಗೆ ಕಣ್ಣಾಗುವ ಇರಾದೆಯು ಇಂದಿನ ತುರ್ತಾಗಿದೆ. ಅರ್ಥದ ಬೆನ್ನುಹತ್ತಿ ಮನುಷ್ಯ ಇಂದು ಚೇತರಿಸಿಕೊಳ್ಳಲಾರದ ಹಾಗೆ ಹೊಡೆತ ತಿಂದಿರುವನು. ಆರ್ಥಿಕ ಹಿಂಜರಿತವೆಂಬದು ಉಳ್ಳವರಿಗೆ ಮಾತ್ರ ಬಿಸಿ ಮುಟ್ಟಿಸಿಲ್ಲ. ದುಡಿಯುವ ವರ್ಗದ ಹೊಟ್ಟೆಯ ಮೇಲೂ ತಣ್ಣೀರ ಬಟ್ಟೆಯನ್ನು ಹಾಕಿದೆ. ಎಲ್ಲ ಕ್ಷೇತ್ರಗಳಲ್ಲಿಯೂ ಮೌಲ್ಯಗಳು ಮರೆಯಾಗಿವೆ. ಇಂತಹ ಸಂದರ್ಭದಲ್ಲಿ ಗೋಡೆಯ ಮೇಲಿನ ಹಲ್ಲಿಯ ಹಾಗೆ ಲೊಚಗುಟ್ಟಿದರೆ ಸಮಸ್ಯೆ, ಬಿಕ್ಕಟ್ಟು ಪರಿಹಾರವಾಗಲು ಸಾಧ್ಯವಿಲ್ಲ. ಮನುಷ್ಯನ ಭೌತಿಕ ಬದುಕಿನ ವ್ಯಾಮೋಹ ಎಲ್ಲಯವರೆಗೆ ಎಳೆದುಕೊಂಡು ಹೋಗಿ ಏನು ಮಾಡಬಲ್ಲದು ಎಂಬುದಕ್ಕೆ ನಾವು ನಿಂತ ಕಾಲವೇ ಸಾಕ್ಷಿಯಾಗಿದೆ. ಭೌತಿಕ ಬದುಕಿನ ಆಚೆಗೂ ಮನುಷ್ಯನ ಹುಡುಕಾಟ ಎಂದಿನಿಂದಲೂ ನಡೆದೆಯಿದೆ. ಮನುಷ್ಯನ ಮನಸ್ಸಿನೊಳಗಿನ ಮತ್ತು ಹೊರಗಿನ ಲೋಕಗಳ ಬಗ್ಗೆ ನಿರಂತರ ಅನ್ವೇಷಣೆ ನಡೆದಿದೆ. ಹುಟುಕಾಟದ ಹಾದಿಯಲ್ಲಿ ಏನೆಲ್ಲವೂ ಸಿಕ್ಕಿದೆ. ಸಿಕ್ಕದ್ದನ್ನು ಸಂತೋಷದಿಂದ ಅನುಭವಿಸುವುದರಲ್ಲಿ ಎಂದಿನಿಂದಲೂ ಗೊಂದಲಗಳಿವೆ. ಗೊಂದಲದ ಗೂಡಾಗಿರುವ ಮನುಷ್ಯ ಬದುಕು ಮನುಷ್ಯನಿಂದಲೇ ರಿಪೇರಿಗೆ ಒಳಗಾಗಬೇಕು ಎಂಬ ವಿವೇಕ ವಾಸ್ತವದ ಅರವಿನಿಂದ ಹುಟ್ಟಬೇಕು. ಅದು ಜಗತ್ತಿನ ಯಾವುದೇ ಮೂಲದಿಂದ ಬಂದರು ಪಡೆದುಕೊಳ್ಳುವ ಸಲುವಾಗಿ ನಮ್ಮ ನಮ್ಮ ಮನಸ್ಸಿನ ಕಿಡಕಿ-ಬಾಗಿಲನ್ನು ತೆರೆಯುವುದು ನಮ್ಮಿಂದಲೇ ಆಗಬೇಕಲ್ಲವೆ?

ಎಂದಿನ ಹಾಗೇ ಈ ಸಂಚಿಕೆಯುಲ್ಲಿಯು ಬೇರೆ ಬೇರೆ ಭಾಷೆಯಿಂದ ಅನುವಾದಗೊಂಡ ಕಥೆ, ಕವನಗಳಿವೆ. ನಾವು ನಿಂತ ಭೂಮಿ ಮತ್ತು ನಮ್ಮನ್ನು ಆವರಿಸಿರುವ ಸಾಮಾಜಿಕ ಬದುಕು ಒಂದೇ ಆಗಿರುವುದರಿಂದ ಯಾವುದೇ ಭಾಷೆಯ ಭಾವಕೋಶಗಳಲ್ಲಿ ಗೂಡುಕಟ್ಟಿರುವ ಅನುಭವಗಳಲ್ಲಿ ಸಾಮ್ಯತೆಯಿದೆ. ನಮ್ಮಂತರಂಗದ ಧ್ವನಿಗೆ ಧ್ವನಿಬೆರೆಸುವ ರೀತಿ ಬೇರೆಯಾಗಿರುವುದು ಕೂಡ ವಿಶೇಷವಾದದ್ದು. ಹಲವು ವಿಶೇಷಗಳು ಈ ಸಂಚಿಕೆಯಲ್ಲಿವೆ.

ಡಾ. ಶ್ರೀ. ಗುರುರಾಜ ಎಲ್ಲಾಪೂರ ಅವರು ಅನುವಾದಿಸಿದ 'ಅಗ್ಗಿಷ್ಟಿಕೆಯ ರಂಧ್ರ', 'ಎಷ್ಟು ತುಂಬಿಕೊಂಡಿದೆಯೆಂದರೆ', 'ನೀನು ಪ್ರತ್ಯಕ್ಷವಾದಾಗ' ಕವಿತೆಗಳು ಸಮಕಾಲೀನ ಬದುಕಿನ ತುಡಿತಗಳನ್ನು ಒಳಗೊಂಡಿವೆ. 'ನೋ ರೂಮ್' ಗುರುಮೂರ್ತಿಯವರು ಅನುವಾದಸಿದ ಕಥೆ, ವಿ. ಗಣೇಶ ಅವರ ಅನುವಾದದ 'ವಿಂದ್ಯಾ' ಕಥೆ 'ಕಸದ ಬುಟ್ಟಿ', ಬಸು ಬೇವಿನಗಿಡದ ಅವರು ಅನುವಾದಿಸಿದ ಕಥೆ, ವಿ. ಶ್ರೀನಿವಾಸರವರು ಅನುವಾದಿಸಿದ 'ಪಾಪದರೊಟ್ಟಿ' ಮತ್ತು 'ದುಬಾರಿ ವಾಯುವಿಹಾರ', 'ಒಂದು ಅಪಘಾತ' ಕಥೆಗಳು ಸಮಕಾಲೀನ ಬದುಕು ಹೇಗೆ ಬಾಯ್ದೆರೆದು ಮನುಷ್ಯನ ಸುಖ-ಸಂತೋಷಗಳನ್ನು ನುಂಗಿ ಕರಾಳಕತ್ತಲೆಯನ್ನು ಬಿತ್ತುತ್ತದೆ ಎಂಬುದನ್ನು ವಿಷಾದದಿಂದ ನಿರೂಪಿಸುತ್ತವೆ. ಬಗೆದಷ್ಟು ಸಿಗುವ ವಸ್ತು ವಿಷಯಗಳು ಮನುಷ್ಯನೊಳಗಿವೆ ಹೊರತು ಹೊರಗೆಲ್ಲೂ ಇಲ್ಲ. ಅತ್ಯಂತ ವಿಸ್ಮಯ, ಕುತೂಹಲದಾಯಕವಾದ ಹಲವು ಸಂಗತಿಗಳನ್ನು ಕಥೆಯಾಗಿಸುವ ಶಕ್ತಿ ಎಲ್ಲ ಭಾಷಿಕರ ಭಾವಲೋಕದಲ್ಲಿಯು ಬೆಚ್ಚಗೆ ಇರುವುದನ್ನು ಇಲ್ಲಿಯ ಅನುವಾದಿತ ಕಥೆಗಳ ಮೂಲಕ ಅರಿವಿಗೆ ನಿಲುಕುವುದು. ಡಾ. ಬಸವರಾಜ ಡೋಣೂರರ 'ಏಕಾಂಕ' 'ಕವಿ ಪ್ರೇಮಿ' ನಾಟಕ ಸಮಕಾಲೀನ ಬದುಕಿನಲ್ಲಿ ಮೌಲ್ಯಗಳು ಹೇಗೆ ಕುಸಿಯುತ್ತಿವೆ/ಕುಸಿದಿವೆ ಎಂಬುದನ್ನು ವಿಡಂಬಿಸಿದ ರೀತಿ ಚಿಂತನೆಗೆ ತೊಡಗಿಸುತ್ತದೆ. 'ಉರಿಯ ನಾಲಗಿ ಮೇಲೆ' ಹಾಗೂ ಲಕ್ಷ್ಮಣ ಬಾದಾಮಿಯವರ 'ಅವರು ನಡೆವ ದಾರಿ' ಕಥೆ ಕನ್ನಡದ ಕಥಾಲೋಕ ಹಿಗ್ಗಿದ ಸಾಧ್ಯತೆಯನ್ನು ತೆರೆದುತೋರಿಸುತ್ತವೆ. ಭಾವಲೋಕದ ವ್ಯವಹಾರವನ್ನು ಹೊತ್ತುಬರುವ ಕಥೆ, ಕವನಗಳ ಹಾಗೆಯೇ ಬುದ್ಧಿಗೆ ತಂಪೆರೆಯುವ ವಿಮರ್ಶೆ, ಸಮೀಕ್ಷಾ ಮಾದರಿಯ ಲೇಖನಗಳು ನಮ್ಮಲ್ಲೊಂದು ಪ್ರಶ್ನಿಸುವ ಮತ್ತು ಆಲೋಚಿಸುವ ಸಾಮರ್ಥ್ಯವನ್ನು ಬೆಳೆಸುತ್ತದೆ. ಇಂತಹ ಶಕ್ತಿ ಹೊಂದಿರುವ ಮೇಟಿ ಮಲ್ಲಿಕಾರ್ಜುನವರ 'ಭಾರತದ ಭಾಷೆಗಳ ಹೊಸ ಸಮೀಕ್ಷೆ : ಭಾಷಿಕ ಅನನ್ಯತೆಯ ಪುನರ್ ಶೋಧವೇ? ಮತ್ತು ಕನ್ನಡ-ಮರಾಠಿ ಕಥಾ ಸಾಹಿತ್ಯ : ಕೊಳು-ಕೊಡುವ ಸಮೀಕ್ಷೆ ಲೇಖನವನ್ನು ಶಂಭದಾ ಅಮಿನಭಾವಿಯವರು ಸಂದರ್ಭೋಚಿತವಾಗಿಯೇ ಬರೆದಿರುವರು. ಬುದ್ಧಿ ಭಾವಲೋಕದಲ್ಲೊಂದು ಸಂಚಲನವನ್ನುಂಟು ಮಾಡಬಲ್ಲ ಲೇಖನಗಳಿಂದ ಕೂಡಿರುವ ಈ ಸಂಚಿಕೆಯನ್ನು ರೂಪಿಸಿರುವ ಶ್ರಮ ಸಾರ್ಥಕವಾಗುವುದು ನೀವು ಓದಿದ ಮೇಲೆ ಮಾತ್ರ. ಎಂದಿನಂತೆ ಪ್ರೀತಿಯಿಂದ ಈ ಸಂಚಿಕೆಯನ್ನು ಕೈಗೆತ್ತಿಕೊಳ್ಳುತ್ತೀರೆಂಬ ಭರವಸೆ ಇದೆ.

**ಡಾ. ಮಲ್ಲಿಕಾ ಘಂಟಿ**
**ಸಂಪಾದಕರು**

# ಪರಿವಿಡಿ

# ಅಗ್ಗಿಷ್ಟಿಕೆಯ ರಂಧ್ರ

ಹಿಂದಿ : ಸುನೀತಾ ಶರ್ಮ                    ಅನು : ತಾ. ಶ್ರೀ. ಗುರುರಾಜ ಎಲ್ಲಾಪುರ

ನನ್ನ ಬಳಿ
ವ್ಯಾಕುಲತೆಯಿದೆ
ಏನೂ ಮಾಡಲಾಗಂಥದು
ಅಗ್ಗಿಷ್ಟಿಕೆಯ
ಕಲ್ಲಿದ್ದಲು ಕೆಂಡವನು
ಇಕ್ಕಳ
ಬಿಟ್ಟೂ ಬಿಡದೆ
ಕೆದಕಿ ಬಿಡುತ್ತಿದೆ.

ಸಮಯಕ್ಕೆ
ಮುನ್ನವೇ
ಅದರ ಕೆಂಬಣ್ಣ
ಕುಗ್ಗಿ
ಹೋಗಲಾರಂಭಿಸಿದೆ
ಅಗ್ಗಿಷ್ಟಿಕೆಯ
ಕೆಳಗೆ
ಆಗಿರುವ ರಂಧ್ರವೂ
ಚಳಿಗೆ
ನಡುಗುವಂತೆನಿಸುತ್ತದೆ.
ನನ್ನ ಕಂಬಳಿಯೊಳಗೂ
ತೂತು
ಬಹಳ ಇವೆ

ಅನಿಕೇತನ/೨

ಅವನ್ನು ಬಿಸಿಗೊಳಿಸಲು
ಬೇರೆ
ಇನ್ನೊಂದು ಉಪಾಯ
ಹುಡುಕುವ
ಯೋಚನೆಯಲ್ಲಿ ನಾನು
ಅಂಗಳದಿಂದ
ಹೊರಕ್ಕೆ
ಹೊರಟುಹೋಗುತ್ತೇನೆ.

* * *

# ಎಷ್ಟು ತುಂಬಿಕೊಂಡಿಹೆಯೆಂದರೆ

ಹಿಂದಿ : ಸುನೀತಾ ಶರ್ಮ ಅನು : ತಾ. ಶ್ರೀ. ಗುರುರಾಜ ಎಲ್ಲಾಪುರ

ನೀನು ನನ್ನೊಳಗೆ
ಎಷ್ಟು ತುಂಬಿಕೊಂಡಿಹೆಯೆಂದರೆ
ನೀನು ಹೊರಟುಹೋಗುವ
ಅನುಭವವೂ ನೋಯಿಸುವುದಿಲ್ಲ.
ನಿನ್ನ ಸವಿನೆನಪು ಹೆಕ್ಕಿಕೊಡಲು
ಚಿಹ್ನೆಗೋ, ಚಿತ್ರಕೋ
ಹುಡುಕಾಡುವ ತಾಪತ್ರಯವೇ ಇಲ್ಲ.

ನಿನ್ನ ನೋಡಬಲ್ಲೆ
ಎಲ್ಲೆಡೆ ಪ್ರತಿಕ್ಷಣ, ಪ್ರತಿಯೊಂದರಲೂ
ಬಹುಶಃ ಇಡೀ ಬ್ರಹ್ಮಾಂಡದ
ಪ್ರತಿ ಕ್ಷಣದೊಳಗೂ ನೀನೇ ವ್ಯಾಪ್ತ;
ಇಲ್ಲವೇ ತುಂಬಿಕೊಂಡಿಹೆ
ನನ್ನವೇ ಕಣ್ಣುಗಳ
ಕಪ್ಪು ಪುತ್ಥಳಿಯೊಳಗೆ.

ಓಹ್! ತಿಳಿಯಿತು . . .
ಆದ್ದರಿಂದಲೇ ಕಂಬನಿ ಹರಿಯುವುದಿಲ್ಲ
ಅವಕ್ಕೆ ಭಯವಿದೆ
ಅವುಗಳ ಜೊತೆ
ನೀನೂ ಹರಿದು ಹೋದೀಯೆಂದು.

* * *

# ನೀನು ಪ್ರತ್ಯಕ್ಷವಾದಾಗ

ಮೂಲ : ಸುನೀತಾ ಶರ್ಮ	ಅನು : ತಾ. ಶ್ರೀ. ಗುರುರಾಜ ಎಲ್ಲಾಪುರ

ನಿನ್ನ ನೋಡಿ ತುಂಬಿಕೊಳ್ಳುವ
ಆಸೆಯಲಿ ಎದ್ದೇ ಇದ್ದವು ಕಣ್ಣು
ಈಗ ನೀ ಬಂದು ನಿಂತಿರುವಾಗ
ಏಕೋ ನೆಟ್ಟು ನಿಲ್ಲಲಾರದೆ
ಬಾಗಿಹೋಗುತ್ತಿದೆ ದೃಷ್ಟಿ

ಬಲು ಹಂಬಲಿಸಿವೆ ಈ ಕಿವಿ
ನಿನ್ನ ಇನಿದನಿಯ ತುಂಬಿಕೊಳ್ಳಲು
ಈಗ ನೀನೇನೋ ಉಲಿಯುತಿರುವಾಗ
ಏಕೋ ಬಯಲೊಳಗೆ
ಹುದುಗಿಹೋಗುತ್ತಿದೆ ಸದ್ದು.

ತವಕಿಸುವ ಬಾಹುಗಳು
ಆಸರಿಲ್ಲದೆ ಇದ್ದವು ಸದಾ
ಈಗ ನಿನ್ನ ಊರುಗೋಲು
ಇದ್ದರೂ ಏಕೋ
ಬಳಲಿಹೋಗುತ್ತಿವೆ.

ಬೆರಳುಗಳು ಹುಡುಕುತ್ತಲೇ ಇದ್ದ
ಆ ಸ್ಪರ್ಶ
ಎದುರಿಗೇ ಸಿಕ್ಕಿರುವಾಗಲೂ
ಏಕೋ ಮುರಿಯುತ್ತಿವೆ ನೆಟಿಕೆ.

ಅನಿಕೇತನ/೫

ಎದೆ ಕುದಿಯುತ್ತಿದ್ದರೂ ಕಾಡುತ್ತಿದ್ದ
ಆ ಕಿಡಿ ದಕ್ಕಿದೆ ಈಗ
ಅಕಾಲದ ಆ ಕಿಡಿಯಿಂದಲೇ ಬೆಂದು
ಕಮರಿಹೋಗುವಂತಿದೆ ಬದುಕು.

* * *

# ಕನ್ನಡಕ್ಕೆ ಬಂದ ಮರಾಠೀ ಮಹಿಳಾ ಕಥಾ ಸಾಹಿತ್ಯ

ಶಭದಾ ಅಮಿನಭಾವಿ

ಬದುಕಿನ ಅನುಭವದ ತೀವ್ರತೆಯ ಅಭಿವ್ಯಕ್ತಿಯೇ ಸಾಹಿತ್ಯ ಎನ್ನುವುದನ್ನು ನಾವೆಲ್ಲ ಒಪ್ಪಿಕೊಂಡಿದ್ದೇವೆ. ಈ ಅಭಿವ್ಯಕ್ತಿ ಕಥೆಗಳಲ್ಲಿ, ಕವಿತೆಗಳಲ್ಲಿ ಇನ್ನೂ ತೀವ್ರವಾಗಿರುತ್ತದೆ. ಬದುಕಿನ ಜಂಜಡ, ಸಂಘರ್ಷ, ಒಳ್ಳೆ-ಕೆಡಕು, ಏರು-ಇಳಿಲುಗಳ ಚಿತ್ರಣಕ್ಕೆ ಬಳಸಬಹುದಾದ ಕ್ಯಾನವಾಸೇ ಸಣ್ಣಕಥೆ. (ಸಾಹಿತ್ಯದ ಒಂದು ಪ್ರಕಾರ) ಈ ಸಾಹಿತ್ಯ ಪ್ರಕಾರ ಪಾಶ್ಚಿಮಾತ್ಯರ ಕೊಡುಗೆ ಎನ್ನುವ ಮಾತಿದ್ದರೂ ನಮ್ಮ ಪುರಾಣ, ರಾಮಾಯಣ, ಮಹಾಭಾರತ ಸಣ್ಣಕಥೆಗಳ ಆಗರವಾಗಿವೆ. ಕಥಾನಕ ಬೇರೆಯಾದರೂ ಸಣ್ಣಕಥೆಯಲ್ಲಿನ ರೋಚಕತೆ ಅವುಗಳಲ್ಲಿದೆ.ಮಾನವನ ಸ್ವಭಾವ, ಆಯಾ ಪ್ರಸಂಗಗಳಲ್ಲಿ ಅವನು ತೋರುವ ಪ್ರತಿಕ್ರಿಯೆ, ಅವನ ಸತ್ಯಶೋಧನೆಯ ತುಡಿತ, ಒಂದು ದಿನ ಅದು ದೊರೆಯುವುದೆನ್ನುವ ವಿಶ್ವಾಸ, ಈ ಕಥೆಗಳ ಸ್ಥಾಯಿಭಾವ. ಪಾಶ್ಚಾತ್ಯರ ಪ್ರಭಾವದಿಂದ ಸೃಷ್ಟಿಯೊಂದಿಗೆ ಮಾನವ ಸಂಬಂಧ, ಮಾನವ-ಮಾನವ ನಡುವಿನ ಸಂಬಂಧ, ಸಂಘರ್ಷ, ಸಂಕೀರ್ಣವಾದ ಪ್ರಕ್ರಿಯೆಗಳು, ಈ ಹೊಸ ವಿಚಾರದ ಅಲೆ ಕಥಾಲೋಕದಲ್ಲಿ ಹರಿಯಿತು.ಇದೇ ಹಿನ್ನೆಲೆಯಲ್ಲಿ ಬಂದ ಮರಾಠಿಕಥೆಗಳು ವಿಭಿನ್ನ ಅನುಭವ ಕೊಡುತ್ತವೆ.

ಅರವತ್ತರ ದಶಕದಲ್ಲಿ ಮರಾಠಿ ಸಾಹಿತ್ಯ ಕ್ಷೇತ್ರದಲ್ಲಿ ಮುಂಚೂಣಿಯಲ್ಲಿದ್ದ ಶಕುಂತಲಾ ಗೋಗಟೆ, ಡಾ। ಸುಮತಿ ಕ್ಷೇತ್ರಮಾಡೆ, ಗಿರಿಜಾ ಕೀರ, ಸ್ನೇಹಲತಾ ದಸನೂರಕರ, ಶೈಲಜಾ ರಾಜೆ, ವಿಜಯಾ ರಾಜಾಧ್ಯಕ್ಷ ಮುಂತಾದವರ ಕಥೆಗಳನ್ನು ಓದಿದ್ದೇನೆ. ಆಗಿನ ಪರಿಸರ, ಸಮಾಜದ ರೀತಿ-ನೀತಿಗಳನ್ನು ವಿಶ್ಲೇಷಿಸಿ, ತಮ್ಮ ಅನುಭವಗಳನ್ನು ಅವುಗಳೊಂದಿಗೆ ಹೋಲಿಸಿ, ಹೊಂದಿಸಿ ಬರೆದ ಕಥೆಗಳು ಅವು. ವಿವಾಹ ವಿಚ್ಛೇದನ, ಅಂತರ್ಜಾತೀಯ ವಿವಾಹ, ವಿಧವಾ ವಿವಾಹ, ದುಡಿಯುವ ಮಹಿಳೆ, ಇಂತಹ ಹೊಸ ವಿಚಾರಗಳೆಲ್ಲ ಅಷ್ಟೊಂದು ರೂಢಿಯಲ್ಲಿದ್ದ ದಿನಗಳು ಅವು. ದುಡಿಯಲು ಹೊರಬಿದ್ದ ಮಹಿಳೆಯ ಹೊರ ಸಂಕಟ, ಒಳತೋಟಗಳ, ಅದರಲ್ಲೂ ತಮ್ಮ ಅಸ್ಮಿತೆಯನ್ನು ಕಾಪಾಡಿಕೊಳ್ಳಲು ಧಡಪಡಿಸುತ್ತಿರುವ ದಿನಗಳು. ಈ ಎಲ್ಲ ಲೇಖಕಿಯರು ಈ ವಿಷಯಗಳನ್ನು ತಮ್ಮ ಕಥೆಗಳಿಗೆ ಬಳಸಿಕೊಂಡರು. ತಮ್ಮ ಅನುಭವಕ್ಕೆ ಬಂದ, ತಾವು ಕಂಡ ಸಮಾಜದ ಚಿತ್ರಣವನ್ನು ನಮ್ಮ ಮುಂದಿಟ್ಟರು. ಎರಡು ಹೆಜ್ಜೆ

ಮುಂದೆ ಹೋಗಿ ಆ ಕಥೆಗಳಲ್ಲಿ ಹೊಸ ವಿಚಾರಗಳನ್ನು ತುಂಬಿ ಭವಿಷ್ಯ ರೂಪಿಸಿದರು ಎನ್ನಬಹುದು. ಬದಲಾಗುತ್ತಿರುವ ಸಮಾಜ, ಜನ-ಮಾನಸ ವಿಚಾರಸರಣಿ ಇವುಗಳನ್ನೆಲ್ಲ ತಮ್ಮದಾಗಿಸಿಕೊಂಡರು. ಕಥಾ ರಚನೆಯಲ್ಲಿ ಬಳಸಿಕೊಂಡರು.ಇದರಿಂದಾಗಿಯೇ ವಿಭಿನ್ನವಾದ ಸಾಹಿತ್ಯ ನಮಗೆ ದೊರೆಯಿತು.

ಇಂದಿನ ಮರಾಠಿ ಲೇಖಕಿಯರಲ್ಲೂ ನಾವು ಇದೇ ಗುಣವನ್ನು ಕಾಣುತ್ತೇವೆ. ಜತೆಗೆ ಹೆಚ್ಚು ಆಕ್ರಮಣಕಾರಿ ಪ್ರವೃತ್ತಿ ಹಾಗೂ ಬರವಣಿಗೆಯನ್ನು ರೂಢಿಸಿಕೊಂಡಿದ್ದಾರೆ. ಅವರ ಅನುಭವಕ್ಷೇತ್ರ ವಿಶಾಲವಾಗಿದೆ. ಅವರು ತಮ್ಮ ಅನುಭವಗಳನ್ನು ಕೇವಲ ತಮ್ಮ ನೆನಪುಗಳನ್ನಾಗಿರಿಸಿಕೊಳ್ಳದೇ ಕಂಡಂತೇ, ಅನುಭವಿಸಿದಂತೇ ಅಷ್ಟೇ ಸ್ಪಷ್ಟವಾಗಿ ನಿಖರ ಶಬ್ದಗಳಲ್ಲಿ ಪ್ರಕಟವಾಗಿ ಹೇಳಿದ್ದಾರೆ. ಶಬ್ದರೂಪ, ಭಾವರೂಪ ಕೊಟ್ಟು ಕಥೆಯಾಗಿಸಿದ್ದಾರೆ. ಸೂಕ್ಷ್ಮಗ್ರಾಹಿ ಮಹಿಳೆಯೊಬ್ಬಳು ಕಂಡ ವೈವಾಹಿಕ ಜೀವನದ ವಿವಿಧ ಹಂತಗಳಾಗಿರಲಿ, ಸಾಂಸಾರಿಕ ಚೌಕಟ್ಟಿನಲ್ಲಿ ಸಂಭವಿಸುತ್ತಿರುವ ಸ್ಥಿತ್ಯಂತರಗಳೇ ಆಗಿರಲಿ ಅವರ ಕಥಾವ್ಯಾಪ್ತಿಯಿಂದ ದೂರವಾಗಿಲ್ಲ. ಅಂತೆಯೇ ಮನೆಯಿಂದ ಹೊರಬಿದ್ದ ಮಹಿಳೆಯ ದ್ವಿಮುಖ ಸಂಘರ್ಷಗಳು ಕಾರ್ಯಕ್ಷೇತ್ರದಲ್ಲಿ ಸಹೋದ್ಯೋಗಿಗಳೊಂದಿಗಿನ ಸಂಬಂಧ-ಸಂಘರ್ಷಗಳು, ಗ್ರಾಮೀಣ ಮಹಿಳೆಯರ ತಮ್ಮವೇ ಆದ ಸಮಸ್ಯೆಗಳು ಕಥಾವಸ್ತುಗಳಾಗಿ ಬಂದಿವೆ.

ಇಂದಿನ ಮರಾಠಿ ಲೇಖಕಿಯರನ್ನು ಗಮನಿಸುತ್ತಾ ಹೋದಾಗ ಗೌರಿ ದೇಶಪಾಂಡೆ, ಸಾನಿಯಾ, ಆಶಾ ಬಗೆ, ಮೇಘನಾ ಪೇಠೆ, ಅರುಣಾ ಢೇರೆ, ಸುನೀತಿ ಆಫಳೆ, ಮಾಧುರಿ ಶಾನಭಾಗ, ಹೀಗೆ ಒಂದು ಪರಂಪರೆಯೇ ಕಣ್ಣ ಮುಂದೆ ನಿಲ್ಲುತ್ತದೆ. ಈ ಎಲ್ಲ ಲೇಖಕಿಯರು ಸಮಾಜವನ್ನು, ವ್ಯಕ್ತಿಯನ್ನು, ಅವರಿಬ್ಬರ ನಡುವಿನ ಸಂಬಂಧವನ್ನು ಹೆಣ್ಣಿನ ವಿಶಿಷ್ಟವಾದ ದೃಷ್ಟಿಕೋನದಿಂದ ಗ್ರಹಿಸಿ, ಆತ್ಮವಿಮರ್ಶೆಯನ್ನು ಮಾಡಿಕೊಳ್ಳುತ್ತಲೇ ಸಾಮಾಜಿಕ ರೀತಿ-ನೀತಿಗಳ ವಿಶ್ಲೇಷಣೆಗೆ ತೊಡಗುತ್ತಾರೆ. ಇದರಿಂದಾಗಿ ಅವರ ಕಥೆಗಳಿಗೊಂದು ವಿಶಿಷ್ಟ ಸ್ಥಾನ, ಮಹಿಳಾ ಕಥಾಲೋಕದಲ್ಲಿ ಕಾಣದಂತಹ ಆಕ್ರಮಕ ದೃಷ್ಟಿಕೋನ, ಜೀವನಶೈಲಿ, ಅಸಹಾಯಕತೆಯ ಪ್ರಸಂಗಗಳಲ್ಲಿ ತೋರಿದ ಧೈರ್ಯ, ಇವೆಲ್ಲ ಈ ಲೇಖಕಿಯರ ಕಥೆಗಳ ಜೀವಾಳವಾಗಿವೆ. ಆದ್ದರಿಂದಲೇ ಇಂತಹ ಒಂದು ಹೊಸ ಚಿಂತನೆಯನ್ನು ಕನ್ನಡಕ್ಕೂ ಪರಿಚಯಿಸಬೇಕು ಎನ್ನುವ ಉದ್ದೇಶದಿಂದ ಅನೇಕ ಕಥೆಗಳು ಅನುವಾದಗೊಂಡಿವೆ. (ಸುಮಾರು ಐವತ್ತಕ್ಕೂ ಹೆಚ್ಚು) ಕಥೆಗಳು ಬಿಡಿಬಿಡಿಯಾಗಿ ಮಾಸಪತ್ರಿಕೆ, ದೀಪಾವಳಿ ಸಂಚಿಕೆ, ಸಂಪಾದಿತ ಪುಸ್ತಕರೂಪದಲ್ಲಿ ಪ್ರಕಟವಾಗಿವೆ. ಅವುಗಳನ್ನು ಒಟ್ಟುಗೂಡಿಸುವದೂ ಕಠಿಣ. ದೊರೆತ ಕೆಲವು ಕಥೆಗಳು ಹೇಗೆ ಕನ್ನಡದ ಜಾಯಮಾನದಿಂದ ಬೇರೆಯಾಗಿ ನಿಲ್ಲುತ್ತವೆ? ಅವುಗಳ ವೈಶಿಷ್ಟ್ಯಗಳೇನು? ಎನ್ನುವುದನ್ನು ತಿಳಿದುಕೊಳ್ಳೋಣ.

೧೯೮೬ರಲ್ಲಿ ಡಾ। ಎಸ್.ಪಿ. ಪಾಟೀಲರು ಅನುವಾದಿಸಿದ ಸುನೀತಿ ಆಫಳೆಯವರ ಕಥೆಗಳನ್ನು ಓದುತ್ತಿದ್ದಂತೆ ಸಂಕೀರ್ಣವಾದ ಪ್ರಪಂಚವೊಂದನ್ನು ಪ್ರವೇಶಿಸಿದ ಅನುಭವವಾಗುತ್ತದೆ. ಹೆಣ್ಣಿನ ಮಾನಸಿಕ ಸೂಕ್ಷ್ಮಗಳ ಹಿಂದಿರುವ ನೋವು ಸ್ಥಾಯಿಭಾವವಾಗಿರುವ ಅವರ ಕಥೆಗಳು ವೈಯಕ್ತಿಕ, ಕೌಟುಂಬಿಕ ಹಾಗೂ ಸಾಮಾಜಿಕ

ಸ್ತರದಲ್ಲಿ ಹುಟ್ಟಿಕೊಳ್ಳುವ ಸಮಸ್ಯೆಗಳನ್ನು ವಿಶ್ಲೇಷಿಸುತ್ತವೆ. ಯಾವುದೇ ಉದ್ವೇಗ, ಆವೇಶಕ್ಕೊಳಗಾಗದೇ ವಾಸ್ತವಿಕತೆಯ ಚಿತ್ರಣವಿರುವ ಬರವಣಿಗೆಯಿಂದ ಆಯಾ ಸಂದರ್ಭದ ಸೂಕ್ಷ್ಮಗಳು ಕಾಣಿಸಿಕೊಳ್ಳುವದು ಸಾಧ್ಯವಾಗಿದೆ. 'ಅತಿಥಿ' ಯ ಮಿಸೆಸ್ ಜೋಶಿ, 'ಬಲಿ' ಯ ಪಾರ್ವತಿ, 'ಹೊಸಚಿತ್ರ'ದ ತಾರಾ ಹಾಗೂ ಅವಳ ಗೆಳತಿ, 'ನೆಲಮನೆ' ಯ ಕಥಾನಾಯಕಿ ಹಾಗೂ ಅವಳ ಮಗಳು ನಂದಾ, ಇವರೆಲ್ಲ ನಮ್ಮ-ನಿಮ್ಮ ನಡುವೇ ಇದ್ದರೂ, ನಮ್ಮೆಲ್ಲರ ಬದುಕಿನ ಸಮಸ್ಯೆಗಳು ಅವರ ಸಮಸ್ಯೆಗಳೇ ಆಗಿದ್ದರೂ ಅವುಗಳಿಂದ ಹೊರ ಬರಲು ಅವರು ಆರಿಸಿಕೊಂಡ ದಾರಿ ಅವರನ್ನು ಬೇರೆ ಪಾತಳಿಯಲ್ಲಿ ನಿಲ್ಲಿಸುತ್ತದೆ. ಲೇಖಕಿಯ ರಚನಾತ್ಮಕ ಶೈಲಿ, ಪಾತ್ರಗಳ ಆತ್ಮವಿಶ್ಲೇಷಣೆ ವೈಶಿಷ್ಟ್ಯಪೂರ್ಣವಾಗಿದೆ.

'ಅತಿಥಿ' ಕಥೆಯ ಕಥಾನಾಯಕಿ, ಸೊಸೆ, ಪತ್ನಿ, ಮೂರು ಮಕ್ಕಳ ತಾಯಿ, ಇದು ಕೌಟುಂಬಿಕ ಹಿನ್ನೆಲೆಯಾದರೆ, ಸಾಮಾಜಿಕವಾಗಿ ಅವಳು ಕಾಲೇಜೊಂದರಲ್ಲಿ ಪ್ರಾಧ್ಯಾಪಕಿ, ಹಾಸ್ಟೆಲ್ ವಾರ್ಡನ್ ಕೂಡ. ಕಾಲೇಜಿನಲ್ಲಿ ಹಾಸ್ಟೆಲಿನಲ್ಲಿ, ಅವಳಿಲ್ಲದೇ ಒಂದೆಲೆ ಅಲುಗುತ್ತಿರಲಿಲ್ಲ. ಆದರೆ ಅತ್ತೆಯ ಕೈಗೆ ಮನೆ ಕೊಟ್ಟು ಹೋಗಿದ್ದರಿಂದ ಅನೇಕ ಬದಲಾವಣೆಗಳು. ಮಕ್ಕಳೂ ಅಜ್ಜಿಯನ್ನೇ ಹಚ್ಚಿಕೊಂಡಿದ್ದಾರೆ. ತನ್ನ ಮನೆಯಲ್ಲೇ ಪರಕೀಯಳಾಗಿದ್ದಾಳೆ. ಈ ಪರಕೀಯತೆಯ ಭಾವನೆ ನೋವು, ಆತಂಕಗಳನ್ನು ಉಂಟು ಮಾಡಿತು. ನಾನಿಲ್ಲಿ ಏನೂ ಅಲ್ಲ ಎನ್ನುವ ಭಾವ, 'ಅತಿಥಿ' ಎನ್ನುವ ಅರಿವು ದುಃಖವನ್ನು ತರುತ್ತದೆ. ಆದರೆ ಕೊನೆಗೆ ಮನೆಯಿಂದ ಹಾಸ್ಟೆಲಿಗಾಗಿ ಹೊರಬೀಳುವಾಗ ತನ್ನ ಕಣ್ಣಲ್ಲೂ ನೀರು ಬಂದಿಲ್ಲ. ಕಣ್ಣು ತೇವ ಕೂಡ ಆಗಿಲ್ಲ ಎನ್ನುವ ಅರಿವು ಅವಳಿಗೂ ಆಗುತ್ತದೆ. ಕಥೆಯ ಈ ತಿರುವು ಅನಿರೀಕ್ಷಿತವಲ್ಲದಿದ್ದರೂ ಓದುಗರಲ್ಲಿ ಆಶ್ಚರ್ಯ ಉಂಟು ಮಾಡುತ್ತದೆ ಎನ್ನುವುದರಲ್ಲಿ ಸಂಶಯವಿಲ್ಲ. ಮಿಸೆಸ್ ಜೋಶಿಯ ಸ್ಥಾನದಲ್ಲಿದ್ದ ಸಾಮಾನ್ಯ ಸ್ತ್ರೀಯೊಬ್ಬಳು ಸಂಸಾರ, ಪತಿ, ಮಕ್ಕಳೇ ತನ್ನ ಜೀವನ ಎನ್ನಬಹುದು. ಆದರೆ ಮನೆಯವರು ತನ್ನನ್ನು ಒಪ್ಪಿಕೊಳ್ಳದೇ ಇದ್ದಾಗ, ಆ ಸಂಪೂರ್ಣತೆಯನ್ನು ಪಡೆಯಲು ಬೇರೊಂದು ಮಾರ್ಗವನ್ನು ಕ್ರಮಿಸಿದ ಮಿಸೆಸ್ ಜೋಶಿ ವಿಶೇಷ ವ್ಯಕ್ತಿಯಾಗಿ ಹೊರಹೊಮ್ಮುತ್ತಾಳೆ.

ಸುನೀತಿಯವರ ಇನ್ನೊಂದು ಕಥೆ 'ವ್ಯಾಪಾರ' ಸ್ತ್ರೀಯರದಲ್ಲದ ಕ್ಷೇತ್ರವೆಂದು ಹೇಳಲ್ಪಡುವ ಪೌರೋಹಿತ್ಯ (ಇಂದು ಮಹಿಳೆಯರೂ ಅದರಲ್ಲಿ ತೊಡಗಿಸಿಕೊಂಡಿದ್ದಾರೆ ಆ ಮಾತು ಬೇರೆ. ಆದರೆ ಕಥೆಯಲ್ಲಿ ನಡೆಯುವಂತಲ್ಲ ಎನ್ನುವದೂ ಅಷ್ಟೇ ಸತ್ಯ). ಅದರ ವಿಕಾರ ಮುಖವನ್ನು ತೋರಿಸುವಂತಹ ಕಥೆ 'ವ್ಯಾಪಾರ'. ಅಂತುಭಟ್ಟ ಪೌರೋಹಿತ್ಯವನ್ನು ಅವಲಂಬಿಸಿ ಜೀವನ ಸಾಗಿಸುತ್ತಿದ್ದ ಬ್ರಾಹ್ಮಣ. ಸ್ವಭಾವದಿಂದ ಕೆಟ್ಟವನಲ್ಲ, ಇತರರಿಗೆ ಕೆಡಕು ಬಯಸುವವನೂ ಅಲ್ಲ. ಆದರೆ ಗಳಿಕೆಗೆ, ಅದೂ ಹೆಚ್ಚಿನ ಗಳಿಕೆಗೆ ಅಡ್ಡದಾರಿ ಹಿಡಿದವ, ದಾನದಲ್ಲಿ ಬಂದ ಸೀರೆ, ವಸ್ತ್ರ, ತೆಂಗಿನಕಾಯಿ, ವಸ್ತುಗಳನ್ನು ಮಾರಿಕೊಳ್ಳುತ್ತಿದ್ದ. ಊಟಕ್ಕೆ ಮುತ್ತೈದೆಯಾಗಿ ತನಗೆ ಬೇಕಾದವರನ್ನೇ ಕರೆಯುವದು. ಅವರಿಗೆ ದೊರೆತ ದಾನವನ್ನು ಕಡಿಮೆ ಹಣ ಕೊಟ್ಟು ಕೊಂಡುಕೊಳ್ಳುವದು.ಇಷ್ಟೇ ಅಲ್ಲ ನೀನು ಕಡಿಮೆ ದುಡ್ಡು ಇಸಿದುಕೊಳ್ಳುತ್ತಿಯಾ! ಹಾಗಾದರೆ ಮುಂದಿನ ಸಲ ನೀನೇ ಬಾ, ಎನ್ನುವದು ಈ ವ್ಯಾಪಾರೀ ಬುದ್ಧಿ ಅವನದು. ಜನರ ಶ್ರದ್ಧೆ, ವಿಶ್ವಾಸಗಳನ್ನು ತನ್ನ ಹಿತಕ್ಕಾಗಿ ಬಳಸಿಕೊಳ್ಳುವವ. ಹೆಂಡತಿಯನ್ನು ಚೆನ್ನಾಗಿ ನೋಡಿಕೊಳ್ಳುತ್ತಾನೆ. ಆದರೆ ಆ

ಹೆಂಡತಿ ಕೂಡ ಈಗೀಗ ದಿನಾಲೂ ಶ್ರಾದ್ಧದ ಮನೆ, ಮದುವೆ ಮನೆಗಳಲ್ಲಿ ಜಿಲೇಬಿ, ಬಟಾಟಿ ಪಲ್ಯಾ ತಿಂದು ಬೇಸತ್ತಿದ್ದಾಳೆ. ಗಂಡನ ನಾಲಿಗೆಗೆ ರುಚಿಸುವಂತೆ ಉಳ್ಳಾಗಡ್ಡಿ ಪಲ್ಯೆ ಮಾಡಿ ಬಡಿಸುತ್ತಾಳೆ. ಅದನ್ನು ತಿಂದು ವಾಸನೆ ಬರಬಾರದೆಂದು ಬಡೀಶೇಪು ತಿಂದು, ಭಾಗವತರ ಮನೆಯಲ್ಲಿ ಮನುಮಂತನಿಗೆ ಅಭಿಷೇಕ ಮಾಡಲು ಹೊರಡುತ್ತಾನೆ. ಮಕ್ಕಳಿಲ್ಲವೆಂದು ಹೆಂಡತಿ ದುಃಖ ಪಡುತ್ತಿದ್ದಾಗ ದಾನದ ಸೀರೆಯನ್ನು ಮಾರಿ ಬಂದ ನೂರು ರೂಪಾಯಿಗಳನ್ನು ಡಾಕ್ಟರಬಾಯಿಗೆ ಕೊಟ್ಟು ಉಪಚಾರ ಮಾಡಿಸುತ್ತೇನೆ ಎಂದು ಹೆಂಡತಿಗೆ ಸಮಾಧಾನ ಹೇಳುತ್ತಾನೆ.

ಜನ ಶ್ರದ್ಧೆಯಿಂದ ನಡೆಸುವ ವಿಧಿ-ವಿಧಾನಗಳಲ್ಲೂ ತನ್ನ ವ್ಯಾಪಾರೀ ಬುದ್ಧಿಯನ್ನು ತೋರಿದ ಅಂತುಭಟ್ಟನ ಪಾತ್ರವನ್ನು ಹುಟ್ಟು ಹಾಕಿದ ಸುನೀತಿಯವರ ನಿರೀಕ್ಷಣಾಕ್ಷಮತೆಯನ್ನು ಮೆಚ್ಚಬೇಕು. ಇಂತಹ ವಿಷಯಗಳನ್ನು ಕಂಡೂ ಕಾಣದಂತಿದ್ದ, ತಿಳಿದೂ ಅರಿಯದಂತಿದ್ದ ಸಮಾಜಕ್ಕೆ ಇಂತಹ ವ್ಯಾಪಾರವೊಂದನ್ನು ಪರಿಚಯಿಸಿದ್ದಾರೆ. ಪುರುಷನಂತೆ ಯೋಚಿಸಿ ಆ ಪಾತ್ರಕ್ಕೆ ಜೀವ ತುಂಬಿದ ಸುನೀತಿಯವರ ರಚನಾಕೌಶಲ್ಯ ಮೆಚ್ಚಬೇಕಾದುದು, ಕನ್ನಡಕ್ಕೆ ಅನುವಾದಗೊಂಡ ಅವರ ಇತರ ಕಥೆಗಳು 'ಹೊಸಚಿತ್ರ' 'ಬಲಿ' 'ನೆಲಮನೆ', ಪ್ರತಿಯೊಂದೂ ವಿಶಿಷ್ಟವಾದ ಕಥಾನಕವನ್ನು ಹೊಂದಿವೆ.

ಶ್ರೀಯುತ ಚಂದ್ರಕಾಂತ ಪೊಕಳೆಯುವರು, ಅನುವಾದಿಸಿದ ಕಮಲ ದೇಸಾಯಿಯವರ ಕಥೆ 'ಸ್ವಪ್ನಕೋಶ', 'ಆಧುನಿಕ ಮರಾಠಿ ಕಥೆಗಳು' ಎನ್ನುವ ಕಥಾ ಸಂಗ್ರಹದಲ್ಲಿದೆ. ಮಹಿಳಾ ಸಾಹಿತ್ಯವೆಂದರೆ 'ಅಡುಗೆಮನೆ ಸಾಹಿತ್ಯ' ಎನ್ನುವ ಮಾತು ಇಂದು ಸುಳ್ಳಾಗಿದೆ ಎನ್ನುವುದನ್ನು ಪ್ರತಿಪಾದಿಸುವ ಕಥೆ. ವಿಶಿಷ್ಟವಾದ ಕಥಾನಕ ಹೊಂದಿದೆ. ವಾಸುದೇವ ಅನಂತನಿಂದ ಆರಂಭವಾಗುವ ಕಥೆ ಅವನ ಆಫೀಸಿನಲ್ಲೆಲ್ಲ ಸುತ್ತಾಡಿ ನಲವಡೆ, ನಮೂತಾಯಿ, ಉಮಾಕಾಕಿ, ಕಿವಿ ಸೋರುವ ಹುಡುಗ, ಎಲ್ಲರನ್ನೂ ಪರಿಚಯಿಸುತ್ತ ಕೊನೆಗೆ ತಂಗಿ ಋತಾಳ ಬಳಿ ಬರುತ್ತದೆ. ವಾಸುದೇವ ಅನಂತನಿಗೆ ತಂಗಿ ಎಂದರೆ ಸರ್ವಗುಣಸಂಪನ್ನೆ. ಎಲ್ಲಿಯೂ ಒಳ್ಳೆಯ ವರನ ಮಾತು ನಡೆದೊಡನೆ ತನ್ನ ತಂಗಿಗಾಗಿ ಕನಸು ಕಾಣುತ್ತಾನೆ. ಆದರೆ ಋತಾಳ ಮನಸ್ಸು... ಬಾಲ್ಯದ ಅಪ್ರಾಪ್ತ ವಯಸ್ಸಿನಲ್ಲಿ ಕೆಲ ನೋಡಬಾರದ ದೃಶ್ಯಗಳನ್ನು ಕಂಡ ಅವಳು ಸ್ತ್ರೀ-ಪುರುಷರ ಸಂಬಂಧದ ಬಗ್ಗೆ ತಿರಸ್ಕಾರದ ಭಾವನೆಯನ್ನು ಬೆಳೆಸಿಕೊಂಡು ಬಂದಿದ್ದಾಳೆ. ತಂದೆಯ ಬಗೆಗೂ ಗೌರವ ಇಲ್ಲ ಅವಳಿಗೆ. ದಾದಾ, ಅಂದರೆ ತಂದೆ ತೀರಿಕೊಂಡಾಗ ಕೂಡ ಯಾವುದೇ ಮನೋಭಾವ ವ್ಯಕ್ತಪಡಿಸದ ಅವಳು ತನ್ನನ್ನು ನೋಡಲು ಬಂದ ವರ ತನ್ನನ್ನು ತಿರಸ್ಕರಿಸಿದಾಗ ಒಂದು ರೀತಿಯ ವಿಚಿತ್ರ ಸಮಾಧಾನ ಪಡುತ್ತಾಳೆ. ವಾಸುದೇವ ಅನಂತ ಮನೆಯಲ್ಲಿನ ಒಂದು ಕೋಣೆಯನ್ನು ಬಾಡಿಗೆಗೆ ಕೊಟ್ಟಿದ್ದಾನೆ. ಅಲ್ಲಿ ಇರಲು ಬಂದ ಮನೋರಮಾಳೊಂದಿಗೆ ವಿಶೇಷ ಸ್ನೇಹ ಋತಾಳಿಗೆ. ಆ ಸ್ನೇಹಕ್ಕೊಂದು ಬೇರೆ ರೂಪ ಕೊಡಲು ಬಯಸುತ್ತಾಳೆ. ಆದರೆ ಮನೋರಮಾ ಯೋಗೇಂದ್ರನಾಥನನ್ನು ಪ್ರೀತಿಸುತ್ತಿದ್ದಾಳೆ. ಅವನ ಪತ್ರದ ದಾರಿ ಕಾಯುತ್ತಿದ್ದಾಳೆ. ಅವನಿಂದ ಬಂದ ಪತ್ರವನ್ನು ಮುಚ್ಚಿಟ್ಟ ಋತಾ ಮನೋರಮಾಳ ಮೇಲೆ ತನ್ನದೇ ಹಕ್ಕು ಚಲಾಯಿಸಲು ನೋಡುತ್ತಾಳೆ. ಋತಾಳ ಸ್ಪರ್ಶದಿಂದ ಅಸ್ವಸ್ಥಳಾಗುತ್ತಿದ್ದ ಮನೋರಮಾಗೆ ಒಂದು ರಾತ್ರಿ ಋತಾಳ ಅಪ್ಪುಗೆಯಲ್ಲಿ

ಕಳೆಯುವ ಪ್ರಸಂಗ ಬರುತ್ತದೆ. ಯೋಗೇನ್ ಎಂದು ತಿಳಿದು ಋತಾಳನ್ನು ಅಪ್ಪಿ ಮಲಗಿದ ಮನೋರಮಾ ಎಚ್ಚರಗೊಂಡಾಗ ಅವಳ ನಡವಳಿಕೆಯಿಂದ ಅಸಹ್ಯಗೊಂಡು ಮನೆ ಬಿಟ್ಟು ಓಡಿ ಹೋಗುತ್ತಾಳೆ. ಇದರಿಂದ ಅಪಮಾನಿತಳಾದ ಋತಾ ಕತ್ತು ಕುಯ್ದುಕೊಂಡು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಸತ್ಯಸಂಗತಿಯನ್ನು ಅರಿಯದ ಋತಾಳ ಅತ್ತಿಗೆ ಮನೋರಮಾಳನ್ನೇ ಈ ಕೃತ್ಯಕ್ಕೆ ಕಾರಣವೆಂದು ಭಾವಿಸಿದಾಗ ಕಥೆ ದುರಂತದಲ್ಲಿಯೇ ಮುಕ್ತಾಯವಾಗುತ್ತದೆ.

ಕನ್ನಡಕ್ಕೆ ತೀರ ಹೊಸದಾದ ವಿಷಯ ಸಲಿಂಗರತಿ. ಈ ವಿಷಯಾಧಾರಿತ ಕಥೆಗಳು ಕನ್ನಡದಲ್ಲಿ ತೀರ ಕಡಿಮೆ. ಪಾಶ್ಚಾತ್ಯರಲ್ಲಂತೂ ಇದನ್ನೊಂದು ಜೀವನಪದ್ಧತಿ ಎಂದು ಪರಿಗಣಿಸಿ, ಸಮಾಜ ಕೂಡ ಅದನ್ನು ಸ್ವೀಕರಿಸಿದೆ. ಆದರೆ ಭಾರತೀಯರಲ್ಲಿ ತೀರ 'ಅಸ್ಪೃಶ್ಯ' ಸಂಗತಿಯಾದ ಈ ವಿಷಯ ಕುರಿತು ಸಾಹಿತ್ಯರಚನೆಯ ಧೈರ್ಯ ತೋರಿದವರು ಕಡಿಮೆ.ಮಹಿಳೆಯರಲ್ಲಿ ಈ ಧೈರ್ಯ ತೋರಿ ಕಥೆಗೆ ಸಲಿಂಗರತಿಯಂತಹ ವಿಷಯವನ್ನು ಆರಿಸಿಕೊಂಡ ಕಮಲಾ ದೇಸಾಯಿ ಅಭಿನಂದನಾರ್ಹರು. ಕಥೆಯಲ್ಲಿ ವಿಷಯ ಎಲ್ಲಿಯೂ ಎಲ್ಲೆ ಮೀರದೆ ಋತಾಳ, ಮನೋರಮಾಳ ಇಬ್ಬರ ಮನಸ್ಸಿನ ತೊಳಲಾಟವಾಗಿಯೇ ಬಂದಿದೆ 'ಗಂಡಸು ತುಂಬಾ ಹೊಲಸು. ಥೆಂಡಾ ಮೃಗದಂತೆ' ಎನ್ನುವ ಭಾವವನ್ನು ಬೆಳೆಸಿಕೊಂಡು ಬಂದ ಋತಾ ಮನೂತಾಯಿಯ ಕೋಣೆ ಸಿಂಗರಿಸುತ್ತಾಳೆ. ಅವಳ ಸೀರೆ ಉಡುತ್ತಾಳೆ. ರಾತ್ರಿ ಅಲ್ಲೇ ಮಲಗಲು ಹೋಗುತ್ತಾಳೆ. ಇಂತಹ ಋತಾಳ ಸ್ಪರ್ಶದಿಂದ ದೂರವೇ ಉಳಿಯುವ, ಕೋಣೆಗೆ ಹೋಗಲೂ ಹೆದರುವ ಮನೂತಾಯಿಯ ಪಾತ್ರ ಕೂಡ ವಾಸ್ತವಿಕತೆಯಿಂದ ಕೂಡಿದ್ದು, ಪ್ರೀತಿಯಲ್ಲಿ ಮಿಂದವಳಿಗೆ ಋತಾಳ ಈ ವರ್ತನೆ ಅಸಹ್ಯ ತಂದದ್ದು ಆಶ್ಚರ್ಯವಲ್ಲ.

ಹೀಗೆ ಸಮಾಜದ ಅನೇಕ ಮುಖಗಳನ್ನು ಹಿಡಿದಿಡಬಲ್ಲ ಕಥೆ ರಚಿಸಿದ್ದಾರೆ ಕಮಲಾ ದೇಸಾಯಿ. 'ಸ್ವಪ್ನಕೋಶ' ದಲ್ಲಿ ಹೊಸ ರೀತಿಯ, ಸ್ತ್ರೀಯ ಬೇರೊಂದು ರೂಪವನ್ನು ತೋರಿಸಿದ್ದಾರೆ. ಇಂತಹ ಕಥೆ ಕನ್ನಡಕ್ಕೊಂದು ಕೊಡುಗೆ. ವಿಸಂಗತಿಯನ್ನು ಕಥೆಯನ್ನಾಗಿ ಮಾಡಬಹುದು ಎನ್ನುವುದಕ್ಕೆ ಇದೊಂದು ಉತ್ತಮ ಉದಾಹರಣೆ.

ಹೆಣ್ಣಿನ ಜೀವನದ ವಿವಿಧ ಪದರುಗಳನ್ನು ಬಿಡಿಸಿ ಬಿಡಿಸಿ ಸಾಮಾಜಿಕ, ಮಾನಸಿಕ, ಸಾಂಸ್ಕೃತಿಕ ಹಾಗೂ ತಾತ್ವಿಕ ಪಾತಳಿಗಳಲ್ಲಿ ಹೆಣ್ಣನ್ನು ಅಭ್ಯಸಿಸಿ, ಅಭಿವ್ಯಕ್ತಿಸಿದ ದಿಟ್ಟತನ ಗೌರಿ ದೇಶಪಾಂಡೆಯವರದು. ಮೂಲತಃ ಪುಣೆಯವರಾದ ಗೌರಿ ದೇಶಪಾಂಡೆ ಪುಣೆ ವಿಶ್ವವಿದ್ಯಾಲಯದ ನಿವೃತ್ತ ಆಂಗ್ಲ ಪ್ರಾಧ್ಯಾಪಕಿ. ಜಗತ್ತಿನ ಮೂಲೆ ಮೂಲೆಗಳನ್ನು ಸುತ್ತಿದ ಗೌರಿಯವರು ತಮ್ಮ ಅಲ್ಲಿನ ಅನುಭವಗಳನ್ನು ಕಥಾ ರೂಪದಲ್ಲಿ ಪಾತ್ರಗಳ ರೂಪದಲ್ಲಿ ತಮ್ಮ ಕಥೆ-ಕಾದಂಬರಿಗಳಲ್ಲಿ ಬಳಸಿಕೊಂಡಿದ್ದಾರೆ. ಕೌಟುಂಬಿಕವಾಗಿದ್ದರೂ ಬೇಡವಾದ ಸಂಬಂಧಗಳು ಹೊರೆಯಾಗುತ್ತವೆ. ಆದರೆ ಸ್ನೇಹ ಎಲ್ಲಕ್ಕೂ ಮಿಗಿಲಾದುದು, ಎನ್ನುವುದನ್ನು ಪ್ರತಿಪಾದಿಸುತ್ತಾರೆ. ಆ ಸ್ನೇಹ ಹೆಣ್ಣು-ಹೆಣ್ಣಿನ ನಡುವಿರಬಹುದು ಗಂಡು-ಗಂಡಿನದಾಗಿರಬಹುದು. ಅಥವಾ ಹೆಣ್ಣು-ಗಂಡಿನ ನಡುವೆಯೂ ಇರಬಹುದು. ಈ ಒಂದು ದೃಷ್ಟಿಕೋನವನ್ನಿಟ್ಟುಕೊಂಡ ಅವರ ಕಥಾ ನಾಯಕಿಯರು ದಿಟ್ಟೆಯರು, ಸಂಕೋಚ ಸ್ವಭಾವದವರಲ್ಲ. ದೈಹಿಕ ದಾಹ ಸ್ತ್ರೀಯರಿಗೂ ಅಷ್ಟೇ ತೀವ್ರತೆಯಿಂದ ಇದೆ, ಎನ್ನುವುದನ್ನು

ಪ್ರತಿಪಾದಿಸಿದ ಗೌರಿಯವರು ಬರೆದಂತಹ ಕಥೆ-ಕಾದಂಬರಿಗಳು ವೈಶಿಷ್ಟ್ಯಪೂರ್ಣವಾಗಿವೆ. ಮಡಿವಂತಿಕೆಯ ಜನರಿಗೆ ಅಷ್ಟೊಂದು ಸೇರಿಕೆಯಾಗದೇ ಹೋಗಬಹುದು. ಆದರೆ ವಾಸ್ತವತೆಯನ್ನು ನಿರಾಕರಿಸಲು ಬರುವುದಿಲ್ಲ. ಗೌರಿಯವರ ಸ್ತ್ರೀಪಾತ್ರಗಳು ಎಂದಿಗೂ ನಿರಾಶೆ, ಹತಾಶೆ ಹೊಂದಿದವರಲ್ಲ. ವಿಧಿಯನ್ನು ನಂಬಿ ಬದುಕಿದವರೂ ಅಲ್ಲ. ವಿವಾಹ ಬಾಹ್ಯಸಂಬಂಧವನ್ನು ಹೊಂದಿದರೂ ನೈತಿಕತೆ-ಅನೈತಿಕತೆಯ ದ್ವಂದ್ವ ಅವರನ್ನು ಕಾಡುವುದಿಲ್ಲ. ಅದನ್ನು ಸಹಜವೆಂಬತೆ ತೆಗೆದುಕೊಂಡು ಬಾಳನ್ನು ಮುಂದುವರಿಸುತ್ತಾರೆ. ಇತರರ ಸಂಬಂಧದಲ್ಲಿ ಮೂಗು ತೂರುವುದೂ ಇಲ್ಲ. ಹೀಗೆ ಆಧುನಿಕ ಹೆಣ್ಣಿನ ಬದುಕಿನ ವಿವಿಧ ಆಯಾಮಗಳನ್ನು ಗುರುತಿಸಿ, ಅವುಗಳಿಗೆ ಶಬ್ದರೂಪ, ಭಾವರೂಪ ಕೊಟ್ಟ ಗೌರಿಯವರ ಕಥೆ-ಕಾದಂಬರಿಗಳು ಅಪರೂಪವಾದವು.

"ಒಮ್ಮೆ ಏನಾಯಿತೆಂದರೆ..." ವಿದೇಶದಲ್ಲಿ ನಡೆಯುವ ಕಥೆ. ಮೊದಮೊದಲು ತಮಾಷೆಯಿಂದ ಆರಂಭವಾಗಿ, ಪತಿ-ಪತ್ನಿಯಾದವರು ಅಪರಿಚಿತರಂತೆ ಭೇಟಿಯಾದಾಗ ಅವರ ಸಂಬಂಧಗಳು ಹೇಗಾಗಬಹುದು? ಎನ್ನುವ ವಿಚಾರವನ್ನು ಮುಂದುವರಿಸುತ್ತ ಕೊನೆಗೆ ಪತ್ನಿ ತಾನು ಕಂಡದ್ದು, ಅನುಭವಿಸಿದ್ದು ಕನಸೇ? ಎಂದು ತನ್ನನ್ನು ತಾನೇ ಪ್ರಶ್ನಿಸಿಕೊಳ್ಳುವಲ್ಲಿ ಕಥೆಯ ಸಾರ ಅಡಗಿದೆ. ಪ್ರಥಮ ಬಾರಿಗೆ ಭೇಟಿಯಾದವರಂತೆ ನಟಿಸುತ್ತ, ಬಹುಶಃ ಮೊದಲ ಬಾರಿ ಫ್ರೀಯಾಗಿ ಮಾತನಾಡುತ್ತ ಹರಟೆ ಹೊಡೆಯುತ್ತಾರೆ. ರೆಸ್ಟೊರಾಗೆ ಹೋಗಿ ಕಾಫೀ ಕುಡಿಯುತ್ತಾರೆ. ಲಂಚ್ ಮಾಡುತ್ತಾರೆ. ಅವಳು ಅವನನ್ನು ಮನೆಗೆ ಆಹ್ವಾನಿಸುತ್ತಾಳೆ. ಅಲ್ಲಿ ಕೂಡ ಅಪರಿಚಿತರಂತೆಯೇ ಇದ್ದು ಒಂದಾಗುತ್ತಾರೆ. ತನ್ನ ದಾಂಪತ್ಯಜೀವನದಲ್ಲಿ ಅಲ್ಲಿಯವರೆಗೆ ಅಂತಹ ಸುಖವನ್ನೆಂದೂ ಅನುಭವಿಸದೇ ಇದ್ದ ಅವಳು ಆ ತೀವ್ರತೆಯಿಂದ ಚಕಿತಳಾಗುತ್ತಾಳೆ. ಉತ್ಕಟತೆಯಿಂದ ಕಣ್ಣಲ್ಲಿ ನೀರು ಬರುತ್ತದೆ. ಅವನ ಅಪ್ಪುಗೆಯಲ್ಲಿರುವಾಗಲೇ ಇದು ಕನಸೇ? ಸತ್ಯವೇ? ಎನ್ನುವ ಸಂಶಯ ಅವಳ ಮನದಲ್ಲಿ.....!

ಗೌರಿ ದೇಶಪಾಂಡೆಯವರ ಕಾದಂಬರಿಗಳು ಅವರ ಸಣ್ಣ ಕಥೆಗಳಿಗಿಂತ ಹೆಚ್ಚು ಸತ್ವಶಾಲಿಯಾಗಿ ಹೊರ ಹೊಮ್ಮಿವೆ. ಆದರೂ ಅವರ ಕಥೆಗಳಲ್ಲಿ ಸಾಮಾಜಿಕ ಮೌಲ್ಯ ವ್ಯವಸ್ಥೆಯ ಬಗೆಗೆ ಬಂಡಾಯದ ಧೋರಣೆಯುಳ್ಳ ಇವರ ನಾಯಕಿಯರು ಮಾನಸಿಕ ಅನ್ವೇಷಣೆಯಲ್ಲಿ ತೊಡಗಿದವರು. ಈ ಪ್ರಕ್ರಿಯೆಯಲ್ಲಿ ಸಾಂಪ್ರದಾಯಿಕ ಮಡಿವಂತಿಕೆ, ಸಂಕೋಚವನ್ನು ತೋರಿಸುವುದಿಲ್ಲ. ಮನಸ್ಸಿನಂತೆ ನಡೆಯುವಾಗ ನೈತಿಕತೆಯ ವಿಚಾರ ಸಂಕೋಲೆಯಾಗಿ ಅವರನ್ನೆಂದೂ ತಡೆಯುವುದಿಲ್ಲ. ಇದರಿಂದಾಗಿ ಅವರ ಸ್ತ್ರೀಪಾತ್ರಗಳು ಎದ್ದು ಕಾಣುತ್ತವೆ. ಸ್ವಾತಂತ್ರ್ಯ ಹಾಗೂ ಮುಕ್ತ ಆತ್ಮಪ್ರೇರಣೆಯನ್ನು ಅತ್ಯಂತ ದಿಟ್ಟತನದಿಂದ ಸ್ವೀಕರಿಸುವ ಅವರ ಸ್ತ್ರೀ ಪಾತ್ರಗಳಾಗಲಿ, ಕಥಾಕೇಂದ್ರವಾಗಲಿ ಅನನ್ಯವಾದವು. ಅನುವಾದಕ್ಕೆ ಯೋಗ್ಯವಾಗಿವೆ.

ಇನ್ನೊರ್ವ ಮಹತ್ವದ ಲೇಖಕಿ ಸಾನಿಯಾ. ಅವರ ನೀಳ್ಗತೆಗಳು ಮಹಿಳೆಯ ಭಾವನಾತ್ಮಕ ಮನಸ್ಥಿತಿಯ ವಿಶಿಷ್ಟ ಚಿತ್ರಣವನ್ನು ಕೊಡುತ್ತವೆ. ಸುಶಿಕ್ಷಿತ, ದುಡಿಯುವ ಮಹಿಳೆಯ ವೈಯಕ್ತಿಕ ಸೂಕ್ಷ್ಮತೆಗಳು, ಪೂರ್ವ ನಿಶ್ಚಿತ ಸಿದ್ಧಾಂತಗಳಿಂದ ಅವಳ ಮೇಲಾಗುವ ಅನ್ಯಾಯ, ಅವಳು ಅವುಗಳನ್ನು ಎದುರಿಸಿದ ರೀತಿ, ಅವರ ಕಥೆಯಲ್ಲಿ ಮಹತ್ವದ

ಸ್ಥಾನ ಪಡೆಯುತ್ತವೆ. ಹೆಣ್ಣಿನ ದೇಹದಿಂದ ಆರಂಭಗೊಂಡ ಪ್ರವಾಸ ಭಾವನಾತ್ಮಕ, ಬೌದ್ಧಿಕ ವಿಕಾಸದ ವರೆಗೆ ಏರುತ್ತ ಹೋಗುವ ಹೆಣ್ಣಿನ ಸ್ಥಿತಿಯನ್ನು ತಮ್ಮ ಕಥೆ-ಕಾದಂಬರಿಗಳಲ್ಲಿ ಚಿತ್ರಿಸುತ್ತಾರೆ. ಅನೇಕ ಸ್ತ್ರೀಯರಿಗೆ ಹಲವು ಸಾಮಾಜಿಕ, ಸಾಂಸ್ಕೃತಿಕ ಅಥವಾ ಪುರುಷ ಅಹಂಕಾರದ ಬಂಧನದಿಂದಾಗಿ ತನ್ನನ್ನು ತಾನು ಬೌದ್ಧಿಕವಾಗಿ ಬೆಳೆಯುವ ಅಥವಾ ಇರುವ ಬುದ್ಧಿಯ ಸಮರ್ಪಕ ಉಪಯೋಗವನ್ನು ಮಾಡಿಕೊಳ್ಳುವ ಪೂರ್ಣ ಅವಕಾಶ ದೊರೆಯುವದಿಲ್ಲ. ಹಲವರು ಅದೇ ಸ್ಥಿತಿಯಲ್ಲಿ ಮುಂದುವರೆದರೆ, ಇನ್ನು ಕೆಲವರು ಸ್ವಪ್ರಯತ್ನದಿಂದ ಆ ಸಂಕೋಲೆಯೊಳಗಿಂದ ಬಿಡಿಸಿಕೊಂಡು ಸ್ವತಂತ್ರರಾಗುತ್ತಾರೆ, ಬೆಳೆಯುತ್ತಾರೆ.

ಇದೇ ರೀತಿಯ ಪಾತ್ರ ಚಿತ್ರಣದ ಕಥೆ ಸಾನಿಯಾರ "ಒಂದು ಹೆಜ್ಜೆ ಮುಂದೆ" ಹೆಸರೇ ಹೇಳುವಂತೆ ಸ್ತ್ರೀ ತನ್ನ ಸ್ವತ್ವವನ್ನು ಪ್ರತಿಪಾದಿಸಲು ಮುಂದಿಟ್ಟ ಹೆಜ್ಜೆ "ಭಾರ್ಯಾ ರೂಪವತೀ ಶತ್ರು", ಇದೊಂದು ಸಂಸ್ಕೃತದ ಪ್ರಸಿದ್ಧ ಮಾತು. ಇದೊಂದು 'ಭಾರ್ಯಾ ಬುದ್ಧಿಮತೀ ಶತ್ರು' ಎನ್ನುವ ಉಕ್ತಿ ಆಧುನಿಕ ಸ್ತ್ರೀಯನ್ನು ಹೇಗೆ ಸಂಕೊಲೆಯೊಳಗೆ ಬಂಧಿಸುತ್ತದೆ? ಹಾಗೂ ಮನಸ್ಸು ಮತ್ತು ಪ್ರಯತ್ನವಿದ್ದರೆ ಹೇಗೆ ಬಿಡಿಸಿಕೊಳ್ಳಬಹುದು ಎನ್ನುವದನ್ನು ಈ ಕಥೆ ಚಿತ್ರಿಸುತ್ತದೆ.

ನಗರದ ಪ್ರಸಿದ್ಧ ಆರ್ಕಿಟೆಕ್ಟ ವಿಶ್ವಾಸನ ಪತ್ನಿ ಊರ್ಮಿಳೆ ಕೂಡ ಒಳ್ಳೆಯ ವಾಸ್ತುತಜ್ಞೆ. ಮದುವೆಗೆ ಮೊದಲು ವಿಶ್ವಾಸನೊಂದಿಗೇ ಕೆಲಸ ಮಾಡುತ್ತಿದ್ದಳು. ಸಹೋದ್ಯೋಗಿಗಳ ಅಚ್ಚುಮೆಚ್ಚಿನವಳು. ಉತ್ತಮ ಭವಿಷ್ಯವಿದ್ದವಳು. ವಿಶ್ವಾಸನೊಂದಿಗೆ ಮದುವೆಯಾದೊಡನೆ ಮನೆ,ಮಗು, ಸಂಸಾರ ಎಂದು ಕೆಲಸ ಬಿಟ್ಟಳು. ತನ್ನನ್ನು ಸಂಸಾರದ ನೊಗಕ್ಕೆ ಹೇರಿಕೊಂಡಳು. ಪ್ರೀತಿಯ ಕೆಲಸವನ್ನು ಹಿಂದಕ್ಕಿಟ್ಟಳು. ಆದರೆ ಅವಳ ಈ ತ್ಯಾಗಕ್ಕೆ ದೊರೆತುದು ಏನು? ಪತಿ ಹೀಯಾಳಿಕೆ ನಿನಗೇನು ಬರುತ್ತದೆ? ನಿನ್ನಿಂದೇನಾಗುತ್ತದೆ? ಎನ್ನುವ ಮಾತುಗಳು. ಮಗನ ಮುಖ ನೋಡುತ್ತ ದಿನ ಕಳೆದ ಊರ್ಮಿಳೆಗೆ ಇನ್ನೊಂದು ಧಕ್ಕೆ, ಮಗ ಪ್ರಾಚಿಯನ್ನು ವಿವಾಹ ಮಾಡಿಕೊಂಡು ಬಂದ. ಮನೆಯಲ್ಲಿ ಯಾರಿಗೂ ಹೇಳದೇ ಕೇಳದೇ. ಅವಳು ಕೂಡ ವಾಸ್ತುತಜ್ಞೆ, ಆಧುನಿಕ ವಿಚಾರ, ಹೊಸ ತಂತ್ರಜ್ಞಾನದಿಂದಾಗಿ ವಿಶ್ವಾಸನ ಉದ್ಯೋಗ ಅಷ್ಟಕ್ಕಷ್ಟೇ ನಡೆದಿತ್ತು.ಆದರೆ ಪ್ರಾಚಿ ಈಗ ಮುಂಚೂಣಿಯಲ್ಲಿದ್ದ ಕಂಪನಿಗೆ ಭಾಗೀದಾರಳು. ಅವಳು ಊರ್ಮಿಳೆಯಲ್ಲಿ ಹುದುಗಿದ ಪ್ರತಿಭೆಗೆ ಬೆಳಕು ತೋರಿ, ಹೊಸದೊಂದು ಹೆಜ್ಜೆ ಇಡಲು ಪ್ರೇರೇಪಿಸುತ್ತಾಳೆ. ಊರ್ಮಿಳಾ ಒಂದು ಹೆಜ್ಜೆ ಮುಂದಿಟ್ಟಾಗ ಪತಿ ಏನೂ ಮಾಡದೇ, ಮಾತನಾಡದೇ ಸುಮ್ಮನೆ ಇರುತ್ತಾನೆ.

ಈ ಬಗೆಯ ಕಥೆಗಳು ಕನ್ನಡದಲ್ಲಿ ಬಂದಿವೆ. ಆದರೆ ಹಿನ್ನೆಲೆ ಮತ್ತು ಪಾತ್ರಗಳ ಬೆಳವಣಿಗೆಯ ಹೊಸ ರೂಪ ಇಲ್ಲಿ ಕಾಣಸಿಗುತ್ತದೆ. ನಾಲ್ಕೇ ಪಾತ್ರಗಳು. ಕಥಾವಸ್ತು ಸರಳವಾಗಿದ್ದರೂ ಕಾದಂಬರಿಯ ಪರಿಣಾಮವನ್ನು ಕೊಡುತ್ತ ಬೆಳೆಯುತ್ತದೆ. ಊರ್ಮಿಳೆಯ ಮನದ ತುಮುಲಗಳನ್ನು ಬಿಚ್ಚಿಟ್ಟಿದ್ದು ಸಾನಿಯಾರ ಸೂಕ್ಷ್ಮ ನಿರೀಕ್ಷಣಾಕ್ಷಮತೆಗೆ ಸಾಕ್ಷಿಯಾಗಿದೆ. ಮಹಿಳೆಯ ತುಡಿತ-ತುಮುಲಗಳನ್ನು ಗ್ರಹಿಸಿ, ಅವುಗಳಿಗೆ ಶಬ್ದ-ಭಾವ ರೂಪ ಕೊಡುವ ಕಲೆ ಸಾನಿಯಾರಿಗೆ ಚೆನ್ನಾಗಿ ಸಾಧಿಸಿದೆ.

ವಿವಾಹ ಬಾಹ್ಯ ಸಂಬಂಧಗಳು, ವಿವಾಹಪೂರ್ವ ಸಂಬಂಧಗಳು ನಮ್ಮ ಈ ನಾಗರಿಕ ಸಮಾಜದಲ್ಲಿ ಹುಬ್ಬು ಗಂಟಿಕ್ಕಿ ನೋಡುವ, ಸಹಿಸುವ ಸಂಬಂಧಗಳು. ನಾಗರಿಕ ಸಮಾಜದ ಒಪ್ಪಿಗೆ ಇಲ್ಲದ, ಆದರೂ ಇಂದು ಎಲ್ಲೆಡೆ ಕಂಡು ಬರುವ ಇಂತಹ ಸಂಬಂಧಗಳು ಸಾಹಿತ್ಯದಲ್ಲಿಯೂ ಸ್ಥಾನ ಪಡೆದವು. ಇದರೊಡನೆಯೇ ಪಾಶ್ಚಾತ್ಯರ ಇನ್ನೊಂದು ಕೊಡುಗೆ 'Live in' ಸಂಸ್ಕೃತಿ, ಯಾವುದೇ ಬಂಧನವಿಲ್ಲದೇ ಗಂಡು-ಹೆಣ್ಣು ಸ್ನೇಹಿತರಾಗಿ ಒಂದೆಡೆ ಇರುವ ಸಂಬಂಧ! ಈ ವಿಷಯವನ್ನಾಧರಿಸಿದ ಕಥೆ ಕನ್ನಡದಲ್ಲಿ ಬಂದಿವೆ, ಆದರೆ ಮೊನ್ನೆ ಮೊನ್ನೆ. ಆದರೆ ಲೇಖಕಿ ವಿಜಯಾ ರಾಜ್ಯಾಧ್ಯಕ್ಷರವರು ಹಿಂದೆಯೇ ಅಂದರೆ ರೀತಿಯ ಸಂಬಂಧಗಳು ನವೀನವಾಗಿರುವಾಗಲೇ ಬರೆದ ಕಥೆ "ಜಾನಕಿ ದೇಸಾಯಿಯ ಪ್ರಶ್ನೆ"

ಯಾವುದೇ ಅನುಕೂಲತೆಗಳಿಲ್ಲದೇ ಬಡತನದಲ್ಲಿ ಪತಿ, ತಂದೆ-ತಾಯಿಗಳಿಂದ ಶೋಷಿತರಾದವರು ಸಮಾಜಕ್ಕೆ ವಿರುದ್ಧವಾಗಿ ಹೋಗುವ ಸಂಬಂಧಗಳು ಇರುತ್ತವೆ. ಆದರೆ ಎಲ್ಲವೂ ಇದ್ದು ಶ್ರೀಮಂತಿಕೆಯಲ್ಲಿ ಬೆಳೆದು, ಪ್ರತಿಯೊಂದು ಅವಶ್ಯಕತೆಗಳು ಪೂರ್ತಿಯಾದಾಗಲೂ ಕೇವಲ ಸ್ವೆಚ್ಛೆಯಿಂದ ಬದುಕಬೇಕೆಂದು, ಯಾವುದೇ ಬಂಧನ ಬೇಡವೆಂದುಕೊಂಡು, ನಂತರ ಜೀವನವನ್ನು ಒಂದು ಪ್ರಶ್ನೆ ಚಿಹ್ನೆಯನ್ನಾಗಿ ಮಾಡಿಕೊಂಡ ಜಾನಕಿಯ ಕಥೆ. ಸುಸಂಸ್ಕೃತ, ಶ್ರೀಮಂತ ಮನೆತನದಲ್ಲಿ ಹುಟ್ಟಿ, ಉತ್ತಮ ಶಾಲೆಯಲ್ಲಿ ವಿದ್ಯಾಭ್ಯಾಸ ಪಡೆದ ಜಾನಕಿಗೆ ಮುಂಬೈಯ ಆಧುನಿಕ ಸಮ್ಮಿಶ್ರ ಜೀವನದ ಸಂಸ್ಕಾರವಾಯಿತು. ಮನೆಯಲ್ಲಿ ಒಳ್ಳೆಯ ತಂದೆ-ತಾಯಿಗಳಿದ್ದರೂ ಸ್ನೇಹಿತೆಯ ಪ್ರಭಾವ ಜಾಸ್ತಿ. ಈ ಸಂಸ್ಕಾರಗಳು ಆಳವಾಗಿ ಬೇರೂರತೊಡಗಿದ್ದು ಕಾಲೇಜಿನಲ್ಲಿ ಸನೋಬರ ಸ್ನೇಹಿತೆಯೊಂದಿಗೆ. ಮುಂದಿನ ವಿದ್ಯಾಭ್ಯಾಸಕ್ಕೆ ವಿದೇಶದ ಒಳ್ಳೆಯ ವಿಶ್ವವಿದ್ಯಾಲಯದ ಸ್ಕಾಲರ್‌ಶಿಫ್ ಸಿಗುವಂತಿದ್ದರೂ ಅದನ್ನು ಬಿಟ್ಟು ಬೇರೆ ದಾರಿ ಹಿಡಿದಳು ಜಾನಕಿ. ತನ್ನದೇ ಆದ ವರ್ತುಲದಲ್ಲಿ ಸಿಲುಕಿಕೊಂಡು ಸುಜೀತ ಬ್ಯಾನರ್ಜಿಯೊಂದಿಗೆ ವಿವಾಹವಿಲ್ಲದೇ ಹಾಗೆಯೇ ಇರತೊಡಗಿದಳು. ಮೊದ ಮೊದಲು ಇದೆಲ್ಲ ಚೆನ್ನಾಗಿ ಅನ್ನಿಸಿದರೂ ಬರಬರುತ್ತ ಇರತೊಡಗಿದಂತೆ ಆ ಸಂಬಂಧದೊಳಗಿನ ಪೊಳ್ಳುತನ ಕಾಣಿಸಿಕೊಳ್ಳತೊಡಗಿತು. ಮೊದಲು ಒಳ್ಳೆಯವೆನಿಸಿದ ಸುಜೀತನ ಗುಣಗಳು ಈಗ ಇಷ್ಟವಾಗುತ್ತಿರಲಿಲ್ಲ. ಹೊಗಳಿ ಅಟ್ಟಕ್ಕೇರಿಸುತ್ತಿದ್ದ ಸುಜೀತ ಈಗ ಸದಾ ತಪ್ಪು ಕಂಡು ಹಿಡಿಯತೊಡಗಿದ. ಈ ರೀತಿ ಸಂಬಂಧದಲ್ಲಿ ಉಂಟಾದ ಬಿರುಕು ಅನುವಿನ ಪ್ರವೇಶದಿಂದಾಗಿ ದೊಡ್ಡದಾಗತೊಡಗಿತು. ಜಾನಕಿಗೆ ಪರಾಗನ ಸ್ನೇಹಹಸ್ತ ದೊರೆತರೂ ಆ ಸಂಬಂಧ ಯಾವ ಬಂಧನಕ್ಕೆ ಎಡೆ ಮಾಡಬಹುದು? ಎನ್ನುವದೇ ಜಾನಕಿಯ ಪ್ರಶ್ನೆ

ಯಾವುದೇ ಸಂಬಂಧ, ಬಂಧನದಲ್ಲಿ ಪುರುಷ ಪೂರ್ತಿಯಾಗಿ ತೋಯದೇ ನಿರ್ಲಿಪ್ತನಾಗಿ ಇರಬಲ್ಲ. ಆದರೆ ಸ್ತ್ರೀಗೆ ಅದು ಸಾಧ್ಯವೆ? ಬಂಧನಗಳೇ ಬೇಡವೆಂದ ಜಾನಕಿ ಸಂಬಂಧಗಳಲ್ಲಿ ಸ್ಥೈರ್ಯ, ಸ್ವಾಮಿತ್ವ ಹುಡುಕತೊಡಗಿದಳು. ಅಸ್ಥಿರತೆ ಅವಳಿಗೆ ಸಹನವಾಗಲಿಲ್ಲ. ಆಗ ಕ್ರಮಿಸಿದ ದಾರಿಯಲ್ಲೇ ಹಿಂತಿರುಗಿ ಬಂದು ಹೊಸ ಆಧಾರ ಹುಡುಕತೊಡಗಿದಳು. ತನ್ನ ಕಳೆದು ಹೋದ ಉತ್ತರ ಇಲ್ಲಿಯೇ ಎಲ್ಲೋ ಇರಬೇಕು.ಅದನ್ನು ಹುಡುಕಲು ಬರೀ ನೆಲದ ಮೇಲೆ ನಡೆದು ಪ್ರಯೋಜನವಿಲ್ಲ. ಬೇರಿನಂತೆ

ನೆಲದಾಳಕ್ಕಿಳಿಯಬೇಕು. ಎಂದೆಲ್ಲ ಯೋಚಿಸಿ ಮತ್ತೆ ತಾಯಿಯ ಬಳಿ ಬಂದ ಜಾನಕಿ ಉತ್ತರಗಳಿಗಾಗಿ ಆಧಾರ ಹುಡುಕತೊಡಗಿದ ಕಥೆ.

ಮರಾಠಿಯ ಇನ್ನೊರ್ವ ಕಥೆಗಾರ್ತಿ ಪ್ರಾ. ವಿದ್ಯಾ ಸಪ್ರೆಚೌಧರಿ. ಮೂಲತಃ ಧಾರವಾಡದವರೇ ಆದ ವಿದ್ಯಾ ಸಪ್ರೆಚೌಧರಿ ವಿಜ್ಞಾನದ ಪದವೀಧರೆ. ನ್ಯೂಕ್ಲಿಯರ ಫಿಝಿಕ್ಸ ಕಲಿಸುವ ಪಾಧ್ಯಾಪಕಿ (ಕರ್ನಾಟಕ ಸೈನ್ಸ ಕಾಲೇಜ/ಧಾರವಾಡ) ಆದರೆ ಅವರ ಸಾಹಿತ್ಯದ ಅಧ್ಯಾಪನ, ಆಸಕ್ತಿ ಅವರನ್ನು ಒಳ್ಳೆಯ ಕಥೆಗಾರ್ತಿಯನ್ನಾಗಿ ಮಾಡಿವೆ. ನೀಳ್ಗತೆ, ಕಾದಂಬರಿಗಳು ಅವರ ಮಾಧ್ಯಮ. ಅವರದ್ದು ವರ್ಣನಾಮಯಿ ಶೈಲಿ. ಇಂದಿನ ಚುರುಕು ಮುಟ್ಟಿಸುವ ಸಾಹಿತ್ಯಕ್ಕೆ ವಿರುದ್ಧವಾದಂತೆ ೬೦ ದಶಕದ ಶೈಲಿ ಆದರೆ ವಿಷಯ ವೈವಿಧ್ಯ ಅವರ ವೈಶಿಷ್ಟ್ಯ. ಶ್ರೀ.ಪ್ಪಿ.ಎಸ್.ಕುಲಕರ್ಣಿ ಹಾಗೂ ಶ್ರೀಮತಿ ಶುಭದಾ ಅಮಿನಭಾವಿ ಅವರ ಕಥೆಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಪ್ರಚಲಿತ ವಿಷಯಗಳು, ನಡೆದ ಘಟನೆಗಳ ಸುತ್ತಲೂ ಕಥೆ ಹೆಣೆಯುವ ವಿದ್ಯಾ ಸಪ್ರೆ ತಮ್ಮ ಕಥೆಗಳಲ್ಲಿ ಸಮತೂಕದ ಭಾವಗಳನ್ನುಳಿಕೊಂಡಿದ್ದಾರೆ. ಅವರದ್ದು ಸ್ತ್ರೀವಾದಿ ಸಾಹಿತ್ಯವೇನೂ ಅಲ್ಲ. ಸಾಹಿತ್ಯ ಬರೆಯಲೂ, ಓದಲೂ, ರೋಚಕ, ರಂಜನಿಯವಾಗಿರಬೇಕು, ಬೋಧಕವೂ ಆಗಿರಬೇಕು, ಎನ್ನುವ ವಿಚಾರ ಸರಣಿ ಅವರದು.

ಚಿಕ್ಕ ವಯಸ್ಸಿನಿಂದಲೇ ಏನೋ ಆದರ್ಶಗಳನ್ನಿಟ್ಟುಕೊಂಡು ಹಿರಿಯ ಸ್ವಾಮೀಜಿಯವರು ಕೊಟ್ಟ ಆದೇಶದಂತೆ ಸನ್ಯಾಸವನ್ನು ಸ್ವೀಕರಿಸಿ, ಆದರೆ ಸಂಸಾರದ ಮೋಹ, ಅದಕ್ಕಿಂತ ಹೆಚಾಗಿ ಪ್ರೀತಿಸಿದ ಗೆಳತಿಯನ್ನು ಮರೆಯಲಾಗದೇ ಅನುಭವಿಸಿದ ತಳಮಳದ ಕಥೆ 'ವಿಧಿಲಿಖಿತ' ಸನ್ಯಾಸ ಸ್ವೀಕರಿಸಿ, ಕೆಲ ಕಾಲ ಅದೇ ಧರ್ಮವನ್ನು ಪರಿಪಾಲಿಸಲು ಪ್ರಯತ್ನಿಸಿದರೂ ತನ್ನ ಮನಸ್ಸು, ಭಾವ ಸನ್ಯಾಸಧರ್ಮಕ್ಕೆ ಪ್ರಾಮಾಣಿಕವಾಗಿಲ್ಲ ಎನ್ನುವ ಭಾವನೆ ಬಲಿತಾಗ, ಸನ್ಯಾಸ ತ್ಯಜಿಸಿ ಮತ್ತೆ ಸಂಸಾರಿಯಾದರೂ ಯಾವುದೇ ಸುಖ ಕಾಣದೇ, ಬರಡು ಜೀವನ ನಡೆಸಿ ಮುಂದೆ ನಿಷ್ಕಾಮ ಕರ್ಮ ಮಾಡುತ್ತ ಜೀವನ ಸವೆಸಿದ ಮುಕುಂದನ ಕಥೆ. ಸನ್ಯಾಸ ತ್ಯಜಿಸಿದ ನಂತರ ಮದುವೆ ಮಾಡಿಕೊಂಡರೂ ಪತ್ನಿ-ಮಗುವನ್ನು ಉಳಿಸಿಕೊಳ್ಳಲಾರದೇ ಇತ್ತ ಪೂಜ್ಯರೆಂದು ಭಾವಿಸಿ ಆದರಿಸಿದ ತಂದೆ-ತಾಯಿಗಳಿಗೆ ಸತ್ತ ನಂತರ ಅಗ್ನಿಯನ್ನು ಕೊಡಲಾಗದೇ ತ್ರಿಶಂಕುವಾಗಿ ಎರಡೂ ಜಗತ್ತಿಗೆ ಎರವಾದ ವ್ಯಕ್ತಿಯ ಕಥೆ. ಲೇಖಕಿಯೊಬ್ಬಳು ಈ ರೀತಿ ವಿಚಾರ ಮಾಡಿ ಹೊಸತನದಿಂದ ರಚಿಸಿದ ಈ ಕಥೆ ಎಲ್ಲರಿಗೂ ಅಚ್ಚರಿ ಉಂಟು ಮಾಡುವುದರಲ್ಲಿ ಸಂಶಯವಿಲ್ಲ.ಈ ಕಥೆಯಲ್ಲಿದ್ದ ಸ್ತ್ರೀಪಾತ್ರಗಳು ರಮಾಬಾಯಿ ಹಾಗೂ ಅರುಂಧತಿ, ಪಾಲಿಗೆ ಬಂದದ್ದು ಪಂಚಾಮೃತ ಎಂದೇ ಜೀವನವನ್ನು ಕಳೆದ ರಮಾಬಾಯಿ, ಮಗನನ್ನು ಸನ್ಯಾಸಿಯಾಗಿ ಮಾಡ ಹೊರಟ ಪತಿಯೊಂದಿಗೆ ಜಗಳವಾಡಿದ ತಾಯಿ ಮಗ ಸನ್ಯಾಸಿಯಾಗುವವದನ್ನು ಸಹಿಸದ ಮಮತೆಯ ತಳಮಳ ಒಂದೆಡೆಯಾದರೆ, ಪ್ರಿಯಕರ ತನ್ನನ್ನು ಬಿಟ್ಟು ಸನ್ಯಾಸಿಯಾದಾಗ ಉಂಟಾದ ತರುಣಿಯ ಮನಸ್ಸಿನ ತುಮುಲ, ಭಾವನೆಗಳ ತಾಕಲಾಟಗಳನ್ನು ಸಪ್ರೆಯವರು ಮನ ಮುಟ್ಟುವಂತೆ ಚಿತ್ರಿಸಿದ್ದಾರೆ.

ಅವರದೇ ಐತಿಹಾಸಿಕ ಹಾಗೂ ಸಂಗೀತದ ಹಿನ್ನೆಲೆಯುಳ್ಳ ಕಥೆ 'ಬೋಲೆ ರೆ ಪಪಿಹರಾ.....' ಪ್ರೇಮ, ಗೌರವ, ಪ್ರತಿಷ್ಠೆ, ಅಸೂಯೆ ಮುಂತಾದ ಮಾನವಸಹಜ ಗುಣಗಳು ಪ್ರತಿಯೊಬ್ಬ ವ್ಯಕ್ತಿಯಲ್ಲಿರುತ್ತವೆ. ಪ್ರಸಂಗ, ಪರಿಸ್ಥಿತಿಯಿಂದಾಗಿ ಮನುಷ್ಯನ ನಡವಳಿಕೆ ಬದಲಾಗುತ್ತದೆ ಎನ್ನುವದನ್ನು ಪ್ರತಿಪಾದಿಸುವ ಕಥೆ.

ಅನೇಕ ಕಷ್ಟ, ತೊಂದರೆಗಳನ್ನು ಅನುಭವಿಸಿ ಕೇವಲ ಸಂಗೀತ ಕಲಿಯಲೆಂದೇ ಗುರುಗಳನ್ನು ಅರಸುತ್ತ ಬಂದ ಹದ್ದೂ ಖಾ, ಹಸ್ಸೂ ಖಾರ ಕಥೆ. ಅನಾಥರಾಗಿದ್ದ ಈ ಸಹೋದರರು ಅಜ್ಜನೊಂದಿಗೆ ಗುರುಗಳ ಬಳಿ ಬಂದರು. ದೊರೆಯ ಕೃಪೆಯಿಂದ ಸಂಗೀತವನ್ನು ಕಲಿಯತೊಡಗಿದರು. ಗುರುವನ್ನು ಮೀರುವಂತಹ ಸಂಗೀತಗಾರರಾದರು. ಸಂಗೀತದಲ್ಲಿ ತನ್ನನ್ನೂ ಮೀರಿ, ದೊರೆಯ ಪ್ರೀತಿಗೆ ಪಾತ್ರವಾಗುವ ಯೋಗ್ಯತೆ ಇದ್ದ ಶಿಷ್ಯರನ್ನು ಹುರಿದುಂಬಿಸುವದರ ಬದಲಾಗಿ ಅಸೂಯೆಯಿಂದ ಪ್ರಾಣಾಂತಿಕವಾದ ಆಲಾಪವನ್ನು ಮತ್ತೊಮ್ಮೆ ತೆಗೆದುಕೊಳ್ಳಲು ಆಜ್ಞೆ ಮಾಡಿ, ಶಿಷ್ಯನ ಸಾವಿಗೆ ಕಾರಣನಾದ ಅಧಮ ಗುರುವಿನ ಕಥೆ. ಹಿಂದೂ ಅರಸ, ಮುಸ್ಲಿಂ ಸಂಗೀತಗಾರರ ಪರಸ್ಪರ ಸಮನ್ವಯದ ಕಥೆ. ಶ್ರೀ ವ್ಹಿ.ಎಸ್. ಕುಲಕರ್ಣಿಯವರು ಅನುವಾದಿಸಿದ್ದು 'ಕರ್ಮವೀರ' ದೀಪಾವಳಿ ಸಂಚಿಕೆಯಲ್ಲಿ ಪ್ರಕಟವಾಗಿತ್ತು.

ಇದಕ್ಕೆ ವಿರುದ್ಧವಾಗಿ ಮೇಘನಾ ಪೇಠೆಯವರ ಹಸಿಹಸಿಯಾದ ವಾಸ್ತವತೆಯನ್ನು ಚಿತ್ರಿಸುವ ಕಥೆಗಳು ಕನ್ನಡದಲ್ಲಿ ಇಲ್ಲವೆಂದೇ ಹೇಳಬಹುದು. ಪೇಠೆಯವರ ಕಥೆಗಳನ್ನು ಅನುವಾದಿಸಿದ ಶ್ರೀಯುತ ಚಂದ್ರಕಾಂತ ಪೋಕಳೆಯವರು ಹೇಳುವಂತೆ ಮೇಘನಾ ಪೇಠೆಯವರ ಕಥೆಗಳು ಮನಸ್ಸನ್ನು ಅಸ್ವಸ್ಥಗೊಳಿಸುತ್ತವೆ. ಎಲ್ಲ ಬಗೆಯ ಸ್ವಾತಂತ್ರ್ಯಮುಕ್ತಿ, ಸುಖ-ಸೌಲಭ್ಯ ದೊರೆತರೂ ಇಂದಿನ ಆಧುನಿಕ ಮಹಿಳೆ ಸುಖಿಯಾಗಿದ್ದಾಳೆಯೆ? ಮಾನಸಿಕ ನೆಮ್ಮದಿ ಪಡೆದಿದ್ದಾಳೆಯೆ? ಗಂಡನನ್ನು ಕೇಳದೇ ಸ್ವತಂತ್ರವಾಗಿ ನಿರ್ಣಯ ತೆಗದುಕೊಳ್ಳುವ ಅಧಿಕಾರ ಅವಳಿಗಿದೆಯೆ? ಇವೇ ಮೊದಲಾದ ಪ್ರಶ್ನೆಗಳು, ಹೊಸ ಸ್ಥಿತ್ಯಂತರದಲ್ಲಿ ಹೊಸ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಹೊಸ ಹಾದಿಯಲ್ಲೂ ಹೊಸ ಕಂದರಗಳು, ದುಃಖ, ಅವಮಾನಗಳು, ಇವುಗಳಿಗೆ ಉತ್ತರ......!

ಮೇಘನಾ ಚಿತ್ರಿಸಿದ ಹೆಣ್ಣು ನಿಸ್ಸಂಕೋಚ ಸ್ವಭಾವದವಳು. ದೇಹ-ಮನದ ಕಾಮನೆಗಳನ್ನು ನಿಸ್ಸಂಕೋಚವಾಗಿ ಒಪ್ಪಿಕೊಳ್ಳುವವಳು. ಅದಕ್ಕಾಗಿ ಯಾವುದೇ ಹೆಜ್ಜೆ ಇಡಲು ಸಿದ್ಧಳು. ಅವಳಿಗೆ ಮನೆ-ಮಕ್ಕಳು, ಮದುವೆ-ಸಂಸಾರ, ಈ ಬಂಧನಗಳು ಬೇಕಿಲ್ಲ. ತನ್ನ ಆಸೆ, ಬಯಕೆ, ತಿರಸ್ಕಾರ, ನಿರೀಚ್ಛೆಗಳನ್ನು ನೇರವಾಗಿ ವ್ಯಕ್ತಪಡಿಸುವ ಮೇಘನಾರ ಕಥಾ ನಾಯಕಿಯರು ಸಾಮಾಜಿಕ ವ್ಯವಸ್ಥೆಯನ್ನೇ ಭೇದಿಸುವ ಪ್ರಯತ್ನ ಮಾಡುತ್ತಾರೆ. ಇಂತಹ ನಾಯಕಿಯರನ್ನಿಟ್ಟುಕೊಂಡು ಮೇಘನಾ ಮಾನವಜೀವನದ ವಿಕೃತಿಯ, ಗೂಢತೆಯ ಹಾಗೂ ಸರ್ವವ್ಯಾಪಿ ಏಕಾಕಿತನದ ಚಿತ್ರಣವನ್ನು ಯಥಾರ್ಥವಾಗಿ ಕೊಡುತ್ತಾರೆ. ಅವರ ಕಥೆಗಳಲ್ಲಿ ಖಳನಾಯಕ, ಖಳನಾಯಕಿಯರಿಲ್ಲ. ಬಂದ ಅನುಭವ, ಮನೋಭಾವಗಳೇ ಕಥೆಗೆ ಹೊಸ ತಿರುವನ್ನು ಕೊಡುತ್ತವೆ. ಓದಿಸಿಕೊಂಡು ಹೋಗುತ್ತವೆ. ಕೆಲ ವಿಮರ್ಶಕರು ಅಭಿಪ್ರಾಯ ಪಟ್ಟಂತೆ ಒಬ್ಬ ಮಹಿಳೆ ಈ ರೀತಿ ಸ್ತ್ರೀ-ಪುರುಷರ ಸಂಬಂಧದ ಬಗ್ಗೆ ಬರೆಯುವದು ಮರಾಠಿ ಕಥಾಪ್ರಪಂಚದಲ್ಲಿ ಹೊಸದು. ಕನ್ನಡದಲ್ಲಿ

ಗೀತಾ ನಾಗಭೂಷಣರ ಕೆಲ ಕಥೆಗಳಲ್ಲಿ ಈ ಅಂಶವನ್ನು ಕಾಣಬಹುದಾದರೂ ಈ ವಿಷಯವನ್ನು ಆರಿಸಿಕೊಂಡ ಕಥೆಗಳು ಕನ್ನಡದಲ್ಲಿ ವಿರಳ.

'ಒಂದು ದಿನ ಸ್ತ್ರ..... ನದ್ದು' ಕಥೆಯ ಪ್ರಿಯಂವದಾ 'ನೀತಿಗೆಟ್ಟ ವೀಕ್ಷಕನ ವಸೂ ಅತ್ತೆ', 'ನರಿಯ ಮದುವೆ'ಯ ಮಂಜುಳಾಬಾಯಿ ಇವರೆಲ್ಲ ನಮ್ಮ ನಡುವಿದ್ದಾರೆ. ಮೇಘನಾರವರು ಇವರೆಲ್ಲರನ್ನು ನಮ್ಮ ಮುಂದೆ ತಂದು ನಿಲ್ಲಿಸುತ್ತಾರೆ. ಇದೇ ಅವರ ಕಥೆಗಳ ವೈಶಿಷ್ಟ್ಯ. ಪುರುಷನ ಮನ ಹೊಕ್ಕು ಅವನ ವಿಚಾರ, ಆಲೋಚನೆ, ಅನುಭವಗಳನ್ನು ಗ್ರಹಿಸಿ, ಅವುಗಳನ್ನು ಅಭಿವ್ಯಕ್ತ ಪಡಿಸುವ ಕಲೆ ಮೇಘನಾರಿಗೆ ಸಾಧಿಸಿದೆ. ಇದರಿಂದಾಗಿಯೂ ಅವರ ಕಥೆಗಳು ಕೇವಲ ಸ್ತ್ರೀವಾದಿ ಕಥೆಗಳಾಗದೇ ಸಾಹಿತಿಯೊರ್ವ ರಚಿಸಿದ ಕೃತಿಗಳಾಗುತ್ತವೆ. ಮನಸ್ಸಿನ ಸೂಕ್ಷ್ಮ ಪದರುಗಳನ್ನು ಬಿಡಿಸಿ, ಒಳಹೊಕ್ಕು ಅಡಗಿದ ಅನುಭವಗಳನ್ನು ಹೊರ ತಂದು, ಇವೂ ನಮ್ಮವೂ ಇರಬಹುದಲ್ಲ! ಎನ್ನಿಸುವಂತೆ ಮಾಡುವ ಮೇಘನಾರ ವ್ಯಕ್ತಿಚಿತ್ರಣ, ಕಥಾಹಂದರ ಹೀಗೆ ಬದುಕಿಗೆ ಸಮೀಪವಾಗುತ್ತವೆ.

'ನಾಲ್ಕೂ ದಿಕ್ಕಿಗೆ ಕಡಲಿನ ನೀರು' ಶ್ರೀಯುತ ಮೊಕಳೆಯವರು ಅನುವಾದಿಸಿದ ಕಥೆ. ಮುಂಬೈಯ ಅಪಾರ್ಟಮೆಂಟವೊಂದರಲ್ಲಿ ವಾಸಿಸುವ ಐದಾರು ಕುಟುಂಬದವರ ಸುತ್ತ ಸುತ್ತುವ ಈ ಕಥೆ ನೀತಿ-ಅನೈತಿಕತೆ, ಮಾನವೀಯತೆ ಮುಂತಾದ ಭಾವನೆಗಳ ತಾಕಲಾಟ, ಸ್ತ್ರೀ-ಪುರುಷರ ಸಂಬಂಧ, ಬೇಡಿಕೆ, ಅವುಗಳ ಪೂರೈಕೆಯಲ್ಲಿನ ದ್ವಿಮುಖ ನೀತಿ, ಮುಂತಾದವುಗಳನ್ನು ಕಥಾನಕದಲ್ಲಿ ಹೆಣೆಯಲಾಗಿದೆ. ನೆರೂರಕರ ಪಾಠಕನ ಹೆಂಡತಿಯ ಜತೆ ಸಂಬಂಧವಿರಿಸಿಕೊಂಡಿದ್ದಾನೆ. ಆ ಮಾತು ನೆರೂರಕರ ಪತ್ನಿಗೂ ಪಾಠಕನಿಗೂ ಗೊತ್ತಿದೆ. ಪಾಠಕನ ಮಗ ಲವ ಪ್ರತಿ ಸಂಜೆ ಕಥಾನಾಯಕಿಯ ಮನೆಗೆ ಬರುತ್ತಾನೆ. ನೆರೂರಕರ ಕಥಾನಾಯಕಿಯಲ್ಲೂ ಆಕರ್ಷಣೆ ಹೊಂದಿ ಫ್ಲರ್ಟ ಮಾಡುತ್ತಾನೆ. ಇವೆಲ್ಲ ಸಂಕೀರ್ಣತೆಗಳ ನಡುವೆ ಅಪಾರ್ಟಮೆಂಟಿನ ಜನ ಪಾಠಕ ಕುಟುಂಬವನ್ನು ಅನೈತಿಕತೆಯ ಆರೋಪವನ್ನು ಹೊರಿಸಿ ಹೊರ ಹಾಕುತ್ತಾರೆ. ನೆರೂರಕರನ ಹೆಂಡತಿ ಸ್ವತಃ ಇದಕ್ಕೆ ವಿರೋಧಿಸುತ್ತಾಳೆ. ಕಥಾನಾಯಕಿ ಲವನಿಗಾಗಿ ಕಾತರಿಸುತ್ತಾಳೆ. ಆದರೆ ಬಾಳು ಮತ್ತೆ ಮುಂದುವರೆಯುತ್ತದೆ. ಹೀಗೆ ನಮ್ಮ ಮುಂದೆ ನಡೆಯುತ್ತಿರುವ ಕಥಾನಕವನ್ನು ಎತ್ತಿ ತೋರಿಸಿ, ಅದರ ವಿವಿಧ ಆಯಾಮುಗಳನ್ನು ಗುರುತಿಸುವಲ್ಲಿ ಮೇಘನಾ ಯಶಸ್ವಿಯಾಗಿದ್ದಾರೆ.

ಭಾವನಾತ್ಮಕ ಅನುಭವಗಳಿಂದಲೇ ಸಾಹಿತ್ಯ ರಚನೆಯಾಗುತ್ತದೆ ಎನ್ನುವ ಮಾತು ಸತ್ಯವಾಗಿದ್ದರೂ ಇಂದು ನಾವಿರುವುದು ವಿಜ್ಞಾನಯುಗದಲ್ಲಿ. ಮಾನವನ ಜೀವನವನ್ನು ವೇಗವಾಗಿ ಆಕ್ರಮಿಸಿಕೊಳ್ಳುತ್ತಿರುವ ವಿಜ್ಞಾನ-ತಂತ್ರಜ್ಞಾನಗಳು ಸಾಹಿತ್ಯದಲ್ಲಿಯೂ ತಮ್ಮ ಹೆಜ್ಜೆಗಳನ್ನು ಮೂಡಿಸಿವೆ. ಕಂಪ್ಯೂಟರ್ಸ, ಕ್ಲೋನಿಂಗ್, ಸಂಪರ್ಕಮಾಧ್ಯಮಗಳು, ವೈದ್ಯಕೀಯ ವಿಜ್ಞಾನ... ಇವೆಲ್ಲವೂ ದಿನನಿತ್ಯದ ಬದುಕಿಗೆ ಅನುಕೂಲ, ಅನಿವಾರ್ಯವಾದರೂ ಮಾನವನ ಭಾವಜೀವನವನ್ನು ಪ್ರವೇಶಿಸಿ ಚಲವಿಚಲಗೊಳಿಸಿವೆ ಎಂದು ಸಮಾಜ ಶಾಸ್ತ್ರಜ್ಞರು ಹೇಳುತ್ತಾರೆ. ಆ ಚಲವಿಚಲತೆ ತುಮುಲದ ಪ್ರಭಾವ ಸಾಹಿತ್ಯದ ಮೇಲೂ ಆಗಿದೆ. ವಿಜ್ಞಾನ ಸಾಹಿತ್ಯ (ಸೈಂಟಿಫಿಕ್ ಫಿಕ್ಷನ್) ಎನ್ನುವ ಹೊಸ ಪ್ರಕಾರವನ್ನು ಹುಟ್ಟು ಹಾಕಿದೆ. ಇಂಗ್ಲೀಷಿನಲ್ಲಿ ಹುಲುಸಾಗಿ ಬೆಳೆದ ಈ ಸಾಹಿತ್ಯ ಪ್ರಕಾರ ಹಾಗೆ ನೋಡಿದರೆ

ಕನ್ನಡ-ಮರಾಠಿ ಎರಡೂ ಭಾಷೆಗಳಲ್ಲಿ ವೈಜ್ಞಾನಿಕ ಕಥೆ-ಕಾದಂಬರಿಗಳ ಯುಗ ಈಗ ಆರಂಭವಾಗಿದೆ. ಕನ್ನಡದಲ್ಲಿ ನೇಮಿಚಂದ್ರರು ವೈಜ್ಞಾನಿಕ ಹಿನ್ನೆಲೆ ಇರುವ ಕಥೆಗಳನ್ನು ರಚಿಸಿದ್ದಾರೆ. ಮರಾಠಿಯಲ್ಲಿ ಪ್ರಾಧ್ಯಾಪಕಿ ಡಾ॥ ಮಾಧುರಿ ಶಾನಭಾಗ ಅವರು ವೈಜ್ಞಾನಿಕ ಕಥೆಗಳನ್ನು ಬರೆದಿದ್ದು 'ಇಂದ್ರ ಧನುಷ್ಯ' ಹಾಗೂ 'ಪುನರ್ಜನ್ಮ' ಎರಡು ವೈಜ್ಞಾನಿಕ ಕಥಾಸಂಕಲನಗಳನ್ನು ಹೊರ ತಂದಿದ್ದಾರೆ. ಬೆಳಗಾವಿಯ ಜಿ.ಎಸ್.ಎಸ್.ಕಾಲೇಜಿನಲ್ಲಿ ಭೌತಶಾಸ್ತ್ರವನ್ನು ಕಲಿಸುತ್ತಿರುವ ಮಾಧುರಿ ಶಾನಭಾಗ ವೈಜ್ಞಾನಿಕ ಕಾದಂಬರಿಯನ್ನೂ ರಚಿಸಿದ್ದಾರೆ. ಇವರ ಕಥೆಗಳಾದ 'ಇಂದ್ರ ಧನುಷ್ಯ' ಹಾಗೂ 'ಪ್ರತಿಮಾ' ಕನ್ನಡದಲ್ಲಿ ಅನುವಾದಗೊಂಡಿದ್ದು ಧಾರವಾಡದ ಶ್ರೀಮತಿ ರಾಧಾ ಶ್ಯಾಮರಾವ್ ಅನುವಾದಿಸಿದ್ದಾರೆ. 'ಪ್ರತಿಮಾ' ಕಥೆ ಅಕಾಡೆಮಿಯ 'ಅನಿಕೇತನ' ಪತ್ರಿಕೆಯಲ್ಲಿ ಪ್ರಕಟಗೊಂಡಿದೆ.

'ಪ್ರತಿಮಾ' ಕಥೆ ಕ್ಲೊನಿಂಗ್ ತಂತ್ರಜ್ಞಾನಕ್ಕೆ ಸಂಬಂಧಿಸಿದ್ದು ಕಥಾನಾಯಕಿ ರತ್ನಾಕೇಶರ ಪುರುಷ ಸಂಪರ್ಕವಿಲ್ಲದೇ ತನ್ನದೇ ಜೀವಕೋಶಗಳನ್ನು ಬಳಸಿ ತನ್ನ ಪ್ರತಿರೂಪದಂತಿರುವ ಮಗಳನ್ನು ಪಡೆಯಬಯಸುತ್ತಾಳೆ. ಬಾಲ್ಯದಲ್ಲಿ ತಂದೆಯ ಶೋಷಣೆಗೆ ಒಳಗಾಗಿ ವೇಶ್ಯಾವೃತ್ತಿಯನ್ನು ಸ್ವೀಕರಿಸಿದ ತಾಯಿಯಿಂದಲೂ ಹೊಡಿತ-ಬಡಿತ ಅನುಭವಿಸಿದ ರತ್ನಾ ತನ್ನ ಪರಿಶ್ರಮ, ಪ್ರತಿಭೆಯಿಂದಲೇ ಮುಂದೆ ಬಂದು ಬಹು ದೊಡ್ಡ ಉದ್ಯೋಗಪತಿಯಾಗುತ್ತಾಳೆ, ಪುರುಷರನ್ನು ದ್ವೇಷಿಸುತ್ತಿರುವ ರತ್ನಾಕೇಶರ ತನ್ನಂತೆಯೇ ಇರುವ ಮಗಳನ್ನು ಪಡೆಯಲು ಪ್ರಸಿದ್ಧ ಸಂಶೋಧಕ ಬಾಲನ್ ರ ಸಹಾಯ ಪಡೆದು ತನ್ನ ಪ್ರಯತ್ನದಲ್ಲಿ ಯಶಸ್ವಿಯೂ ಆಗುತ್ತಾಳೆ. ಅವಳ ಪ್ರತಿರೂಪದಂತಿರುವ ಮಗಳು ಕೇಶರ ರತ್ನಳನ್ನು ಪಡೆಯುತ್ತಾಳೆ. ತನ್ನಂತೆಯೇ ಅವಳನ್ನು ಬೆಳೆಸಿ ತನ್ನ ಉದ್ಯೋಗದಲ್ಲಿ ತೊಡಗಿಸಬಯಸುತ್ತಾಳೆ. ತನ್ನಂತೆಯೇ ನಡೆಯಬೇಕು, ನುಡಿಯಬೇಕು, ಹಿರಿಯ ಉದ್ಯಮಿಯಾಗಬೇಕು, ಒಟ್ಟಿನಲ್ಲಿ ತನ್ನ ಪ್ರತಿಬಿಂಬವಾಗಬೇಕು. ಮುಂದೆ ಕ್ಲೊನಿಂಗ್ ವಿಧಾನದಿಂದಲೇ ಮಗಳು ಇನ್ನೊಬ್ಬ ರತ್ನಾಳನ್ನು ನಿಲ್ಲಿಸಬೇಕು ಎನ್ನುವುದೇ ಅವಳ ಬಯಕೆಯಾಗಿತ್ತು. ಆದರೆ ಮಗಳು ಕೇಶರ ರತ್ನ ನಡೆದ ದಾರಿ, ಆರಿಸಿದ ಮಾರ್ಗ ಬೇರೆಯೇ ಆಗಿತ್ತು. ಕ್ಲೋನ್‌ಗಳು ಕೂಡ ಪ್ರೀತಿ-ಪ್ರೇಮವನ್ನು ಅನುಭವಿಸುತ್ತವೆ ಎನ್ನುವದನ್ನು ಸಿದ್ಧಪಡಿಸುವಂತೆ ಕೇಶರ ರತ್ನ ವಿದೇಶದಲ್ಲಿ ಮದುವೆ ಮಾಡಿಕೊಂಡು ಬರುತ್ತಾಳೆ. ವಿಜ್ಞಾನ ಎಷ್ಟೇ ಮುಂದುವರಿದರೂ ಮಾನವೀಯ ಭಾವನೆಗಳ ಮೇಲೆ ಪ್ರಭುತ್ವ ಸಾಧಿಸಲು ಸಾಧ್ಯವಿಲ್ಲ ಎನ್ನುವದನ್ನು ಲೇಖಕಿ ಪ್ರತಿಪಾದಿಸುತ್ತಾರೆ.

ಇನ್ನೊಂದು ಕಥೆ 'ಇಂದ್ರ ಧನುಷ್ಯ' ಹೃದ್ರೋಗದಿಂದಾಗಿ ಚಿಕ್ಕವಯಸ್ಸಿನಲ್ಲಿಯೇ ಮರಣಕ್ಕೆದುರಾಗಿ ನಿಂತಿರುವ ನೇಹಾ ಗಣಕಯಂತ್ರದ ಸಹಾಯದಿಂದ ತನ್ನ ಕೊನೆ ದಿನಗಳನ್ನು ಪ್ರೀತಿಯಲ್ಲಿ ಮಿಂದು ಕಳೆಯುವಂತಾದ ಕಥೆ. ಇಂಟರ್‌ನೆಟ್‌ನಲ್ಲಿ ಸಂಪರ್ಕ ಮಾಡುತ್ತಿರುವಾಗ ಆಕಸ್ಮಿಕವಾಗಿ ಸುಮಿತ ಎನ್ನುವ ಯುವಕನೊಂದಿಗೆ ಮಾತು ಆರಂಭವಾಗುತ್ತದೆ. ಮೊದಲು ಸ್ನೇಹ, ಮುಂದೆ ಪ್ರೇಮಕ್ಕೆ ದಾರಿ ಮಾಡಿಕೊಡುತ್ತದೆ. ಸಂಬಂಧ ಘನಿಷ್ಠವಾದಂತೆ ಒಬ್ಬರನ್ನೊಬ್ಬರು ಭೇಟಿಯಾಗಬಯಸುತ್ತಾರೆ. ಅಗ ನೇಹಾ ಸತ್ಯಸಂಗತಿ ತಿಳಿಸಿ. ತಾನು ಹೃದ್ರೋಗಿ, ನಡೆದಾಡಲು ಬರುವದಿಲ್ಲವೆಂದು ಹೇಳಿದಾಗ,

ಸುಮಿತ ಅವಳನ್ನು ಭೇಟಿಯಾಗಲು ಬರುತ್ತಾನೆ. ಸುಮಿತ ಸ್ನೇಹಸಿಂಚನದಿಂದ ಪ್ರಾಣಾಂತಿಕ ನೋವನ್ನು ಅನುಭವಿಸುತ್ತಿದ್ದರೂ ನೇಹಾಳ ಕೊನೆ ದಿನಗಳು ಸಹ್ಯವಾಗಿರುತ್ತವೆ. ಸುಮಿತನ ತೋಳುಗಳಲ್ಲಿಯೇ ಪ್ರಾಣ ಬಿಡುತ್ತಾಳೆ ನೇಹಾ. ಪ್ರೇಮದ ಫಲವಾಗಿ ನಾಲ್ಕು ತಿಂಗಳು ಆಯುಷ್ಯ ಬೆಳೆದುದಲ್ಲದೇ ಸಾವು ಶಾಂತ ರೀತಿಯಿಂದ ಬಂತು. ಇದೆಲ್ಲ ಇಂಟರನೆಟ್‌ನಿಂದಾಯಿತು. ಜತೆಗೆ ತಾಯಿಯ ಮಮತೆಯಿಂದ ಎನ್ನುವುದು ಕಥೆಯ ಕೊನೆಯಲ್ಲಿ ತಿಳಿದುಬರುತ್ತದೆ. ಪ್ರೀತಿಗಾಗಿ ಹಾತೊರೆಯುತ್ತಿದ್ದ ಮಗಳಿಗಾಗಿ, ತಾಯಿ ತಾನೇ ಸುಮಿತನಾಗಿ ಚಾಟ್ ಮಾಡುತ್ತಿದ್ದಳು. ಕೊನೆಯ ದಿನ ತನ್ನ ಮೇಲಧಿಕಾರಿಯನ್ನೇ ಸುಮಿತನನ್ನಾಗಿ ಮಾಡಿ ಮಗಳ ಮುಂದೆ ನಿಲ್ಲಿಸಿದ್ದಳು. ವಿಜ್ಞಾನದ ಒಂದು ಉತ್ತಮ ಆವಿಷ್ಕಾರವನ್ನು ಭಾವನಾತ್ಮಕವಾಗಿ ಬಳಸಿ ರಚಿಸಿದ ಈ ಕಥೆ ಓದುಗರ ಮನದಲ್ಲಿ ಮನೆ ಮಾಡುತ್ತದೆ.

ಹೀಗೆ ವೈವಿಧ್ಯಮಯ ವಿಷಯಗಳನ್ನು ಒಳಗೊಂಡ ಕಥೆಗಳು ಕನ್ನಡಕ್ಕೆ ಅನುವಾದಗೊಂಡಿವೆ. ತಮ್ಮ ವಿಶಿಷ್ಟ ಕಥಾವಸ್ತು, ವಾಸ್ತವಿಕವಾದ ಪಾತ್ರ ಚಿತ್ರಣಗಳು, ಸೂಕ್ಷ್ಮ ಸಂವೇದನೆಯ ಪ್ರಸಂಗಗಳು, ದಿಟ್ಟ ಸ್ತ್ರೀವಾದಿ ನಿಲುವು, ಜತೆಗೆ ಪುರುಷ ಮನದ ನೆಲೆಯನ್ನೂ ಅರಿತು ಅದನ್ನು ಪದರು ಪದರಾಗಿ ಬಿಡಿಸಿಡುವ ಬಗೆ, ಇವುಗಳಿಂದ ಬೇರೆಯಾಗಿ ನಿಲ್ಲುವ ಕಥೆಗಳು ಅನುವಾದಗೊಂಡಿವೆ. ಸಂಕೀರ್ಣ ವಿಷಯಗಳನ್ನೊಳಗೊಂಡ, ಕಥೆಯ ಬೊಗಸೆಯಲ್ಲಿ ಇಡೀ ಸಮಾಜವನ್ನು, ಬದುಕನ್ನು ಹಿಡಿದಿಡುವ ಕಥೆಗಳು, ಪ್ರೀತಿಯ, ಕಾಮವಾಸನೆಯ ಬೇರೆ ಬೇರೆ ಮುಖಗಳನ್ನು ತೋರಿಸುವ ಸ್ತ್ರೀಯ ಅಂತರಂಗದ ವಿವಿಧ ರೂಪಗಳಂತೆ, ಪುರುಷನ ಹತ್ತು-ಹಲವಾರು ಸ್ವರೂಪಗಳನ್ನು ಅಭ್ಯಸಿಸುವ, ಅಭಿವ್ಯಕ್ತಿಸುವ ಈ ಕಥೆಗಳು ಅನುವಾದಗೊಂಡು ಸಾಹಿತ್ಯವನ್ನು ಶ್ರೀಮಂತಗೊಳಿಸಿವೆ. ಈ ಪರಂಪರೆಯನ್ನು ಮುಂದುವರಿಸೋಣ. ಎರಡೂ ಭಾಷೆಗಳ ಸಾಹಿತ್ಯದ ಆದಾನ-ಪ್ರದಾನ ಮಾಡಿ ಎರಡೂ ಸಾಹಿತ್ಯ ಕ್ಷೇತ್ರಗಳನ್ನು ಶ್ರೀಮಂತಗೊಳಿಸೋಣ, ಸಮೃದ್ಧಗೊಳಿಸೋಣ.

* * *

# ಭಾರತದ ಭಾಷೆಗಳ ಹೊಸ ಸಮೀಕ್ಷೆ : ಭಾಷಿಕ ಅನನ್ಯತೆಯ ಪುನರ್‌ಶೋಧವೇ?

**ಮೇಟಿ ಮಲ್ಲಿಕಾರ್ಜುನ**

ಭಾರತದ ಭಾಷಾಚರಿತ್ರೆಯಲ್ಲಿಯೇ ಒಂದು ಚಾರಿತ್ರಿಕ ದಾಖಲೆಯೇನೆಂದರೆ, ಭಾರತದ ಭಾಷೆಗಳ ಸಮೀಕ್ಷೆ, ಮತ್ತೆ ಈ ಚಾರಿತ್ರಿಕ ದಾಖಲೆಯ ಪುನರಾವರ್ತನೆ. ಭಾರತೀಯ ಭಾಷಾ ಸಂಸ್ಥಾನ, ಮೈಸೂರು ಇದರ ನೇತೃತ್ವದಲ್ಲಿ ಭಾರತದ ಭಾಷೆಗಳ ಹೊಸ ಸಮೀಕ್ಷೆಯ ಪೂರ್ವ ಸಿದ್ಧತೆಗಳು ಪ್ರಾರಂಭಗೊಂಡಿವೆ. ಕುತೂಹಲದ ವಿಷಯವೇನೆಂದರೆ, ಭಾರತೀಯ ಭಾಷೆಗಳ ಸಮೀಕ್ಷೆ ಶುರು ಮಾಡಿದ್ದು ವಿಭಿನ್ನ ಚಾರಿತ್ರಿಕ ಕಾಲಘಟ್ಟದಲ್ಲಿ. ವಸಾಹತುಶಾಹಿ ಸಂದರ್ಭದಲ್ಲಿ ಬಿ.ಎ.ಗ್ರೀಯರ್ಸ್‌ನ್‌ನು ಭಾರತದ ಹೆಚ್ಚಿನ ಭಾಷೆಗಳನ್ನು ಸಮೀಕ್ಷೆ ಮಾಡಿ, ಅವುಗಳ ರಚನಾ ವಿನ್ಯಾಸದ ಲಕ್ಷಣಗಳನ್ನು ಗುರುತಿಸುವ ಪ್ರಯತ್ನ ಮಾಡಿದನು. ಇದರ ಉದ್ದೇಶ ರಾಜಕೀಯವೇ ಇರಬಹುದು. ಲಾಭವೇನೆಂದರೆ ಭಾರತದಲ್ಲಿ ಬಳಕೆಯಲ್ಲಿರುವ ಭಾಷೆಗಳ ಒಂದು ಅಂದಾಜು ನಮಗೆ ಲಭ್ಯವಾಗಿದ್ದು ಈ ಒಂದು ಸಮೀಕ್ಷೆಯಿಂದ. ಇವತ್ತು, ಅಂದರೆ ಸುಮಾರು ಒಂದು ಶತಮಾನದ ನಂತರ ಕೈಗೊಳ್ಳುವ ಈ ಹೊಸ ಸಮೀಕ್ಷೆಯು ಕೂಡ ಕುತೂಹಲಕಾರಿಯಾಗಿದೆ. ಯಾಕೆಂದರೆ, ಅಂದು ವಸಾಹತುಶಾಹಿಯ ನೇರ ಯಜಮಾನಿಕೆ ಮತ್ತು ಪ್ರಾಬಲ್ಯದ ಮಧ್ಯ ಆ ಭಾಷಾಸಮೀಕ್ಷೆ ನಡೆಯಿತು. ಆದರೆ, ಇಂದು ಜಾಗತೀಕರಣದಂತಹ ಪರೋಕ್ಷ ಯಜಮಾನಿಕೆ ಮತ್ತು ಪ್ರಾಬಲ್ಯದ ಸಂದರ್ಭದಲ್ಲಿ ಭಾರತದ ಭಾಷೆಗಳ ಹೊಸ ಲೆಕ್ಕಾಚಾರ ಮಾಡುವ ಬೃಹತ್ ಯೋಜನೆ ಶುವರುವಾಗುವುದು. ನಿಜ. ನಾವೆಲ್ಲರೂ ಗೃಹಿಸಿದಂತೆ ಇದೊಂದು ಬೃಹತ್ ಮತ್ತು ಅದ್ಭುತವಾದ ಯೋಜನೆ. ಇದು ಕೇಂದ್ರ ಸರಕಾರದ ಪ್ರಾಯೋಜತ್ವದಲ್ಲಿ ನಡೆಯುವುದು. ಈ ಹೊಸ ಸಮೀಕ್ಷೆಯ ಅಗತ್ಯವೇನೆಂದರೆ, ಸ್ಪಷ್ಟ ಮತ್ತು ನೇರ ರೂಪರೇಷ ಮತ್ತು ಉತ್ತರಗಳು ದೊರಕಲಾರವು. ಹೌದು, ಅಂದು ಗ್ರೀಯರ್ಸ್‌ನಮಾಡಿದ ಸಮೀಕ್ಷೆ ಅಪೂರ್ಣವಾಗಿದೆ. ಹಾಗಾಗಿ ಹಲವಾರು ಯೋಜನೆ ಹಾಗೂ ಜನಗಣತಿ ಪ್ರಯತ್ನದಿಂದಲೂ ಭಾರತದ ಒಟ್ಟು ಭಾಷೆಗಳ ಸ್ಪಷ್ಟ ಚಿತ್ರಣ ನಮಗೆ ದೊರಕಿಲ್ಲ. ಉದಾಹರಣೆಗೆ ಈ ಕೆಳಗಿನ ವಿವರಗಳನ್ನು ಪರಿಶೀಲಿಸಬಹುದು. ಯಾಕೆಂದರೆ

ಭಾರತದ ಒಟ್ಟು ಭಾಷೆಗಳ ಒಂದು ವ್ಯವಸ್ಥಿತ ವರದಿ ನಮಗೆ ಇದುವರೆಗೂ ಲಭ್ಯವಾಗಿಲ್ಲ. ಆದರೆ, ಈ ಕೆಳಗೆ ನಮೂದಿಸಿದ ಕೋಷ್ಟಕ-೧ರ ವಿವರಗಳು ವಿಚಿತ್ರವಾಗಿ, ಅಸಂಬದ್ಧವಾಗಿ ತೋರಿದರೂ ಭಾರತದ ಭಾಷೆಗಳ ಒಂದು ಸ್ಥೂಲ ಪರಿಚಯವನ್ನು ಕೊಡುತ್ತವೆ. ಇದರಿಂದ ಈ ದೇಶದ ಭಾಷಿಕ-ಸಾಂಸ್ಕೃತಿಕ ಬಹುತ್ವತೆಯನ್ನು ಗುರುತಿಸಬಹುದು.

**ಕೋಷ್ಟಕ-೧**

| ಸಮೀಕ್ಷೆಯ ವಿವರಗಳು | ಮಾತೃ ಭಾಷೆಗಳ ಸಂಖ್ಯೆ | ಜನಸಂಖ್ಯೆ | ಉಪಭಾಷೆಗಳ ಸಂಖ್ಯೆ | ಅವರ್ಗೀಯ ಭಾಷೆಗಳ ಸಂಖ್ಯೆ |
|---|---|---|---|---|
| ಗ್ರೀಯರ್ಸನ್‌ರ ಸಮೀಕ್ಷೆ | ೧೭೯ | | ೫೪೪ | |
| ೧೯೨೧ರ ಜನಗಣತಿ | ೧೮೮ | | ೪೯ | |
| ೧೯೬೧ರ ಜನಗಣತಿ | ೧೮೪ | ೧೦೦೦೦ಕ್ಕೂ ಹೆಚ್ಚು ಜನ* | ೧೬೫೨ | ೫೨೭ |
| ೧೯೮೧ರ ಜನಗಣತಿ | ೧೧೨ | ೧೦೦೦೦ಕ್ಕೂ ಹೆಚ್ಚು ಜನ * | | |
| ಪೀಪಲ್ಸ್ ಆಫ್ ಇಂಡಿಯಾ ಯೋಜನೆ (೧೯೮೦-೯೦) | ೭೫ | | ೩೨೫ | |
| ಇವುಗಳನ್ನು ಒಟ್ಟಾಗಿ<br>೧೫೭೬ ಮಾತೃ ಭಾಷೆಗಳನ್ನು ೨೧೬ ಕ್ಕೆ ಹತ್ತು ಸಾವಿರಕ್ಕೂ ಹೆಚ್ಚು ಜನ<br>ಈ ೨೧೬ ಭಾಷೆಗಳನ್ನು ಪ್ರತಿಶತ ೯೯ ಜನ ಮಾತನಾಡುವರು | | | | |

೧. * ಭಾಷೆ-ಉಪಭಾಷೆಗಳು ಸೇರಿ ೧೬೫೨. ಇವುಗಳನ್ನು ಐದು ಭಾಷಾ ಪರಿವಾರಗಳನ್ನಾಗಿ ವರ್ಗೀಕರಿಸಲಾಗಿದೆ. ಆದರೆ ಮೂಲಭೂತವಾಗಿ ನಾಲ್ಕು ಭಾಷಾ ಪರಿವಾರಗಳನ್ನು ಗುರುತಿಸಬಹುದು ೧. ದ್ರಾವಿಡನ್ ೨. ಇಂಡೊ-ಆರ್ಯನ್ ೩. ಆಷ್ಟ್ರೋ-ಏಷ್ಯಾಟಿಕ್ ೪. ಟಿಬೆಟೋ-ಬರ್ಮನ್. ೨. * ಹತ್ತು ಸಾವಿರಕ್ಕೆ ಇರುವ ಪಾತಿವ್ರತ್ಯವೆನೆಂದು ಗೊತ್ತಿಲ್ಲ.

ಈಗ ಮತ್ತೆ ಭಾರತದ ಭಾಷೆಗಳ ಹೊಸ ಲೆಕ್ಕ, ಹೊಸ ಪಟ್ಟಿ ಸಿದ್ಧಪಡಿಸಿ ಆ ಭಾಷೆಯ ವ್ಯಾಕರಣ, ರಚನಾವಿನ್ಯಾಸ, ಎರವಲುಪದಗಳ ಪಟ್ಟಿ, ಆ ಪದಗಳ ಸಾಂಸ್ಕೃತಿಕ ಸಂಬಂಧ, ಪ್ರಭಾವ, ಪ್ರೇರಣೆ ಮತ್ತು ಸಾಂಸ್ಕೃತಿಕ-ಭಾಷಿಕ ನಂಟನ್ನು ಅರ್ಥೈಸಿಕೊಳ್ಳುವಂತಹದು. ಇದರಾಚೆ, ಒಂದು ಭಾಷಾಸಮುದಾಯದ ಜನರಿಗೆ ಈ ಸಮೀಕ್ಷೆಯಿಂದ ಬೇರೆ ಏನು ಲಾಭ ಅಂದರೆ ಆ ಭಾಷೆಯನ್ನು ಮಾತನಾಡುವ ಜನರಿಗೆ ಸಾಮಾಜಿಕ-ಸಾಂಸ್ಕೃತಿಕ-ಶೈಕ್ಷಣಿಕ ಅಗತ್ಯಗಳನ್ನು ಪೂರೈಸುವ ಯೋಜನೆಗೆ ಪೂರಕವಾದ ವ್ಯವಸ್ಥೆಯನ್ನು ರೂಪಿಸಲು ಸಾಧ್ಯವೇ? ನಿಜ, ಜನಸಾಮಾನ್ಯರ ಭಾಷೆಗಳನ್ನು ಅವುಗಳ ಸಾಮಾಜಿಕ-ಸಾಂಸ್ಕೃತಿಕ-ಭಾಷಿಕ ವಿವರಗಳನ್ನು ದಾಖಲಿಸುವರು. ಆದರೆ,

ಅವರ ಸಾಂಸ್ಕೃತಿಕ-ಶೈಕ್ಷಣಿಕ ಆಚರಣೆಗಳನ್ನು ಪೂರೈಸುವ ನಿಟ್ಟಿನಲ್ಲಿ ಭಾಷಾ ನೀತಿಯನ್ನು ರೂಪಿಸುವುದಕ್ಕೆ ಎಷ್ಟರ ಮಟ್ಟಿಗೆ ಸಹಕಾರಿಯಾಗುವುದು? ಹಾಗೂ ಒಂದು ಭಾಷಾ ಸಮುದಾಯದ ಭಾಷಿಕ ಆಶೋತ್ತರಗಳನ್ನು ಮತ್ತು ನಿರೀಕ್ಷೆಗಳನ್ನು ಈಡೇರಿಸುವುದಕ್ಕೆ ಇಷ್ಟೊಂದು (ರೂ. ೫೮೮ ಕೋಟಿಗಳು) ಹಣ ಖರ್ಚು ಮಾಡುವುದರ ಅಗತ್ಯವೇನು? ಎನ್ನುವುದು ಬಹು ಗಂಭೀರವಾಗಿ ಕೇಳಿಕೊಳ್ಳಬೇಕಾದ ಪ್ರಶ್ನೆ. ಅಂದು ವಸಾಹಾತುಶಾಹಿ ಸಂದರ್ಭದಲ್ಲಿ ಭಾರತೀಯರ ಎಲ್ಲ ಸಾಂಸ್ಕೃತಿಕ-ಸಾಮಾಜಿಕ-ರಾಜಕೀಯ ವಿವರಗಳನ್ನು ಅರ್ಥೈಸಿಕೊಳ್ಳುವ ಜರೂರತ್ತ ಇತ್ತು. ಅದಕ್ಕೆ ಸ್ಪಷ್ಟ ರಾಜಕೀಯ ಸಮರ್ಥನೆಯೂ ಇತ್ತು. ಆದರೆ, ಇವತ್ತಿನ ಈ ಸಮೀಕ್ಷೆ ಯಾವುದೇ ರಾಜಕೀಯ ಲಾಭಕ್ಕಾಗಿ ಮಾಡುವ ಅಗತ್ಯವಿಲ್ಲ. ಹಾಗಂತ, ಭಾಷಾ ಸಮುದಾಯದ ಎಲ್ಲ ನಿರೀಕ್ಷೆಗಳನ್ನು ಈಡೇರಿಸುವ ಇರಾದೆಯು ಈ ಸಮೀಕ್ಷೆಯ ಪ್ರಣಾಲಿಕೆಯಲ್ಲಿಲ್ಲ. ಆದರೆ ಒಂದು ಸಮಾಧಾನದ ಸಂಗತಿಯೇನೆಂದರೆ, ಉಪೇಕ್ಷಿತ ಜನಸಮುದಾಯದ ಭಾಷೆಗಳ ಅಂಕಿ-ಸಂಖ್ಯೆ, ವರ್ಗೀಕರಣ, ಕೊಡುಕೊಳ್ಳುವಿಕೆ, ಪ್ರಭಾವ, ಪ್ರೇರಣೆ, ಸಾಮಾಜಿಕಭಾಷಾಶಾಸ್ತ್ರೀಯ-ಜಾನಪದೀಯ ಹಾಗೂ ಸಾಂಸ್ಕೃತಿಕ-ಭೌತಿಕ ಮಾನವಶಾಸ್ತ್ರದ ವಿವರಗಳನ್ನು ದಾಖಲಿಸುವುದು. ಹೌದು, ಅವಸಾನದಂಚಿನಲ್ಲಿರುವ ಮತ್ತು ಬುಡಕಟ್ಟು ಇನ್ನೂ ಮುಂತಾದ ಭಾಷೆಗಳ ಡಾಕುಮೆಂಟೇಶನ್ ಮಾಡುವುದು ಬಹಳ ಪ್ರಮುಖವಾದ ಕೆಲಸ ನಡೆಯುವುದು. ಇದರಿಂದ ಇನ್ನೊಂದು ಭಾರತದ ದರ್ಶನವಾಗುವುದು. ಆದರೆ ಇದು ಕೇವಲ ಚಾರಿತ್ರಿಕವಾಗಿ ಲಾಭ ತರುವಂತಹದು ಮತ್ತು ಭಾರತದ ಭಾಷಿಕ-ಸಾಂಸ್ಕೃತಿಕ ವೈವಿಧ್ಯತೆಯನ್ನು ಅರ್ಥೈಸಿಕೊಳ್ಳಬಹುದು. ಶೈಕ್ಷಣಿಕ-ಸಾಮಾಜಿಕ-ಸಾಂಸ್ಕೃತಿಕವಾಗಿ ಹೆಚ್ಚೇನು ಮಾಡಲಾರದು ಎನ್ನುವ ಅಸಮಾಧಾನ. ಭಾರತೀಯ ಭಾಷಾನೀತಿ, ಯೋಜನೆ ಇನ್ನೂ ಹೆಚ್ಚು ಸಫಲವಾಗಬಹುದು. ಯಾಕೆಂದರೆ, ಈ ದೇಶದ ಹಲವು ಜಾತಿ, ಜನಾಂಗ, ಧರ್ಮ, ಬುಡಕಟ್ಟು ಭಾಷಾಸಮುದಾಯಕ್ಕೆ ಅವರದೇ ಭಾಷೆಯ ಮೂಲಕ ಅವರ ಸಾಂಸ್ಕೃತಿಕ ಅಗತ್ಯ ಮತ್ತು ಅಭಿವ್ಯಕ್ತಿಯನ್ನು ರೂಪಿಸಿಕೊಡುವ ಜರೂರತ್ತ ಯಾಕಿಲ್ಲ ಎನ್ನುವುದನ್ನು ಈ ಭಾರತದ ಭಾಷೆಗಳ ಹೊಸ ಸಮೀಕ್ಷೆಯಿಂದ ಕಂಡುಕೊಳ್ಳಬೇಕಾಗಿದೆ. ಈ ಸಮೀಕ್ಷೆಯ ಭಾಷಾವಾರು ಪ್ರಾಂತಗಳ ಪುನರ್ ವಿಂಗಡನೆಯಂತಹ ವಿಚಾರವಾಗಿ ಆಸಕ್ತಿ ತೋರದೆ ಇರುವುದು ಸಂತೋಷದ ವಿಷಯ. ಯಾಕೆಂದರೆ ಯಾವುದೇ ಭಾಷಾ ಪ್ರಾಂತಿಯ ದ್ವೇಷ-ಪ್ರೀತಿ/ಮೋಹವನ್ನು ಹುಟ್ಟು ಹಾಕುವ ಕಾರ್ಯ ಇದರಿಂದ ಆಗದೆ ಇರುವುದು ಸಾಂಸ್ಕೃತಿಕ ರಾಷ್ಟ್ರೀಯತೆಯ ಸ್ವಾಸ್ಥವನ್ನು ಕಾಪಾಡಬಹುದು.

ಇಷ್ಟೊಂದು ಚರ್ಚೆ ಮಾಡುವುದರ ಅಗತ್ಯವೇನೆಂದರೆ ಸಾವಿರಾರು ಭಾಷೆಗಳನ್ನು ಮಾತನಾಡುವ ಸಂದರ್ಭದ ಒಂದು ರಾಷ್ಟ್ರದಲ್ಲಿ ಕೆಲವೇ ಕೆಲವು ಭಾಷೆಗಳು ಪ್ರಾಮುಖ್ಯತೆಯನ್ನು ಪಡೆದುಕೊಂಡಿರುವ ಸನ್ನಿವೇಶದಲ್ಲಿ ಉಪೇಕ್ಷಿತ, ಬುಡಕಟ್ಟು ಜನರ ಭಾಷೆಗಳಿಗೆ ಯಾವ ಪ್ರಾಮುಖ್ಯತೆಯನ್ನು ಈ ಸಮೀಕ್ಷೆಯು ಪ್ರಯತ್ನದಿಂದ ಒದಗಿಸಿಕೊಡಬಹುದು? ಯಾಕೆಂದರೆ, ಶಾಸ್ತ್ರೀಯ ಭಾಷೆಯಂತಹ ಸ್ಥಾನಮಾನ ನೀಡುವ, ರಾಷ್ಟ್ರಭಾಷೆ ಎನ್ನುಹಣೆ ಪಟ್ಟಿಯನ್ನು ಕಟ್ಟುವ ಮತ್ತು ಸಂಪರ್ಕಭಾಷೆಯಾಗಿ ಇನ್ನೊಂದನ್ನು ರೂಢಿಸಿಕೊಳ್ಳುವ ಸಂದರ್ಭದಲ್ಲಿ ಸಣ್ಣ ಪ್ರಮಾಣದ ಜನಸಮೂಹ ಮಾತನಾಡುವ

ಭಾಷೆಯ ಗತಿ ಏನು? ನಿಜ, ಆ ಭಾಷೆಗಳನ್ನು ಗುರುತಿಸುವುದು, ಅವುಗಳ ಭಾಷಿಕ-ಸಾಂಸ್ಕೃತಿಕ ವಿವರಗಳನ್ನು ದಾಖಲಿಸುವುದು ನಿಜವಾಗಿಯೂ ಒಂದು ಭಾಷೆಯ ಸಂಗೋಪನಕ್ಕೆ ಬೇಕಾದ ಪೂರಕವ್ಯವಸ್ಥೆಯನ್ನು ಮಾಡುವುದು ಭಾಷಿಕ ಬಹುತ್ವತೆಯನ್ನು ಕಾಪಾಡುವ ಜವಾಬ್ದಾರಿಯಾಗಿದೆ. ಇದನ್ನೂ ಹೊರತುಪಡಿಸಿ ಏನು ಮಾಡಲಿಕ್ಕೆ ಸಾಧ್ಯ ಎನ್ನುವುದರ ಸಾಧ್ಯತೆಗಳನ್ನು ಗುರುತಿಸಬಹುದು. ಯಾಕೆಂದರೆ ಇವತ್ತಿನ ಸಾಮಾಜಿಕ-ರಾಜಕೀಯ ಸಂದರ್ಭದಲ್ಲಿ ಭಾಷೆಯ ಪಾತ್ರ ಅಗಾಧವಾದುದು. ಒಂದು ಸಮುದಾಯದ ಜನರ ಬದುಕನ್ನು ರೂಪಿಸಿಕೊಳ್ಳಲು ಬೇಕಾದ ಅನುಕೂಲತೆಗಳನ್ನು ದಕ್ಕಿಸಿಕೊಳ್ಳುವ ಸಂದರ್ಭಕ್ಕೆ ಭಾಷೆ ಅಗತ್ಯ. ಅಂದರೆ, ಶಿಕ್ಷಣ, ಉದ್ಯೋಗ, ರಾಜಕಾರಣ ಮುಂತಾದವುಗಳ ಸನ್ನಿವೇಶದಲ್ಲಿ ಭಾಷೆಯ ಪಾತ್ರ ಬಹಳ ಪ್ರಮುಖವಾದುದು. ಕೊನೆಯ ಪಕ್ಷ ಒಂದು ಸಮುದಾಯದ ಸಾಂಸ್ಕೃತಿಕ ಚಹರೆಗಳನ್ನು ಕಾಪಾಡಿಕೊಳ್ಳುವ ವಾತಾವರಣವಾದರೂ ನಿರ್ಮಾಣವಾಗಬೇಕು. ಅದೇನೆಂದರೆ, ಭಾರತದೇಶದ ಭಾಷೆ, ಭಾಷಾ ಭಿನ್ನತೆ, ವೈವಿಧ್ಯ, ಅನನ್ಯತೆಯನ್ನು ಕಾಪಾಡುವ ಮತ್ತು ಮರುಶೋಧಿಸಿಕೊಳ್ಳುವ ಅಗತ್ಯ ಸೃಷ್ಟಿಯಾಗಬೇಕು.

ಈ ಸಮೀಕ್ಷೆಯು ಜಾಗತೀಕರಣ ಮತ್ತು ಇಂಗ್ಲೀಷಿನ ಯಜಮಾನಿಕೆಗೆ ಇದು ಪ್ರತಿಕ್ರಿಯಿಸಬಹುದು ಎನ್ನುವುದು ಕೂಡ ಕುತೂಹಲದಾಯಕವಾದದ್ದು. ಯಾಕೆಂದರೆ ಸಾಂಸ್ಕೃತಿಕ-ಭಾಷಿಕ ಆಯಾಮಗಳನ್ನು ಗುರುತಿಸುವುದರ ಮೂಲಕ ಅಂಥ್ರೊಪೊಮೆಟ್ರಿಕ್ ದತ್ತವನ್ನು ಸಂಗ್ರಹಿಸಬಹುದು. ಇದರಿಂದಾಗಿ ಭಾರತದ ಎಲ್ಲ ಭಾಷಾಸಮುದಾಯಗಳ ಜೈವಿಕ-ಭಾಷಿಕ (Bio-Linguistic) ಮತ್ತು ಸಾಂಸ್ಕೃತಿಕ ವಿವರಗಳು ದಕ್ಕುವವು. ಈ ವಿವರಗಳ ಮುಖೇನ ಇಕೊ-ಕಲ್ಚರಲ್ ಹಾಗೂ ಪ್ರದೇಶ, ಪರಿಸರ ಭಾಷೆ/ಸ್ಥಳೀಯ ಸಂಸ್ಕೃತಿಗಳ ಅಂತರ್‌ಸಂಬಂಧಗಳನ್ನು ಗುರುತಿಸಿಕೊಳ್ಳಬಹುದು. ಈ ಗುರುತಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ಭಾರತದ ಸಾಂಸ್ಕೃತಿಕ-ಭಾಷಿಕ ವೈವಿಧ್ಯ, ಸಾಮೀಪ್ಯ, ಸಹಯೋಗ ಮತ್ತು ಸಾಮರಸ್ಯವನ್ನು ಮನಗಾಣಬಹುದು.

* * *

# ನನ್ನವ್ವ-೨

ನಾಗತಿಹಳ್ಳಿ ರಮೇಶ

ಅವ್ವ ಚೆನ್ನಾಗಿರಲೆಂದು
ಅವಳಿಗೊಂದು ಹೆಂಚಿನ ಮನೆ ಕಟ್ಟಿಸುತ್ತೇನೆ.
ಇದು ಅವಳಿಷ್ಟದಂತೆಯೇ
ಎಂದು ನನಗೆ ನಾನೇ ನಂಬಿ
ನಡುಮಧ್ಯೆ ಒಂದು ಗೋಡೆ ಎಬ್ಬಿಸಿ
ತಾಯಿ ಮಲಗಲಿ, ನೆರಳಲಿ
ಎಂದು ಯೋಚಿಸಿದ ಜೀವ ನಾನು.

ಕತ್ತಲು ಯಾಕೆ?
ಬೇಕಾದಾಗ ಬರಲಿ ಬೆಳಕು ಅಂತ.

ದೀಪ ಹಾಕಿಸಿ
ಕರೆದೆ ಅವ್ವನ
ನನ್ನ ಪ್ರೀತಿಯ ಮನೆಗೆ.
ಆನೆಯಂತೆ ಒಳನಡೆದ ಅವಳು
ನನ್ನ ಮುಖವ ತದೇಕಚಿತ್ತದಲಿ ನೋಡಿ
ಇರುವೆಯಂತೆ ಮುಗುಳು ನಕ್ಕಳು.

ಆ ರಾತ್ರಿ ಅಲ್ಲಿ ಮಲಗಿದಳು.

ಎಂದಿನಂತೆ ಮುಂಜಾನೆದ್ದು,
ಕಣ್ಣೊರಸಿಕೊಳ್ಳುತ್ತಾ ಮನೆ ನೋಡುತ್ತೇನೆ:
ಆಹಾ ದೈವವೇ ನಡೆಸಿದ ಆಟ.

ಎಲೆಕ್ಟ್ರಿಕ್ ವೈರುಗಳು
ಕೆಳಕ್ಕೆ ಕಿತ್ತು ಇಳಿಜಿದ್ದಿವೆ ಸತ್ತ ಬಲೆಯಂತೆ
ಸುಂದರವಾಗಿ ಕಡೆದಂತಿದ್ದ ಗೋಡೆಗಳು
ಯಾವುದೋ ಬಲವಾದ ಯುದ್ಧದಲಿ ಜಡಿದಂತೆ
ಉರುಳಿವೆ.

ಇವಳೇನು ಕುಲದೈವವೇ!
ಪಕ್ಕದಲ್ಲೊಂದು ಗುಂಡುಕಲ್ಲು,
ಹಾಸಿಗೆ ತುಂಬಾ ಹೊಲದ ಮಣ್ಣು;
ಸುಮ್ಮನೆ ಮಲಗಿದ್ದಾಳೆ. ಎಲ್ಲ ಕಿತ್ತಿಟ್ಟು.

ಸಂಜೆಯಾದಂತೆ
ಆ ಮನೆಯೊಳಗೆ ನಡೆವ ಅವಳು
ಕತ್ತಲೆಯೊಳಗಿಳಿದು
ಮಡುಗಟ್ಟಿ ಅಲೆವ ಮೌನಕ್ಕೆ
ಕತ್ತಲೆಗೆ ಬೆರಸುತ್ತಾಳೆ ಪದವ
ಬೀಸದ ಗಾಳಿಯ ನಡುವೆ
ಹೂವೊಂದು ಅರಳಿದಂತೆ
ಪದಗಳಾರಿ ಬರುವುವು
ಅವಳ ಸುತ್ತ ದುಂಬಿಯಂತೆ.

ಮುಂಜಾನೆ ಎದ್ದು
ಏನೋ ತರಾತುರಿ, ಲಘುಬಗೆ
ಕೈಯಲ್ಲೊಂದು ಚೀಲ.

ಯಾವುದೋ ಊರಂತೆ
ಹೋಗಬೇಕಂತೆ
ಅವರ ನೋಡಬೇಕಂತೆ
ಕಾಲಲಿ ಚಪ್ಪಲಿಯಿಲ್ಲ
ಊರ ಹೆಸರೇ ಗೊತ್ತಿಲ್ಲ
ತಲುಪೇ ಬಿಡುತ್ತಾಳೆ.

ಪಾದಗಳ ಸವೆದುಹೋದ ಗೆರೆಗಳ ಸಂದಿಯಲಿ
ಯಾವ ಪುಷ್ಪಕ ವಿಮಾನ ಅವುಚಿಟ್ಟುಕೊಂಡಿರುವಳೋ ಏನೋ
ದೈವವೇ ಬಲ್ಲ.

ಅವಳಿಲ್ಲದ ವೇಳೆ
ಅವಳದೇ ಚಿಂತೆ
ನದಿ ಬಿಟ್ಟು ತಾಯಿ ಮೀನು
ಎತ್ತ ಈಜುವುದೋ ಏನೊ
ಅಂದುಕೊಳ್ಳುವಷ್ಟರಲ್ಲಿ
ಮತ್ತೆ ಅವಳ ಪ್ರತ್ಯಕ್ಷ.

ಏನೋ ಹೇಳುತ್ತಾಳೆ
ಮಗುವಂತೆ ಕುಳಿತ ಗತ್ತು
ಸುತ್ತ ಕೂತ ನಮ್ಮ ಎಚ್ಚರಿಸುತ್ತದೆ,
ಇವಳು ತನ್ನದೇ ರಾಜ್ಯದಲಿ ರಾಣಿಯೇ ಇರಬೇಕು.

ನಾನು ಯುವರಾಜನೇ ಅಂದುಕೊಂಡು
ಅವಳ್ಹೇಳಿದ್ದನ್ನೆಲ್ಲ ಚಾಚುತಪ್ಪದೆ ಮಾಡಿ
ತಲೆ ಬಾಗುತ್ತೇನೆ.
ಸರಿಯೋ ತಪ್ಪೋ ತಿಳಿಯದೆ
ಅವಳಿಗದು ಸರಿಯೇ ಇರಬೇಕೆಂದು ನಂಬಿ
ಒಳಗೊಳಗೇ ಪುಳಕಿತಗೊಳ್ಳುತ್ತೇನೆ,
ಅದು ಕೊಡುವ ಅನುಭವಕ್ಕೆ.

ನಾನು ಕಟ್ಟಿದ ಆಟ
ನನ್ನನ್ನೇ ಎಳೆದುಕೊಂಡಿದೆ,
ಒಂದು ಕಾಯಿಯಂತೆ.

ನಾನು ಪ್ರತಿ ಹೆಜ್ಜೆ ನೆಗೆದು
ಆಟದ ಚೌಕಟ್ಟಿನೊಳಗೆ
'ಅವ್ವಾ'
ಎಂದು ಕೂಗುತ್ತೇನೆ,
ಮೊದಲು ಮಾಡಿದ ತಪ್ಪು.

ಅವಳು ನಾನೇಳಿದ್ದನ್ನೆಲ್ಲಾ
ನಂಬಿದಳು ಅಂತ
ಅತಿಯಾಗಿ ನಾನು ನಂಬಿದ್ದು
ನನಗೆ ನಾನೇ ನನ್ನ ಕೈಗಳ ಬಂಧಿಸಿಕೊಂಡು

ಮಾಡಿದ ಆ ತಪ್ಪಿಗೆ ಸಾಕ್ಷಿಯಾಗಿ ನಿಂತಿದ್ದೇನೆ.
ಇದಕ್ಕೆ ತೀರ್ಪು ಅವಳಿಂದಲೇ ಆಗಬೇಕು.

ಬಿದಿರ ಹೂ ದಾನಿ ಮಾಡುವಾತ
ಕಾಡೆಲ್ಲಾ ಅಲೆದ
ಬಿದಿರ ಹುಡುಕಲಿಕ್ಕಲ್ಲ
ಅವನು ಕಟ್ಟುವ ಹೂದಾನಿಯಲಿ
ಎಂಥೆಂಥ ಹೂವುಗಳು ಅರಳುವುವೋ ಎಂದು ನೋಡಲು
ತಾನೇ ಶ್ರೇಷ್ಠ ಎಂದು ಹೂ ನಂಬಿಬಿಟ್ಟರೆ
ಅದು ಹೂದಾನಿಗೆ ಭಾರ
ತಲ್ಲಣದೊಳಗಿನ ತೀರ್ಪಾದರೂ ಏನು?

ಇದು ಯಾವ ಸೆಕ್ಷನ್ ಕೋಡಿಗೂ ಬರುವುದಿಲ್ಲ.
ಇದಕ್ಕೆ ಸಾಕ್ಷಿಯಾಗಿ ಕರೆಯಲು
ನಿಮ್ಮ ಅನುಭವದ ಕೊರತೆ,
ಅಲ್ಲಿ ಸ್ವಲ್ಪ ಎಡವಟ್ಟಾದರೂ
ಬರುವುದು ನನ್ನ ಮತ್ತು ಅವ್ವನ ಕುತ್ತಿಗೆಗೆ.

* * *

# ಅವರು ನಡೆವ ದಾರಿ

ಲಕ್ಷ್ಮಣ ಬದಾಮಿ

ಅಬ್ಬಬ್ಬಾ ಅಂದರಽ ತೀನ್‌ಸೇ ಮನೆಗಳನ್ನ ತನ್ನ ಸೀಮೆಯೊಳಗಿಟ್ಟುಕೊಂಡು ಹಗಲು-ರಾತ್ರಿಗಳನ್ನು ದೂಡುತ್ತಿದ್ದ ಸಿರಿಪುರಕ್ಕ ಹಣ್ಮಂತ ತನ್ನ ಖುದ್ದು ಊರಾದ ದಾನಾಪುರವನ್ನು ತೊರೆದು ಬಂದುದರ ಕಾರಣವಿಷ್ಟಽ: ತನ್ನ ಜೀವವನ್ನೇ ಬಸಿದು ಜ್ವಾಪಾನ ಮಾಡಿದ ಅವ್ವ ತೀರಿಕೊಂಡ ಮ್ಯಾಲೆ ಆಕೆಯ ನೆನಪು ಅನ್ನೋದು ಇವನ ಜೀವಾನ ಅರೆಯಲಿಕ್ಕೆ ಹತ್ತಿತು. ಮೆಟ್ಟು ಬದಲಿ ಆದರಽ ಮರೆವು ಆಗಬಹುದು ಅನ್ನುವ ಹೆಂಡ್ತಿ ಸಲಹಾಕ್ಕ ತಲೆಯಾಡಿಸಿ, ಮೂಲ ತಳಾ ಆದರೂ ಚಿಂತಿ ಇಲ್ಲ, ಬಿಟ್ಟು ಬಿಡಬೇಕೆಂಬ ನಿರ್ಣಯಕ್ಕ ಬಂದು ಉಟ್ಟ ಬಟ್ಟೆಮ್ಯಾಲೆ ಹೇಣ್ತಿ ಊರಾದ ಸಿರಿಪುರಕ್ಕ ಬಂದಿದ್ದ. ಹೊನ್ನವ್ವನ ತವರು ಮನೆಯಾಗೇನು ನಿಟ್ಟಿಗೆ ನಿಟ್ಟು ಒಟ್ಟಿರಲಿಲ್ಲ. ದುಡಿಯೂದು; ತಿನ್ನೂದು. ಹೊಟ್ಟೆಗೆ ಬಟ್ಟೆಗೆ ಸವಾ ಇತ್ತು. ಇಂತಹ ಬೀಗರನ್ನ ಆಶ್ರಯಿಸಲಿಕ್ಕೇನು ಹಣ್ಮಂತ ಇಚ್ಛೆಸಿರಲಿಲ್ಲ. ತನ್ನ ರಟ್ಟ್ಯಾಗೂ ಶಗತಿ ಐತಿ. ಎಲ್ಲಿ ಯಾದ್ರು ಜೀತಕ್ಕ ಇದ್ದು ಎರಡು ಹೊಟ್ಟಿ ತುಂಬಿಸಿಕೊಳ್ಳುವಷ್ಟು ತಾಕತ್ತು ಐತಿ ಅನ್ನೋ ವಿಶ್ವಾಸದಿಂದ ಈ ಊರಿಗೆ ಬಂದಿದ್ದ.

ಅದ ಪ್ರಕಾರ ದೇಸಾಯಿ ಕಿಸ್ಟಪ್ಪನ ಮನೆಯಾಗ ಜೀತ ಶುರು ಮಾಡಿದ. ತೋಟದಾಗೊಂದು ಮನಿ, ಊರಾಗೊಂದು ಮನಿ; ಹಿಂಗಽಽ ಅಡಿವೆಯಾಗಿರೋ ಜಮೀನಿಗೂ ಊರಾಗಿರೊ ಮನಿಗೂಳಿಗೂ ಕಡಿಮೆ ಇರಲಿಲ್ಲ. ಹಣ್ಮಂತನಂತೆಯೇ ಇನ್ನುಽಽ ಇಬ್ಬರು ಆ ಮನೆಯಾಗ ಜೀತಕಿದ್ದರು. ಉಪ್ಪು, ಮೆಣಸಿನಕಾಯಿಗಾದ್ರೂ ಆಗುತ್ತ ಅಂತ ಅದಽಽ ತೋಟಕ್ಕ ಹೊನ್ನವ್ವ ಕೂಲಿ ಕೆಲಸಕ್ಕ ಹೋಗತೊಡಗಿದಳು.

ತ್ವಾಟದಾಗ ಬಿತ್ತುವ ಕೆಲಸ ನಡೆದಿತ್ತು. ತ್ವಾಟದ ಮನೆಯ ಮಾಡಿನಲ್ಲಿ ಗಿರ್ರನೇ ತಿರುಗುತ್ತಿದ್ದ ಪಂಖಾದತ್ತ ಮುಖಾ ಮಾಡಿ ಮುಂಜಾನಿಯ ನ್ಯಾರಿ ಮುಗಿಸಿ ಕಾಟದ ಮ್ಯಾಲೆ ದೇಸಾಯಿ ಪವಡಿಸಿದ್ದರು. ಬಿತ್ತುವ ಕಾಳು ಒಯ್ಯಲಿಕ್ಕೆಂದು ಹೊನ್ನವ್ವ ಮೈ ತುಂಬ ಸೆರಗು ಹೊತ್ತುಕೊಂಡು ಬಾಗಿಲ ಹತ್ತಿರ ನಿಂತು 'ಧಣೇರ ಬಿತ್ತೂ ಬೀಜ ಎಲ್ಲಿ ಅದಾವರಿ..?' ಅಂದ ಹೊನ್ನವ್ವಳತ್ತ ದಡಗ್ಗನ ಮುಖ ತಿರುಗಿಸಿ 'ಇಲ್ಲೇ ಕಾಟಾದ ಬುಡಕ ಅದಾವು, ಬಾ ಹೊನ್ನವ್ವ, ತುಗೋ ಬಾ' ಅಂದರು. ಆಕೆ ಹೊತ್ತಿದ್ದ ಸೆರಗನ್ನು ಇನ್ನಷ್ಟು ಸರಿ

ಮಾಡಿಕೊಳ್ಳುತ್ತ, ಒಂದಿಷ್ಟು ಅನುಮಾನಿಸುತ್ತ ಹೊಸ್ತಿಲ ದಾಟಿ ಒಳಗ ಬಂದು ಕಾಟಾದ ಬುಡಕ್ಕೆ ಕೈ ಹಾಕಿದಳು. ದೇಸಾಯಿ ಬಾಗಿ ನಿಂತ ಅವಳ ಭಂಗಿಯನ್ನ ಕಣ್ಣು ಪಿಳುಕಿಸದss ನೋಡಾಕ ಹತ್ತಿದ. ಹೆಸರಿನ ಹಾಂಗ ಆಕೆದೂ ಹೊನ್ನಿನಂಥ ಮೈ ಬಣ್ಣ. ಲಗ್ನ ಆಗಿ ಆರು ವರ್ಷವಾದರೂ ಮಕ್ಕಳಾಗದಿದ್ದಕ್ಕೋ ಏನೋ..? ದುಂಡು ದುಂಡುಗss ಉಳಿದಿರುವ ಆ ಮೈಮಾಟವನ್ನು ಇಂಚಿಂಚು ಪರೀಕ್ಷಿಸತೊಡಗಿದ. ಎಲ್ಲಿಯೂ. ಯಾವ ಕೊರತೆಯೂ ಅಂವ್ಹಗ ಕಾಣಿಸಲಿಲ್ಲ. ಬೀಜ ತುಂಬಿ ಬಾಯಿ ಕಟ್ಟಿಟ್ಟಿದ್ದ ಗೊಬ್ಬರ ಚೀಲವನ್ನು ಎಳೆದುಕೊಂಡು ತಲಿಮ್ಯಾಲೆ ಹೊತ್ತುಕೊಂಡು ದುಡು ದುಡು ಹೊಂಡುತ್ತಿರುವಾಗ, 'ನಿಂದರ‍್ರ ಹೊನ್ನವ್ವ' ಅಂದಿದ್ದು ಕೇಳಿ ನಿಂತಳು. 'ಅದರ ಕೂಡ ಇವ್ನಸೊಂದಿಷ್ಟು ಬೆರೆಸಿ ಬಿತ್ತರಿ' ಅಂತ ಪುಂಡಿಯದೋ... ಯಾವುದೋ ಬೀಜವಿದ್ದ ಸಣ್ಣ ಅರಿವೆ ಗಂಟನ್ನು ಅವಳ ಕೈಗಿಡುತ್ತ ಮೆತ್ತಗೆ ಮುಂಗೈಯನ್ನ ಸವರಿದ. ಆಕೆಗೆ ಭಯಂಕರ ಕಸಿವಿಸಿ ಅನಿಸಿ ಬಿರೀನೆ ಬಂದು ಬಿಟ್ಟಳು.

ಹೊನ್ನವ್ವಳಪ್ಪ 'ದೇಸಾಯರದು ಒಂದೀಟು ಸುಳಿ ಸುಮಾರೈತಿ. ನೋಡಿಕೊಂಡು ಕೆಲಸ ಮಾಡ್ರಿ' ಅಂದ ಮಾತಿನ ಅರ್ಥ ಈಗ ಅವಳಿಗಾಗಿತ್ತು. ಸಂಜೀಕೆ ಗಂಡ ಮನಿಗೆ ಬಂದ ಕೂಡಲೆ ದೇಸಾಯಿ ಮಾಡಿದ ಹುಚಗೆಂಡಿತನವನ್ನು ಅವನಿಗೆ ಹೇಳಿದಳು. ಅವನಂತೂ ಗಂಭೀರವಾದ ಯೋಚನೆಗೆ ಬಿದ್ದ. ದೀವ್ಲ ಕೂಲಿಗೆ ಬರ್ತಿದ್ದ ನೀಲಿ, ಗಂಗಿಯರು ಮಿನ್ನ, ಮಿನ್ಸಾ ಪತಲಗಳ್ನ ಹೊಕ್ಕಳ ಕಾಣುವಂಗ ಉಟ್ಟುಕೊಂಡು, ಅಂಥಾದ ಬಣ್ಣದ ಜಂಪರ‍್ನ ಇಡೀ ಡುಬ್ಬ ಕಾಣುವಂಗ ತೊಟ್ಟುಕೊಂಡು ಥೇಟು ನಾಟಕದ ಹೆಂಗ್ಸೂರಂಗ ಡೌಲು ಮಾಡಿಕೋಂತ ತಾಸು-ಎರ್ಡರ್ಡು ತಾಸಗಟ್ಟಲೆ ತ್ವಾಟದ ಮನಿಯಾಗ ಕುಂಡರ‍್ತಿದ್ದುದು ಅಂವ್ಹಗ ಯಾಕೋ ಸಂಶೇ ಬಡೀತು. ಹೇಣ್ತಿಗೆ 'ನಾಳಿನಿಂದ ನೀ ಕೆಲಸಕ್ಕ ಬರಬ್ಯಾಡ ಅಂದು ಬಿಟ್ಟ.

ಮರು ದಿವಸ ಕೆಲಸಕ್ಕ ಬರದಿದ್ದ ಹೊನ್ನವ್ವನ ಕುರಿತು ಹಣ್ಮಂತನನ್ನ ದೇಸಾಯಿ ವಿಚಾರಿಸಿದ. ಅವನು ಏನೋ ನೆವ ಹೇಳಿ ದೇಸಾಯಿಯನ್ನ ಸುಮ್ಮನಾಗಿಸಿ ತಾನೂ ಸುಮ್ಮನಾದರೂ ಒಳಗ ಮಾತ್ರ ಸಿಕ್ಕಾಪಟ್ಟೆ ಬೈದ. ಸಂಜೆ ಆದಾಗ ಬಣವೆ ಒಟ್ಟಿದ್ದ ಬಿಳಿ ಜ್ವಾಳದ ಒಣ ಮೇವನ್ನು ಹಿರಿದು ಹ್ವೊರಿ ಕಟ್ಟಿ, ಬಂಡಿಯೊಳಗ ಹೇರಿ ಮನಿ ಕಡೆಗೆ ಹೊರಟಿದ್ದರು. ಮೇವಿನ ಹ್ವೊರಿಗಳ ಮ್ಯಾಲೆ ಹಣ್ಮಂತ ಕುಂತಿದ್ದ. ಇನ್ನೊಬ್ಬ ಆಳಮನುಷ್ಯಾ ಬಸ್ಯಾ ಉದ್ದಗಿ ಮ್ಯಾಲೆ ಕುಂತು ಬಂಡಿ ಹೊಡಿಯಾಕ ಹತ್ತಿದ್ದ. ಹಾದಿಗುಂಟ ಬೆಳೆದಿದ್ದ ಗಿಡಗೂಳ ವಾಲಿ ಬಡಿದಾವು ಅಂತ ಇಂವ ಗಿಡ ಎದುರಾದಾಗಲೆಲ್ಲ ಕುಂತಲ್ಲೆ ಚೆಂಡು (ಗೋಣು) ತಗ್ಗಿಸ್ತಿದ್ದ. ಬಸ್ಯಾ ಎತ್ತಿನ ಬಾಲ ಮುರುದು 'ಹಲ್ಯೆ' ಅಂತ ಹುರುಪು ಮಾಡ್ತಿದ್ದ. ಎತ್ತುಗೂಳದು ಮನಿಕಡೆ ಮಾರಿ ಆಗಿತ್ತು. ಊರ ಸಮೀಪ ಆಥಂಗ ಹಾರಗಾಲ ಹಾಕಾಕ ಹತ್ತಿದೂವು. ಬಸ್ಯಾನ ಯಸನ ಎಲ್ಲಿತ್ತೋ ಯೇನ್..?! ಹಾದಿಮ್ಯಾಗ ಬಿದ್ದಿದ್ದ ದೊಡ್ಡ ಗುಂಡಗಲ್ಲು ಮ್ಯಾಲೆ ಬಂಡಿ ಹಾಯೀದು ತಪ್ಪಿಸಲಿಲ್ಲ. ಒಂದು ಗಾಲಿ ಅದರ ಮೇಲೆ ಹತ್ತಿದ್ದೇ ತಡ...!! ಬಂಡಿ ಒಪ್ಪಾರಿ ಆಗಿ ದುಡುಂನss ಉರುಳಿ ಬಿಟ್ಟಿತು. ಬಸ್ಯಾ ದಡಗ್ಗನ ಮಗ್ಗಲ ಜಿಗಿದು ನೆಲಕ್ಕೆ ಬಿದ್ದು ಒಂದಿಷ್ಟು ಮೊಣಕೈ, ಮೊಣಕಾಲು ಕೆತ್ತಿಸಿಕೊಂಡು

ಬಿಟ್ಟ. ಮೇವಿನ ಹ್ವೊರಿಗಳ ಜೋಡಿ ಹಣ್ಮಂತ ರೊಪ್ಪನೇ ನೆಲಕ್ಕೆ ಅಪ್ಪಳಿಸಿದ್ದ. ಅವನ ಬಲಮಗ್ಗುಲವೆಲ್ಲ ನೆಲಕ್ಕ ಅಪ್ಪಳಿಸಿದ್ದರಿಂದ ಬಲಗೈ ಮುರಿದಿತ್ತು. ಕಾಲೂ ಸಂದು ತಪ್ಪಿತ್ತು. ನಾದರ ರಂಗಪ್ಪ ಮುತ್ತ್ಯಾ ಬಂದು ಕೊಬ್ಬರಿ ಎಣ್ಣೆ ಕಾಲು ತಿಕ್ಕಿದ, ಕೈಗೆ ಬಿದಿರು ಪಟ್ಟಿ ಬಿಗಿದು ತಂಬಲ ಅರಿವೆ ಸುತ್ತಿದ. ರಗತದ ಮಾರಿ ಆದಲ್ಲೆಲ್ಲ ಅರಶಿಣ ಬೇರು ತೇಯ್ದು ಹಚ್ಚಿದ್ರು.

ಹದಿನೈದಿಪತ್ತು ದಿವಸಗಳು ಮುಗಿದು ತಿಂಗಳಾದರೂ ಹಣ್ಮಂತ ಮೊದಲಿನಂಗಾಲಿಲ್ಲ. ಪುಣ್ಯಕ್ಕೆ! ಅವ ಇನ್ನೊಬ್ಬರ ಸ್ವಾದ್ನಿ ಆಗುವುದು ತಪ್ಪಿತು. ತನ್ನಿಚ್ಚೆ ತಾನs ಹೊರಕಡಿಗೆ ಹೋಗಿ ಬರುವುದು, ಸಣ್ಣದಾಗಿ ನಡೆದಾಡಲಿಕ್ಕೂ ಶುರು ಮಾಡಿದ. ಆದರೆ ಕುಂಟಿ –ಕೂರಗಿ ಹಿಡಿದು ಬಾಳುವೆ ಮಾಡೂ ಗಟ್ಟಿ ಮುಟ್ಟಿ ಮನಶ್ಯಾ ಮಾತ್ರ ಆಗಲಿಲ್ಲ. ಇಷ್ಟು ದಿನವೂ ಸುಮ್ಮನ ಕುಂತಿದ್ದ ದೇಸಾಯಿ; ಯಾವಾಗ ಹೊನ್ನವ್ವ ತನ್ನ ಹೊಲಗೂಳ ಕೂಲಿಗೆ ಬರದೇ ಬ್ಯಾರೆ ಊರ ಮನಿಯವರ ಕೂಲಿಗೆ ಹೊಂಡತೊಡಗಿದಳೊ ಅಲ್ಲಿಂದ ಎದ್ದು ಕುಂತು, 'ಹೆಂಡತೀನ್ನ ತನ್ನ ತ್ವಾಟದಾಗ ಕೂಲಿಗೆ ಕಳಸು, ಇಲ್ಲ, ಜೀತದ ರೊಕ್ಕ ತೀರಿಸು' ಅಂತ ಹಣ್ಮಂತಗ ಉಪದ್ರ ಹಚ್ಚಿದ. ದೇಸಾಯಿಯ ಹಗ್ಗ ತಿನ್ನುವ ಚಾಳಿ ತಿಳಿದೂ ಅವನಲ್ಲಿಗೆ ಹೆಂಡತೀನ ಕೂಲಿಗೆ ಕಳಿಸುವ ಮನಸ್ಸಾಗಲಿಲ್ಲ. ಹಂಗಾಗಿ ಅವನ ಜೀತದ ರೊಕ್ಕವನ್ನೇ ಮುಟ್ಟಿಸಬಿಡಬೇಕೆಂದು ಬಡಾ ಬಡಾ ತನ್ನ ಊರಲ್ಲಿಯ ಇದ್ದಾಟ ಮನೆಯನ್ನ ಮಾರಿಬಿಟ್ಟ.

ದೇಸಾಯಿಗೆ ಕೊಡುದು ಕೊಟ್ಟು, ಉಳಿದಿದ್ದರಾಗ ಈಗ ಎರಡು ಆಡುಗಳನ್ನ ಅಮೀನಗಡ ಸಂತ್ಯಾಗ ಕೊಂಡ ತಂದಿದ್ದ. ಮುಂಜಾನೆದ್ದು ಮೂರ್ನಾಲ್ಕ ತಾಸು ಹೊತ್ತು ಏರಿಂದ ಅವುಗಳ್ನ ಹಿಡ್ಕೊಂಡು ಊರ ಮುಂದಿನ ಹೊಲದ ಬೇಲಿ ಮ್ಯಾಲ ಮೇಯಿಸ್ಕೊಂಡು ಬರೋದು; ಒಂದೊಂದ ದಿನ ಗುಡ್ಡದ ಕಡೆ ತಿರುವಿಕೊಂಡು ಹೋಗುದು ಮಾಡ್ತಿದ್ದ. ಅದೇನು ಅಂವುಗ ದೊಡ್ಡ ದುಡಕಿ ಅಂತ ಅನಿಸಿದ್ದಿಲ್ಲ. ಸುಮ್ಮನ ಟಾಯೆಮ್ಮು ಪಾಸು ಮಾಡಾಕ ಒಂದ್ ಹಾದಿ ಅಂತ ತಿಳಿದಿದ್ದ. ಹೀಗಾಗಿ ಮನಿ ಭಾರವೆಲ್ಲ ಹೊನ್ನವ್ವನ ಮ್ಯಾಲೆ ಬಿದ್ದಿತ್ತು. ಒಕ್ಕುಲತನದ ಊರಾಗ ಹನ್ನೆರ್ಡ ತಿಂಗ್ಳಾನು ಕೂಲಿ ದಗದಾ ಎಲ್ಲಿ ಇರ್ತಾವು ? ಸುಗ್ಗ್ಯಾಗ ಅಷ್ಟು ಜೋರ. ಉಳಿದ ದಿನದಾಗ ಗುಡ್ಡಾಗವ್ವಾರ ತಿರಗೂದು, ಕುಳ್ಳು–ಕಟಿಗೆ ತಂದು ಹಾಕ್ಕೊಳ್ಳುದು; ಹಿಂಗss ಒಣಾ ಒಣಾ ಟಣಾ ಟಣಾ. ಮನಿ ಸಾಗಸೂದು ಭಾಳ ಬಿರೀ ಅನಸತಿತ್ತು. ಇಂಥ ದಿನಗೂಳಾಗ ಒಂದು ದಿವಸ ಕಾಕುಳ್ಳ ತರಾಕ ಹೋಗಿ ಇಡೀ ಗುಡ್ಡಾನss ಅಡ್ಡಾಡಿದರೂ ಹೆಂಡಿ ಹೆಡಗಿಯಾಸ ಕುಳ್ಳ ಹೊಂಡಲಿಲ್ಲ. ಜೋಡಿಲೆ ಬಂದವರು 'ಚಂದಾ ಮಾಡ್ಲಿ', ಬೆಂಕಿ ಹಚ್ಚಲಿ' ಅಂತ ಕಾಕುಳ್ಳಿಗೆ ಶಾಪಾ ಹಾಕಿದ್ರು. 'ಹಿಡಿಯಾಸು ಕುಳ್ಳು ತಲಿಮ್ಯಾಲೆ ಹೊತ್ಗೊಂಡು ಊರಾಗ ಹೋಗುದು ಅಂದ್ರ... ನಾಚಿಗೆ ಸಾವss ಆಗುತ್ತವ ಯವ್ವ..!! ಅಂತಂದು ಕುಳ್ಳು ಆರಿಸೂದು ಬಿಟ್ಟು, ಕಟ್ಟಿಗೆ ಮಾಡಾಕ ನಿಂತರು. ಮುಳುಗಳ್ಳಿ, ಮಶಾಳ, ಅಂಥಾವು–ಇಂಥಾವು ಅನ್ನದs ಕೈಗೆ ಸಿಕ್ಕೂವು ಆರಿಸ್ಗೊಂಡು, ಹ್ವೊರಿ ಕಟಿಗೊಂಡು ಒಬ್ಬರಿಗೊಬ್ಬರು ಹೊರಿಸಿ ಹೊತ್ತಗೊಂಡು ಗುಡ್ಡಾ ಇಳಿಯುವುದಕ್ಕೂ ಅತ್ಲಾಗ ವಾರಿ ಕಡೆ ಕರಿಯಪ್ಪ ಕಾಗಾರ ದನಾನ ಗುಡ್ಡಾ ಇಳಿಸುವುದಕ್ಕೂ ಮೇಳ ಆತು.

ಕಲ್ಲುಗುಳ ಕುಟ್ಟರಿಯೇ ಕಟ್ಟೆಯಾಗಿದ್ದ ಆ ಕಟ್ಟೆ ಮ್ಯಾಲೆ ಕಟ್ಟಿಗಿ ಹ್ವೊರೆಯನ್ನೊಗೆದು ಒಳಗ ಬಂದು, ಒಂದಚರಿಗೆ ನೀರು ಗಳಗಳ ಕುಡಿದು, ಬಾಗಿಲ ಮುಂದ ಮುಖ-ಮಾರಿ ಒರೆಸಿಕೊಳ್ಳುತ್ತ ಕುಂತಿದ್ದಳು. ಆದss ಹೊತ್ತಿಗೆ ಓಂದಲ ಮನೆಯ ಸಿದ್ದವ್ವ ಬಾಗಲಕೋಟೆಯ ಖಾನಾವಳಿಯಾಗ ದಿನಾ ರೊಟ್ಟಿ ತಟ್ಟಾಕ ಹೋಗುತ್ತಿದ್ದ ಆಕಿ ಅಲ್ಲಿಂದ ಬರುವಾಗ ತನ್ನ ಕುಡುಕ ಗಂಡನಿಗೂ ಮೂರನೇ ಯತ್ತಾ ಸಾಲಿಗೆ ಹೋಗೂ ಮಗನಿಗೂ 'ಸಂಜೀಕೆ' ಅಂತ ತರುತ್ತಿದ್ದ ಬುತ್ತಿಯ ಕೈಚೀಲವನ್ನು ಬಗಲಲಿಟ್ಟುಕೊಂಡು ಬರುತ್ತಿದ್ದ ಆಕೆ 'ಯಾಕವ್ವಾ ಕುಂತಿಯಾ' ಅಂತ ಹೊನ್ನವ್ವ ಕುಂತಿದ್ದನ್ನು ಕಂಡೂ ಮಾತಾಡಿಸುವ್ರದಕ್ಕೆ ಮೊದಲು ಕಾರಣವಾಗಿ ಹಾಗೆ ಅಂದು ಮನಿ ಮುಂದ ಬಿದ್ದಿದ್ದ ಕಟ್ಟಿಗೆ ಹೊರೆಯನ್ನು ನೋಡಿ 'ಕಟಗ್ಗೆ ಹೋಗಿದ್ದೆನು' ಅಂತ ಕೇಳಿದಳು. 'ಹೂಂ, ಕುಳ್ಳಿಗೆ ಅಂತ ಹೋಗಿದ್ನೆವಾ. ಇಡೀ ಗುಡ್ಡಾನಾ ತಿರುಗಿದರೂ ಓಡಿ ಕುಳ್ಳು ಸಿಗಲಿಲ್ಲ. ಕಡೀಕ ಒಂದೀಸು ಕಟ್ಟಿಗ ಕಟಕೊಂಡು ಈಗss ಬಂದೀವಿ ನೋಡು. ಯೇನ್ ಕೇಳ್ತಿಯಕ್ಕಾ... ನಿಂದು ಪಾಡ ನೋಡವಾ; ಮುಂಜಾನೆ ಹೋಗುದು, ಚಂಜೀಕೆ ಆರಾಮ ಬಂದು ಬಿಡೋದು' ಅಂತ ಬ್ಯಾಸತ್ತು ಬಂದಿದ್ದ ಹೊನ್ನವ್ವ ತನ್ನ ಇಡೀ ಬಾಳೇವದ ಬಗ್ಗೇನ ಬ್ಯಾಸರ ಆಗಿರುವಂಗ ಮಾತಾಡಿದಾಗ, 'ಹೂಂ ಪಾಡ, ಭಾಳ ಪಾಡ ನೋಡು' ತನ್ನನ್ನ ತಾನ ಅಣಕಿಸಿಕೊಂಡು 'ಬರ್ತಿಯೇನು ನೀನು...?!' ಅಂತ ಕಂಕುಳದಾಗ ಜಾರುತ್ತಿದ್ದ ಆ ಗೊಬ್ಬರದ ಕೈ ಚೀಲವನ್ನು ಎತ್ತಿ ಕುಕ್ಕರಿಸಿಕೊಂಡು ಸುಮ್ಮನss ಮುಗುಂ ಆಗಿ ಅಂದಳು. ಈಕಿನೂ 'ಬರಲ್ಯಾ...?!' ಅಂತ ನಕ್ಕಳು. 'ಬಾ.. ಅಲ' ಅನ್ನಕೋಂತ ಸಿದ್ದವ್ವ ಮನ್ನಡೆದಿದ್ದಳು.

ಚಿಮಣಾ ದಿನಾ ರಾತ್ರಿ ಯಗ್ಗಳಾಗಿ ಉರಿದುರಿದು, ಅದರ ಹೊಗೆ ಜಂತಿಯ ಜಾಗದಲ್ಲಿದ್ದ ಮ್ಯಾಲಿನ ತಗಡಿಗೆ ಅಡರಿ ಅವು ಕರ್ರುಗ ಹಗ್ಗಣ ಆಗಿದ್ದುವು. ಅವರಿಬ್ಬರೂ ಉಂಡು ಮಲಗಿದ್ದರಿಂದ ಈಗ ಚಿಮಣಾ ಸಣ್ಣದಾಗಿ ಉರೀತಿತ್ತು. ಸಿದ್ದವ್ವ ಸುಮ್ಮನs ಒಗೆದಿದ್ದ ಕಾಳು ಹೊನ್ನವ್ವನ ಮನಸ್ಸಿನ್ಯಾಗೀಗ ಬೀಜ ಆಗಿ ಹಣ್ಮಂತನ ಮನಸ್ಸನ್ನು ಕದಲಿಸಿ ಅವನಿಂದಲೂ ಕಬೂಲ ಅನಸಿತ್ತು.

***

ಹಣ್ಮಂತ ತಂದಿದ್ದ ಆಡಿನ ತಳಿ ಭಾರೀ ಚುಲೊ ಇತ್ತು. ಅವು ಸೂಲಕ್ಕss ಎರಡು-ಮೂರಕ್ಕ ಕಡ್ಮಿ ಇರಲಾರಧಂಗ ಇಳಿತಿದ್ದುವು. ಹೆಚ್ಚಾಕುಲ ಆಗುತ್ತ ಆಗುತ್ತೆ ಈಗ ಹನ್ನೆರ್ಡ್ಡ ಬದುಕು ಆಗಿದ್ದುವು. ಅವನ್ನೆಲ್ಲ ತಿರುವಿಕೊಂಡು ಈಗ ಮಸಾರಿ ದಾರಿ ಓಡಿದು ಹೊಂಟಿದ್ದ. ಇನ್ನss ಮುಂಜಾನಿಯ ಹತ್ತು ಮೀರಿದ್ದಿಲ್ಲ. ಆಗss ಬಿಸಲು ಭಾರಿ ಕಾಕು ಪಡೆದಿತ್ತು. ಇಂಥ ಹೊತ್ತಿಗೆ ನೆರಕಿಯವರ ಮನಿ ಮುಂದಿನ ಅರಳಿಗಿಡದ ಕಟ್ಟಿ ಫನ ಓತ! ಅನಸತಿತ್ತು. ಅಲ್ಲೆ ಬರೇ ಅರಳಿಗಿಡ ಒಂದss ಇರಲಿಲ್ಲ. ಅದರ ಬಡ್ಡಿಗೆ ಬೆಸೆದುಕೊಂಡಂಗss ಬೇವಿನ ಗಿಡಾನು ಸೈತ ಅರಳಿಗಿಡದೆತ್ತರಕ್ಕ ಬೆಳೆದು ನಿಂತಿದ್ದರೂ ಆ ಕಟ್ಟಿಯನ್ನು ಅರಳಿಗಿಡದ ಕಟ್ಟಿ ಅಂತss ಕರೆಯುತ್ತಿದ್ದರು. ಊರಾಗ ಭಾಳಷ್ಟು ಬೇವಿನಗಿಡ ಮತ್ತ ಅದರ ತೆಳಗ ಒಂದಿಷ್ಟು ಕಟ್ಟಿಗೂಳು ಇದ್ದಂಥವು ರಗಡss ಇದ್ದೂವು. ಆದರ ಅರಳಿಗಿಡ, ಅದರ ತೆಳಗ ಕಟ್ಟಿ ಅಂಥಂತಿದ್ದಿದ್ದು ಇದು ಒಂದss. ಹಂಗಾಗಿ ಇದಕ್ಕ

ಅರಳಿಗಿಡದ ಕಟ್ಟಿ ಅನ್ನೂ ಹೆಸರು ಬಿದ್ದಿರಬಹುದಾದರೂ; ಎಲ್ಲದುರೊಳಗೂ ಎದ್ದು ಕಾಣುವುದನ್ನೇ ದಡಗ್ಗನೇ ಲೆಕ್ಕ ತೆಗೆದುಕೊಳ್ಳುವುದರಿಂದಲೂ ಹಂಗಾಗಿರಬಹುದು. ಇದ್ಯಾವುದನ್ನು ಎಣಿಸದ ಆ ಗಿಡಗುಳೆರಡು ಮಾತ್ರ ತಮ್ಮ ಎಲೆ, ಟೊಂಗಿ, ರೆಂಬಿಗಳಿಂದ ಸೂರ್ಯನತ್ತ ಮುಖ ಮಾಡಿ ತೆಳಗಿನ ತಮ್ಮ ವ್ಯಾಪ್ತಿಯ ಪ್ರದೇಶವೆಲ್ಲಾನೂ ತಂಪೆಂದರೆ ತಂಪು ಮಾಡಿ ಬಿಟ್ಟಿದ್ದವು.

ಬಿಸಲು ಹೊಯ್ಯುತ್ತಿದ್ದ ಆ ಹೊತ್ತಿನ್ಯಾಗ ತಂಪಾನು ತಂಪು ಸೂಸುತ್ತಿದ್ದ ಆ ಕಟ್ಟಿ ಮ್ಯಾಲ ಕುಂತವರಂದ್ರ ದೇಸಾಯಿ ಕಿಸ್ಟಪ್ಪ, ನೆರಕಿ ನಿಂಬಣ್ಣ ಹಿರಿಯ, ಕುರಿ ಯಮನಪ್ಪ ಮುತ್ತ್ಯಾ.

'ಹವಾದ ಮ್ಯಾಗ ಬರ್‍ತಾವು ಅಂಥ ಮಾಡಿದ್ವೆಪಾ ಜ್ವಾಳ. ಈಗ ನೋಡಿದರ ಎಲ್ಲಾ... ಜೋತು ಮಾರಿ ಇಟ್ಟಾವು' ನಿಂಬಣ್ಣ ಹಿರಿಯ ಮಾತು ತೆಗೆದ. 'ಹೌದ ಕಾಕಾ ತತಿ ಹಿಂದ ಮುಂದ ಆಗೆವಲ್ಲ...' ಅಂತ ಇನ್ನsss ಮುಂದಕ್ಕ ಏನೋ ಹೇಳಾಂವ ಇದ್ದ; ಅಲ್ಲಿಗೆ ಸರಿಯಾಗಿ ಹೊನ್ನವ್ವ ಮತ್ತ ಸಿದ್ದವ್ವರಿಬ್ಬರು ಟೋಪು ತೆನಿ ತಿರುವಿದ, ರೇಶ್ಮಿ ಸೆರಗಿನ ಇಳಕಲ್ಲ ಸೀರಿ (ನಾಲ್ಕ ತಿಂಗಳಿಂದಲೂ ಪಗಾರ ಹೆಚ್ಚು ಮಾಡು ಅಂತ ಗಂಟು ಬಿದ್ದವರ ಬಾಯಿ ಮುಚ್ಚಿಸಲಿಕ್ಕೆ ಕೊಟ್ಟಿದ್ದ ದುಬಾರಿ ಸೀರೆ) ಉಟ್ಟುಕೊಂಡು ಹೊಂಟಿದ್ದರಿಂದ ಹೊನ್ನವ್ವಳನ್ನು ಕಣ್ಣಾಗ ತುಂಬಿಸಿಕೊಳ್ಳುವುದಕ್ಕಾಗಿ ದೇಸಾಯಿ ಮಾತು ನಿಲ್ಲಿಸಿದ. ಕಣ್ಣು ಕುಕ್ಕುತ್ತಿದ್ದ ಆ ಸೆರಗಿನ್ಯಾಗಿನ ಕಂಪು ಪಟ್ಟಿಗಳೊಳಗ ಬಿಳೀ ಪಟ್ಟಿ ಎದ್ದು ಕಾಣುವಂಗ; ಇಬ್ಬರೂ ಒಂದs ನಮೂನಿಯ ಅಸದಪ್ಪಳ, ಚಿಕ್ಕಿ ಫರಾಸ್ ಪೇಟಿ ದಡಿಯ ಸೀರಿ ಉಟ್ಟಿದ್ದರೂ ಹೊನ್ನವನsss ಅವರಿಬ್ಬರೊಳಗೂ ಕಣ್ಣಿಗೆ ನಡುತ್ತಿದ್ದಳು. ಸಿದ್ದವ್ವನ ಗಂಡ ಆಕೀನ್ನ ನಿಂದ್ರಿಸಿ ನೀರು ಕುಡಿಸಿ ಕೊಡುತ್ತಿರಲಿಲ್ಲ. ಮುಂಜಾನೆದ್ದು ಚಾ' ಕ ರೊಕ್ಕ ಕೊಡು, ಮದ್ಯಾನ್ನ ಚುಟ್ಟಾಕ ಕೊಡು, ಚಂಜೀಕೆ ಸೇರೆಕ ಕೊಡು ಅಂತ, ಒಂದsss ಅಳತಿ ಜೀವ ತಿಂದು ಜೀರಗಿ ಅರೆತಿದ್ದ. ಒಣ ದಂಟಿನಂತಾಗಿದ್ದ ಆಕೀ ಉಟ್ಟುಕೊಂಡ ಸೀರೆಯಂತೂ ಒಂದು ಕೋಲಿಗೆ ಸುತ್ತಿದಂಗಾಗಿತ್ತು. ಹೊನ್ನವ್ವನದು ಯಾರ ನಿಗ್ರಹ ಇಲ್ಲದ ಉಭಾರಿದ್ದ ಜೀವ ಅದು. ಆಕೆಯ ತಲೆ ಮೇಲಿಂದ ತುಂಬು ತೋಳು, ಬೆನ್ನಮೇಲೆಲ್ಲಾ ಹರಡಿದ್ದ ಆ ಸೆರಗಿನಲ್ಲಿಯ ಕುಸುರಿತನ ನಿಚ್ಚಳಾಗಿ ಕಾಣತಿತ್ತು. ಅವರಿಬ್ಬರು ಬಸೋಣ್ಣ ದೇವರ ಗುಡಿಗೆ ಮರೆಯಾದ್ರೂ ದೇಸಾಯಿ ನೋಡುತ್ತಲೆ ಇದ್ದ. 'ಹ್ಯ... ಹ್ಯ' ಯಮನಪ್ಪ ಮುತ್ತ್ಯಾ ಜೋರಾಗಿ ಕೆಮ್ಮಲು ಸುರುಮಾಡಿದಾಗ ಅವನ ಲಕ್ಷ್ಯ ಇತ್ಲಾಗ ಬಂತು. ಗಂಟಲದಾಗ ಸಿಗಿ ಹಾಕ್ಕೊಂಡ ಕಫದ ಲೊಟ್ಟೆಯನ್ನ ಕ್ಯಾಕರಿಸಿ ನಾಲಿಗೆ ಮೇಲೆ ತಂದುಕೊಂಡು ನೆಲಕ್ಕ ಉಗುಳಬೇಕೆಂದು ಎಷ್ಟು ಪ್ರಯತ್ನಿಸಿದರೂ ಅದು ಸಾಧ್ಯ ಆಗಲಿಲ್ಲ. ಆಗ ನೇರ ಬಾಯಿಗೆ ಕೈ ಹಾಕಿ ಆ ಲೊಟ್ಟೆಯನ್ನು ಹೊರಗೊಗೆದ. ಇವನೌನ ಈ ಮುದೊಡ್ಯಾ ಸೂಮಗಾ ತಣ್ಣಗ ಮನ್ಯಾಗ ಕುಂದ್ರುದು ಬಿಟ್ಟು, ಬಂದು ಈ ಕಟ್ಟಿಗೆ ಜೋಡ ಆಗಿ ಬಿಡ್ತಾನ ಇದಿ ಸೂಮಗ, ಅಂತ ತನ್ನ ನೋಟಕ್ಕೆ ಅವನ ಕೆಮ್ಮಿನಿಂದ ಭಂಗ ಆದುದಕೋ; ಅವನ ಅಸಹ್ಯತನಕ್ಕೊ ಸಿಟ್ಟಿಗೆದ್ದು ದೇಸಾಯಿ ಮನಸ್ಸಿನ್ಯಾಗ ಬೈಯ್ದುಕೋಂತ ಕಟ್ಟಿಯಿಂದ ಕೆಳಗಿಳಿದ. 'ಬಾರೋ ದೇಸಾಯಿ ಎದ್ದೆಲ್ಲಾ... ಹ್ಹು... ಹ್ಹೂ...' ಗೂರಕೋಂತ ಯಮನಪ್ಪ ಮುತ್ತ್ಯಾ ಕರೆದರೂ ಅವನ ಮಾತು ಕಿವಿಗೆ ಹಾಕ್ಕೊಳ್ಳಲಿಲ್ಲ.

ಅವನು ಮನಿಯಾಗ ಕಾಲಿಟ್ಟ ಜೆನ್ನ ಕಾಲ ಮ್ಯಾಲೆಯೇ 'ದೇಸಾಯೇರ...' ಅಂತ ಕೂಗಿದ್ದು ಕೇಳಿ ಗೋಣು ಹೊರಳಿಸಿದ. ಪರಬುಶೆಟ್ಟಿ ತಲ ಬಾಗಿಲ ಪಾವಟಿಗೆ ಮ್ಯಾಲಿ ನಿಂತಿದ್ದ 'ಹೈ!! ಬರ್ರಿ ಶೆಟ್ಟೇರ ಬರ್ರಿ ಬರ್ರಿ...' ಅಂತ ಅವಸರ ಮಾಡಿ ಪರಬು ಶೆಟ್ಟಿಯ ಕೈ ಹಿಡಿದು ಪರಾಂಬರಿಸುತ್ತ ಕರೆತಂದು ಪಡಸಾಲಿಯ ಕಟ್ಟಿ ಮ್ಯಾಲೆ ಕುಂದ್ರಿಸಿ, ಅವನಿಗೆ ಎದುರಾಗಿ ತಾನು ಕುಂತನು. ಮಳಿ-ಬೆಳಿ, ಕಷ್ಟ-ಸುಖದ ಲೋಕಾರೂಢಿ ಮೀಟಿಕೆಯ ಮಾತುಗಳೆಲ್ಲ ಮುಗಿದ ಮ್ಯಾಲೆ ಶೆಟ್ಟಿ, ತನ್ನ ಉದ್ದಂಗಿಯ ಮುಂದಲ ತುದಿ ಎತ್ತಿ ಕುಂಬಳಂಗಿಯ ಹೊಟ್ಟಿ ಕಿಸೆಗೆ ಕೈ ಹಾಕಿ, ನೋಟಿನ ಸುರಳಿ ತೆಗೆದು ಎಣಿಸಿ 'ತುಗೊರಿ ದೇಸಾಯೇರ, ನಿಮ್ಮ ಜ್ವಾಳದ ರೊಕ್ಕಾ. ದೀಪಾಳಿಗ್ಗೆ ಕೊಡ್ತೀನಿ ಅಂದಿದ್ದ್ಯಾ, ಆ ಪ್ರಕಾರ ತಂದೇನಿ ನೋಡ್ರಿ' ಅಂತ ಎರಡು ತಿಂಗಳ ಹಿಂದ ಒಯ್ದಿದ್ದ ಎರಡು ಚೀಲ ಜ್ವಾಳದ ರೊಕ್ಕವನ್ನು ದೇಸಾಯಿ ಮುಂದೆ ಹಿಡಿದ. ನೈವೇದ್ಯ ಮುಂದಿದ್ದರೂ ಕಣ್ಣೆತ್ತಿ ನೋಡದ ದೇವರ ಮೂರ್ತಿಯಂತೆ, ಮುಂದೆ ಹಿಡಿದಿದ್ದ ರೊಕ್ಕವನ್ನು ಮುಟ್ಟಲಾರದೇ ಕೈ ಅಡ್ಡ ಹಿಡಿದು 'ಶೆಟ್ಟೇರ, ಸಧ್ಯಕ್ಕೆ ನನಗೇನು ರೊಕ್ಕ ಹರ್ಕತ್ ಆಗಿಲ್ಲ. ಇನ್ನ ನಾಕ ತಿಂಗಳ ತಡದು ಕೊಡ್ರಿ, ನಡಿತೈತಿ' ಅಂದೊಡನೆ ಶೆಟ್ಟಿಗೆ ಆಶ್ಚರ್ಯ ಆಗಿ ಹಾಂ..! ಅನ್ನಬೇಕೆನಿಸಿತು. ಆದ್ರೂ, ಅನ್ನದss ಅವನ ಮುಖವನ್ನೇ ದಿಟ್ಟಿಸಿದ. ಶೆಟ್ಟಿ ಗ್ರಹಿಸಲಾರದ ಗತ್ತು ಅಲ್ಲಿತ್ತು. 'ಅದ... ನಮ್ದೊಂದು ಕೆಲಸ ಆಗಬೇಕು ನೋಡ್ರಿ ನಿಮ್ಮಲಿಂದರss' ಅಂದು ಅಗ್ಗದೀ ಸಲುಗೆ ಇರುವವರಂಗ ಶೆಟ್ಟಿಯ ತೊಡೆ ಮೇಲೆ ಕೈ ಇಟ್ಟ. 'ಅದೇನು ಹೇಳ್ರಿ ಅಂತ ಅವನಂದಾಗ 'ಹೊನ್ನವ್ವನನ್ನ ಖಾನಾವಳಿ ಕೆಲಸದಿಂದ ಬಿಡಿಸಿ ಬಿಡುವಂತೆ' ಅಂದ ಕೂಡಲೆ ಶೆಟ್ಟಿಗೆ ತುಸು ಆಶ್ಚರ್ಯ ಆದರೂ ಭೀಡೆಕ ಭೀಡೆನೂ ಇರಲಿ, ಉಡೇದಾಗ ನಾಲ್ಕು ಕಲ್ಲೂ ಇರಲಿ ಅನ್ನೋ ಶೆಟ್ಟಿ, ದೇಸಾಯಿ ಯಾಕ ಬಿಡಿಸುತ್ತಿರಬಹುದು...? ಅಂತ ತಿಳಿದುಕೊಳ್ಳುವ ಗೋಜಿಗೆ ಹೋಗಲಾರದss ಇದರಿಂದ ತನಗೇನು ಫಾಯಿದೆ? ಯೋಚಿಸಿದ. ನಾಲ್ಕು ತಿಂಗಳ ತಡೆದು ಕೊಡು ಅಂತ ಹೇಳಿದ ರೊಕ್ಕಾನ ಎಂಟ್ಹತ್ತು ತಿಂಗಳವರೆಗೂ ಇದss ಭೀಡೆದ ಮ್ಯಾಗ ಒತ್ತಬಹುದು. ರೊಕ್ಕಾನ ಹೊರಗ ಹತ್ತು ತಿಂಗಳಕ್ಕ ಬಡ್ಡಿಗೆ ಕೊಡಬಹುದು. ಹಿಂಗss ಲೆಕ್ಕ ಹಾಕುವುದಕ್ಕೂ ಗ್ವಾಡಿ ಮ್ಯಾಲಿನ ಸಣ್ಣ ರಾಮಣ್ಣ ದೇಸಾಯಿಯ ದೊಡ್ಡ ಫೋಟೊದ ಮ್ಯಾಲಿದ್ದ ಹಲ್ಲಿ 'ಚ್ಚೊ...ಚ್ಚೊ' ಅಂತ ಲೊಚಗುಟ್ಟಿತು. ಬರೋಬ್ಬರಿ ಆಯ್ತಂತ 'ಅಲ್ರೀ.. ಇದೇನು ದೊಡ್ಡ ಮಾತು ಅಂಥ ಹೇಳ್ತಿರಿ ಬಿಡ್ರಿ!! ನಿಮಗ ಅನುಕೂಲ ಆಕ್ಕೈಯ್ತಿ ಅಂದರ ಆ ಹೆಣ್ಮಗಳನ್ನ ಬಿಡಸಾಕ ನಮ್ಮದೇನು ನೂಯ್ತಸೈತಿ?! ಆಕೆ ಇಲ್ಲದಿದ್ದರ ಇನ್ನೊಬ್ಬಾಕಿನ್ನ ನೋಡ್ತಿವಿ. ರೊಕ್ಕ ಕೊಟ್ಟರ ಆಳಿಗೇನು ಬರss' ಅಂದು ತಲೆಯಾಡಿಸಿಕೊಂತ ಹೆಂಗಿದ್ದ ರೊಕ್ಕ ಹಂಗss ಸುರುಳಿ ಸುತ್ತಿ, ಕಿಸೆಕಿಳಿಸಿದ.

ಹಸೆಕಾರದ ಹಿಂಡಿಯನ್ನ ಮೊಸರಿನ್ಯಾಗ ಕಲೆಕಲೆಸಿ ತಂಗುಳ ರೊಟ್ಟಿಯ ತುತ್ತು ಮುರಿದು ತಿನ್ನುತ್ತಿದ್ದ ಹಣ್ಮಂತ ಹೇಳಿದ 'ಶಿದ್ಲಿಂಗಪ್ಪ ಮುತ್ತ್ಯಾ ಘನ ಪುಣ್ಯದವಾ ನೋಡು. ಇರಾಕ ಬಾಡಗೀ ಮನೀನು ಕೊಟ್ಟು, ಆಡುಗುಳ್ನ ತರುಬಾಕ ತನ್ನ ಅಂಗಳದಾಗss ಜಾಗಾನೂ ಕೊಟ್ಟಾನ. ದೇವರಂತ ಮನುಷ್ಯ! ಎಲ್ಲಾರು ಅವನ್ಹಂಗ ಇದ್ದರ... ಜಗತ್ತು ಹಿಂಗ್ಯಾಕ ಇರತಿತ್ತು' ಗೋಣುಹಾಕೊಂತ ಬಾಯಾಡಿಸ್ತಿದ್ದ. ಒಲಿ ಊದುತ್ತಿದ್ದ ಹೊನ್ನವ್ವ ಪಾಪದ ಮನುಷ್ಯರ ಬಗ್ಗೆ ಯೋಚಿಸುತ್ತಿದ್ದಳು. ವಿನಾಕಾರಣಾನss ಬಹುದೊಡ್ಡ ಕಾರಣ

ಅನ್ನುವಂಗ ಶೆಟ್ಟಿ ಎಷ್ಟು ನಯ ನಾಜೂಕಿನಿಂದ ಹೇಳಿದ!! ಅವುನ್ನ ತನ್ನ ಕಡೆ ತಿರುಗಿಸಿಕೊಂಡ ದೇಸಾಯಿ ಎಂಥ ಹಲಕಟ್ ನನ ಹಾಟ್ಯಾ!? ಒಂದು –ಒಂದೂವರೆ ವರ್ಷದ ಕಾಲ, ಈ ಅವಧಿಯಾಗ ಆದ ಶಹರದ ಅನುಭವಗಳು ಆಕಿಯನ್ನು ಒಳಗಿಂದೊಳಗ ಗಟ್ಟಿ ಮಾಡಿದ್ದುವು.

ಊದಿಧಂಗ ಬೂದಿಯೇ ಹಾರುತಿತ್ತss ವಿನಾ ಉರಿ ಹತ್ತಿಕೊಳ್ಳಲಿಲ್ಲ 'ಸುಡಗಾಡ ಮುಳಗಳ್ಳಿ ಕಟಗಿ! ಬೆಂಕೀನ ನಿಂದ್ರಗಿಲ್ಲ. ಒಲಿಯಾಗ' ಅಂದು ಒಂದು ರದ್ದಿ ಹಾಳಿ ಒಲೆಗೆ ತುರುಕಬೇಕೆಂದು ಆಕಡೆ–ಯಿಕಡೆ ನೋಡುತ್ತಿದ್ದಳು. ಆಡು ಮರಿಗುಳ ತೊಪ್ಪಲಕ್ಕೆಂದು ತಂದು ಹಾಕಿದ್ದ ತ್ವೊಗರಿ ಕ್ವಾಲಿಗುಳು ತಟ್ಟಿ ಮಗ್ಗುಲದಾಗ ಒಣಗಿ ಬಿದ್ದಿದ್ದುವು. ಅವುನ್ನ ಮುರಿದುಕೊಂಡು ಬಂದು ಹೆಣ್ತಿ ಮುಂದ ಹಿಡಿದ. ಆಕೆ ಅವುನ್ನ ಕತ್ರಿಮಾಡಿ ಹೊಂದಿಸಿ ಒಲಿ ಬಾಯಿಗಿಟ್ಟು ಒಂದು ರದ್ದಿ ಹಾಳೆಯನ್ನೂ ಒಗೆದಳು.

'ಅಲ್ಲಾ... ಆಡುಗೂಳ್ನ ಎಲ್ಲಾ ನಾಳೆ ಶನಿವಾರ ಅಮೀನಗಡ ಸಂತಿಗೆ ಹೊಡದು ಬಿಡ್ತಿಯನುss...' ಆಕೆ ಅನುಮಾನಿಸುತ್ತ ಕೇಳಿದಳು.

'ಯಾಕ...?!' ಇಂವುಗ ಸೋಜಿಗ.

'ನಾವು ಒಂದ್ ಸ್ವಂತ ಖಾನಾವಳಿ ತಗದಬಿಡೂಣ' ಆಕಿಗೆ ಯಾವ ಬೆರಗೂ ಇರಲಿಲ್ಲ. ಬದಲಾಗಿ ಆತ್ಮವಿಶ್ವಾಸದಿಂದ ತುಂಬಿ ತುಳುಕುತ್ತಿದ್ದಳು. ಆ ವಿಶ್ವಾಸ ಇವನಿಗೂ ಹರಿದು ಬಂದಂತಾಗಿ, 'ಹಿಂಗಾ...!! ಹಂಗಾದ್ರ, ಶನಿವಾರಕ್ಕ ಇನ್ನ ನಾಲ್ಕ ದಿವಸ ಅಡ್ಡೈತಿ. ನಾಳೆ ಮಂಗಳ್ವಾರ ಕೆರ್‍ರ ಸಂತಿಗೆ ಹೊಡಿತಿನಿ ಬಿಡು! ತೊಗರಿಕಟ್ಟಿಗಿ, ರದ್ದಿ ಹಾಳಿ ಒಂದಕ್ಕೊಂದು ಬೆಂಕಿಯನ್ನ ತಗುಲಿಸಿಕೊಂಡು ತನ್ನಿಂದ ತಾನೆ ಧಗ್ಗನs ಉರಿ ಹತ್ತಿತು. ಬೋಗುಣಿಯಲ್ಲಿದ್ದ ಅನ್ನ ಕಳ ಕಳ ಕುದಿಯತೊಡಗಿತು.

* * *

# ವಿವಾದಿತ ಲೇಖಕಿ ತಸ್ಲೀಮಾ ನಸ್ರೀನ್‌ರವರ ಕಾವ್ಯ

ಕೆ. ಷರೀಫಾ

ಬಾಂಗ್ಲಾ ದೇಶದ ವಿವಾದಿತ ಲೇಖಕಿ ತಸ್ಲೀಮಾ ನಸ್ರೀನ್ ಸೃಜನಶೀಲ ಲೇಖಕಿ. ಅವರ ಬರಹಗಳೆಲ್ಲ ವಿವಾದಾತ್ಮಕವು, ಸಾಂಪ್ರದಾಯಿಕ ಲೋಕದಲ್ಲಿ ಅಲ್ಲೋಲಕಲ್ಲೋಲ ಉಂಟುಮಾಡುವಂಥವುಗಳಾಗಿವೆ. ಸಮಾಜದಲ್ಲಾದ ಅನ್ಯಾಯಗಳ ಕುರಿತು ನಿರ್ಭಿಡೆಯಿಂದ ಮಾತಾಡುವದಷ್ಟೇ ಅಲ್ಲ, ತನ್ನ ಮೇಲಾದ ಅನ್ಯಾಯ, ಅತ್ಯಾಚಾರಗಳನ್ನು ನಿರ್ಭಿಡೆಯಿಂದ ಯಾವ ಮುಜುಗುರವೂ, ಹಿಂಜರಿಕೆಯೂ ಇಲ್ಲದೆ ಹೇಳಿಕೊಂಡಿದ್ದಾರೆ. ಒಬ್ಬ ಮಹಿಳೆ ತನ್ನ ಆತ್ಮಚರಿತ್ರೆಯನ್ನು ಬರೆಯಲು ಬಹಳ ಧೈರ್ಯ ಬೇಕು. ಈಗಾಗಲೇ ತಸ್ಲೀಮಾರವರು ತಮ್ಮ ಆತ್ಮಚರಿತ್ರೆಯನ್ನೂ ಬರೆದಿದ್ದಾರೆ. ಅವರು ತಮ್ಮ ಆತ್ಮಚರಿತ್ರೆಯಲ್ಲಿ ಸ್ವತಃ ತನ್ನ ಚಿಕ್ಕಪ್ಪನೇ (ತಂದೆಯ ತಮ್ಮ) ಅವರನ್ನು ಬಲತ್ಕರಿಸಲು ಯತ್ನಿಸಿದ್ದ ಪ್ರಸಂಗವನ್ನು ಹೇಳಿಕೊಂಡಿದ್ದಾರೆ. ಬಂಡಾಯ ಧೋರಣೆಯ ಈ ಲೇಖಕಿಯ ವಿರುದ್ಧ ಫತ್ವಾ ಹೊರಡಿಸಲಾಗಿದೆ. ಅನೇಕ ರಾಷ್ಟ್ರಗಳ ಕೋಪಕ್ಕೂ ಅವರು ಗುರಿಯಾಗಿದ್ದಾರೆ.

೧೯೬೨ ರಲ್ಲಿ ಬಾಂಗ್ಲಾ ದೇಶದಲ್ಲಿ ಹುಟ್ಟಿರುವ ತಸ್ಲೀಮಾ ಈಗ ತನ್ನ ರಾಷ್ಟ್ರದಿಂದ ಬಹಿಷ್ಕೃತರಾಗಿ, ಭಾರತದ ಕೊಲ್ಕತ್ತಾದಲ್ಲಿ ವಾಸಿಸುತ್ತಿದ್ದಾರೆ. ಬಾಂಗ್ಲಾ ದೇಶದ ಮೈಮನಸಿಂಗ್ ಎಂಬಲ್ಲಿ ಹುಟ್ಟಿದ ತಸ್ಲೀಮಾರವರ ತಂದೆಯವರು ಸಹ ವೈದ್ಯರಾಗಿದ್ದು ವೈದ್ಯಕೀಯ ಕಾಲೇಜಿನಲ್ಲಿ (ಸರ್ಕಾರಿ) ಪ್ರೋಫೆಸರ್ ಆಗಿದ್ದಾರೆ. ವೃತ್ತಿಯಿಂದ ವೈದ್ಯೆಯಾದ ತಸ್ಲೀಮಾ ಪ್ರವೃತ್ತಿಯಿಂದ ಲೇಖಕಿಯಾಗಿದ್ದಾರೆ. ಇವರು ಅಧ್ಯಯನ ಮಾಡಿದ್ದು ಸಹ ಮೈಮನಸಿಂಗ್ ಊರಿನ ವೈದ್ಯಕೀಯ ಕಾಲೇಜಿನಲ್ಲಿ. ಬಾಲ್ಯದಿಂದಲೇ ಮಹಿಳಾ ಸಮಾನತೆಯನ್ನು ಅವರು ಪ್ರತಿಪಾದಿಸುತ್ತಿದ್ದರು. ಅವರು ಇಸ್ಲಾಮಿಕ್ ಮೂಲಭೂತವಾದಿಗಳಿಂದ ಜೀವಬೆದರಿಕೆಗೆ ಒಳಗಾಗಿದ್ದಾರೆ. ಇತ್ತೀಚೆಗೆ ಮಾರ್ಚ್ ೨೦೦೦ ರಲ್ಲಿ ಭಾರತೀಯ ಮುಸ್ಲಿಂ ಗುಂಪಿನಿಂದ ಅವರ ತಲೆ ತೆಗೆದವರಿಗೆ ರೂ. ೫,೦೦,೦೦೦ ರೂಪಾಯಿ ನೀಡುವದಾಗಿ ಘೋಷಿಸಿದ್ದಾರೆ.

ತಸ್ಲೀಮಾ ಕವಯತ್ರಿಯಾಗಿಯೇ ಮೊದಲು ಪ್ರಸಿದ್ಧಿಗೆ ಬಂದವರು. ಪತ್ರಕರ್ತೆಯಾಗಿ, ಅಂಕಣ ಬರಹಗಾರ್ತಿಯಾಗಿ, ಲೇಖಕಿಯಾಗಿ ಹೊರಹೊಮ್ಮಿದವರು. ತಸ್ಲೀಮಾರು ಅವರ

ವಿವಾದಾತ್ಮಕ ನಿಷೇಧಿತ ಕೃತಿ "ಲಜ್ಜಾ" ದಿಂದ ಬಹಳಷ್ಟು ಪ್ರಚಾರಕ್ಕೆ ಬಂದರು. "ಲಜ್ಜಾ" ಕೃತಿಯಲ್ಲಿ ಅವರು ಬಾಂಗ್ಲಾದೇಶದ ಹಿಂದು ಅಲ್ಪಸಂಖ್ಯಾತರ ಮೇಲೆ ಮುಸ್ಲಿಂ ಬಹುಸಂಖ್ಯಾತರು ನಡೆಸುವ ದೌರ್ಜನ್ಯಗಳ ಬಗ್ಗೆ ಬರೆದಿದ್ದಾರೆ. ಭಾರತದಲ್ಲಿ ಅಲ್ಪಸಂಖ್ಯಾತರಾದ ಮುಸ್ಲಿಮರ ಮೇಲೆ ಹಿಂದೂ ಮೂಲಭೂತವಾದಿಗಳು ಅಸಂಖ್ಯ ದೌರ್ಜನ್ಯಗಳನ್ನು ನಡೆಸಿದ್ದಾರೆ. ಮೋದಿ ಗುಜರಾತಿನ ಮುಖ್ಯಮಂತ್ರಿ ಕೋಮುವಾದಿ ಅಜೆಂಡಾದಡಿಯಲ್ಲಿ ನಡೆಸಿದ ಕ್ರೌರ್ಯಕ್ಕೆ ವಿಶ್ವದಲ್ಲಿ ಭಾರತ ನಾಚಿಕೆಯಿಂದ ತಲೆತಗ್ಗಿಸುವಂತೆ ಮಾಡಿದರೂ ಸಹ ಅವರು ಅದನ್ನು ಒಪ್ಪುವದಿಲ್ಲ. ದೌರ್ಜನ್ಯ ಯಾರೇ ಮಾಡಲಿ, ಅದು ತಪ್ಪು.

ಇಸ್ಲಾಂ ಮೂಲಭೂತವಾದಿಗಳ ತಕರಾರು ಇರುವದು-ತಸ್ಲೀಮಾ ಖುರಾನ್ ಬಗ್ಗೆ ಅವಹೇಳನಕಾರಿಯಾಗಿ ಬರೆದಿದ್ದಾರೆ. ಪೈಗಂಬರರ ಸಂಸ್ಕೃತಿಯನ್ನು ತುಚ್ಛೀಕರಿಸಿದ್ದಾರೆಂಬ ಆಪಾದನೆಯಿದೆ. ಆದರೆ ಇಸ್ಲಾಂ ಧರ್ಮಕ್ಕೆ ೧೪೦೦ ವರ್ಷಗಳ ಇತಿಹಾಸವಿದೆ. ಒಬ್ಬ ತಸ್ಲೀಮಾರಿಂದ ಇಸ್ಲಂ ಧರ್ಮ ಹಾಳಾಗಿ ಹೋಗುವಷ್ಟು ಹಗುರವಾಗಿಲ್ಲ. ಅದಕ್ಕೆ ಅದರದೇ ಆದ ಚಾರಿತ್ರಿಕ ಇತಿಹಾಸವಿದೆ.

ಇತ್ತೀಚೆಗೆ ಧರ್ಮದೊಳಗಿನ ದೌರ್ಜನ್ಯಗಳನ್ನು ಎಲ್ಲಾ ಧರ್ಮದಲ್ಲಿಯ ಕೆಲವರು ಮುಚ್ಚಿಟ್ಟು ಪರದೆಯೆಳೆದರೆ, ಇನ್ನೂ ಕೆಲವರು ಯಾವ ಮುಚ್ಚು ಮರೆಯೂ ಇಲ್ಲದೆ ಬಿಚ್ಚಿ ಹೇಳುತ್ತಾರೆ. ತಸ್ಲೀಮಾರ ವಿವಾದಿತ ಬರಹಗಳಿಂದಾಗಿ ಅವರು ಪ್ರತಿ ಕ್ಷಣವೂ ಸಾವಿನ ಜೊತೆ ಜೊತೆಗೆಯೇ ಹೆಜ್ಜೆ ಹಾಕಿದ್ದಾರೆ - ಸಾಂಪ್ರದಾಯಿಕ ರಾಷ್ಟ್ರಗಳಿಂದ ಬಹಿಷ್ಕೃತರಾಗಿದ್ದಾರೆ.

ಬಾಂಗ್ಲಾ ದೇಶದಲ್ಲಿ ಶೇಖ ಹಸೀನಾರವರ ಸರ್ಕಾರ ತಸ್ಲೀಮಾರ ಕೃತಿ "ಅಮರ್ ಮೆಯೇ ಬೆಲಾ" ಅಗಸ್ಟ ೧೩, ೧೯೯೯ ರಲ್ಲಿ ನಿರ್ಬಂಧಿಸಿತು. ಇವರದೇ ಇನ್ನೊಂದು ಕೃತಿ "ಉತಾಲ್ ಹವಾ" ಬಾಂಗ್ಲಾ ಸರ್ಕಾರ ನಿಷೇಧಿಸಿತು. ೨೦೦೦ ರಲ್ಲಿ "ಲಜ್ಜಾ" ಕೃತಿಯನ್ನು ನಿರ್ಬಂಧಿಸಿತು. "ಕಾ" ಲೈಂಗಿಕ ವಿವಾದಕ್ಕಾಗಿ ಈ ಕೃತಿಯನ್ನು ಬಾಂಗ್ಲಾ ಹೈಕೋರ್ಟ್ ನಿಷೇಧಿಸಿತು. "ದ್ವಿ ಖಂಡಿತಾ" ೨೦೦೩ರಲ್ಲಿ ಬಾಂಗ್ಲಾ ಸರ್ಕಾರ ಮತ್ತು ಪಶ್ಚಿಮ ಬಂಗಾಳದ ಹೈಕೋರ್ಟ್‌ಗಳು ಬ್ಯಾನ್ ಮಾಡಿದವು.

ತಸ್ಲೀಮಾರ "ಆತ್ಮಚರಿತ್ರೆ" ಬಂಗಾಳೀ ಭಾಷೆಯಲ್ಲಿ ಪ್ರಕಟವಾಯಿತು. ೨೦೦೪ರಲ್ಲಿ ಪ್ರಕಟವಾದ "ಸುಖ ಅಂಧೂಕಾರ"ನ್ನು ಕಮ್ಯುನಿಷ್ಟ ಪಕ್ಷ ನಿಷೇಧಿಸಿತು. (ಪಶ್ಚಿಮ ಬಂಗಾಳ). ನಸ್ರೀನ್‌ರ ವಿರುದ್ಧ ಇಸ್ಲಾಂ ಮೂಲಭೂತವಾದಿಗಳು ಫತ್ವಾ ಹೊರಡಿಸಿದರು. ಇವರು ಅನೇಕ ಸಂಪ್ರದಾಯಬದ್ಧ ರಾಷ್ಟ್ರಗಳಿಂದಲೂ ಬಹಿಷ್ಕೃತರಾಗಿದ್ದಾರೆ.

ಇವರ ಕೃತಿಗಳು ಹಿಂದಿ, ಉರ್ದು, ಮರಾಠಿ, ಮಲೆಯಾಳಂ, ಆಸ್ಸಾಮಿ, ಕನ್ನಡ, ಓರಿಯಾ, ನೇಪಾಲಿ, ಐಸ್‌ಲ್ಯಾಂಡಿಕ್, ಸ್ಪಾನಿಶ್, ಸರ್ಬೊ, ಡಚ್, ಸ್ವೀಡೀಶ್, ನಾರ್ವೆಯನ್, ಇಟಾಲಿಯನ್, ಇಂಗ್ಲೀಷ್, ಫ್ರೆಂಚ್, ಜರ್ಮನ್, ಕ್ರವೇಶಿಯನ್, ಪರ್ಶಿಯನ್, ಅರಾಬಿಕ್, ಭಾಷೆಯಲ್ಲಿ ಭಾಷಾಂತರಗೊಂಡಿವೆ. ತಸ್ಲೀಮಾರ ಇತ್ತೀಚಿನ ಕಾದಂಬರಿ "ಶೋಧ್"'ನ ತೆಲುಗು ಅನುವಾದಿತ ಕೃತಿಯನ್ನು ಹೈದ್ರಾಬಾದ್‌ನಲ್ಲಿ

ಸೋಮಯಾಜಿಗುಡ ಪ್ರೆಸ್ ಕ್ಲಬ್‌ನಲ್ಲಿ ಬಿಡುಗಡೆ ಮಾಡುತ್ತಿರುವ ಸಂದರ್ಭದಲ್ಲಿ ಅಲ್ಲಿಯ ಎಂ.ಐ.ಎಂ. ನ ೩ ಜನ ಶಾಸಕರಾದ ಅಫ್ಸರ್‌ಖಾನ್, ಅಹ್ಮದ್ ಪಾಶಾ ಮತ್ತು ಮೌಜಮ್‌ಖಾನ್‌ರ ನೇತೃತ್ವದಲ್ಲಿ ತಸ್ಲೀಮಾರ ಮೇಲೆ ದೈಹಿಕ ಹಲ್ಲೆ ನಡೆಸಿ, ಕೈಗೆ ಸಿಕ್ಕ ಸಿಕ್ಕ ವಸ್ತುಗಳನ್ನು ಆಕೆಯತ್ತ ಎಸೆದರು. ಆಗಲೂ ತಸ್ಲೀಮಾ ಧೃತಿಗೆಡದೆ – "ನಾನು ನನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತೇನೆ. ಅದು ನನ್ನ ಜನ್ಮಸಿದ್ಧ ಹಕ್ಕು" ಎಂದರು.

ಇವರ ಇನ್ನಿತರ ಕೃತಿಗಳೆಂದರೆ, 'ದುಃಖಿತ ಮಹಿಳೆ ೧೯೯೩,' ಪುಟ್ಟ ಪುಟ್ಟ ದುಃಖದ ಕತೆಗಳು' ೧೯೯೪, ಇವರ ಕಾದಂಬರಿಗಳು, "ವಿರೋಧ" ೧೯೯೨, "ಪ್ರತೀಕಾರ"-೧೯೯೨, "ಸಂಶೋಧನೆ"-೧೯೯೩, "ಲಜ್ಜಾ" (ನಾಚಿಕೆ) ೧೯೯೩, "ಫೇರಾ" -೧೯೯೩, "ಅವನಿಗೆ ರಹಸ್ಯ ಹೇಳು"-೧೯೯೧ "ಫ್ರೆಂಚ್ ಪ್ರೇಮಿ"-೨೦೦೨, ಎಂಬ ಕಾದಂಬರಿಗಳನ್ನು ಪ್ರಕಟಿಸಿದರು.

ಇವರ ಆತ್ಮಚರಿತ್ರೆಯ ಭಾಗಗಳಾದ "ನನ್ನ ಹುಡುಗಿತನ"-೧೯೯೯, "ಉತಾಲ್ ಹವಾ"-೨೦೦೦ "ಎರಡಾಗಿ ವಿಭಾಗ"-೨೦೦೩, "ಮಾತಾಡು"-೨೦೦೩, "ಆ ಕತ್ತಲ ರಾತ್ರಿಗಳು"-೨೦೦೪, "ನಾನು ಚೆನ್ನಾಗಿಲ್ಲ-ಆದರೆ ನೀವು ನನ್ನ ದೇಶವನ್ನು ಚೆನ್ನಾಗಿ ಕಟ್ಟಿರಿ"-೨೦೦೬ ರಲ್ಲಿ ಪ್ರಕಟವಾದವು.

ತಸ್ಲೀಮಾರವರು ತಾವೊಬ್ಬ ನಿಷ್ಠಾವಂತ ಮುಸ್ಲಿಂ. ಪವಿತ್ರ ಖುರಾನನ್ನು ಮನ ಬಂದಂತೆ ಅರ್ಥೈಸುವದಕ್ಕೆ ನನ್ನ ವಿರೋಧವಿದೆ ಎನ್ನುತ್ತಾರೆ. ತಸ್ಲೀಮಾರ ಬರಹಗಳಲ್ಲಿರುವ ಅಂಶವೆಂದರೆ ಮಹಿಳೆಯರು ಶಿಕ್ಷಣ ಪಡೆದು ವಿವಾಹವಾಗಿದ್ದರೂ ನಾಲ್ಕು ಗೋಡೆಗಳ ಮಧ್ಯ ದೂಡಿದರು. ಹೀಗಾಗಿ ವಿಚಾರವಂತ ಮಹಿಳೆಯರ ವರ್ತನೆಗಳಿಂದ ಇತರೆ ಮಹಿಳೆಯರ ಸ್ವಾತಂತ್ರ ಹರಣವಾಗುವಂತಿದ್ದರೆ, ಅಂತಹ ಸ್ವಾತಂತ್ರ್ಯದಿಂದ ಪ್ರಯೋಜನವಾದರೂ ಏನು? ತಸ್ಲೀಮಾ ಅವರಾದರೂ ಇದರಿಂದ ನೆಮ್ಮದಿಯಿಂದಿದ್ದಾರೆಯೆ? ಎಂದರೆ ಅದೂ ಇಲ್ಲ. ನಮ್ಮ ಸಮಾಜವನ್ನು ಬದಲಾಯಿಸಬೇಕಿದ್ದರೆ ನಾವು ನಮ್ಮ ಸಮಾಜದ ವಿಶ್ವಾಸ ಗಳಿಸಿ, ಅವರ ಮಧ್ಯೆ ಇದ್ದೇ ಬದಲಾವಣೆಗೆ, ಪ್ರಗತಿಗೆ ಪ್ರಯತ್ನಿಸಬೇಕಾಗುತ್ತದೆ. ಉದಾ : ಹೊಲದ ಮಧ್ಯಯಿರುವ ದೊಡ್ಡ ಮರದಿಂದಾಗಿ ಅದರ ಕೆಳಗೆ ಬೆಳೆ ಬೆಳೆಯಲಾಗುತ್ತಿಲ್ಲ. ಆದ್ದರಿಂದ ಆ ಮರವನ್ನು ಕಡಿಯಬೇಕಾಗುತ್ತದೆ. ಆ ಮರ ಕಡಿಯಬೇಕಾದರೆ ನಾವು ಮೊದಲು ಆ ಮರದ ನೆರಳಿನಲ್ಲಿದ್ದುಕೊಂಡೇ ಅದನ್ನು ಕತ್ತರಿಸಬೇಕಾಗುತ್ತದೆ. ತಸ್ಲೀಮಾರವರ ನಡವಳಿಕೆ ವೈಯಕ್ತಿಕವಾಗಿ ಅವರಿಗೆ "ಹಿರೋಯಿನ್" ಮಾಡಬಹುದಾದರೂ ಅದರಿಂದ ಆ ಸಮಾಜದ ಮಹಿಳೆಯರ ದುಃಖಗಳು ಕಡಿಮೆಯಾಗುವದಿಲ್ಲ ಎಂಬ ಸತ್ಯವನ್ನು ಅವರು ಮನಗಾಣಬೇಕಿತ್ತು. ವೈಯಕ್ತಿಕವಾಗಿ ಅವರು ರಾಷ್ಟ್ರೀಯ, ಅಂತರಾಷ್ಟ್ರೀಯ ಮಟ್ಟದಲ್ಲಿ ಹೆಸರು ಮಾಡುತ್ತ ಮುಂದೆ ಮುಂದೆ ಸಾಗುತ್ತಾರೆ. ಆದರೆ ಅವರೊಮ್ಮೆ ಹಿಂತಿರುಗಿ ನೋಡಲಿ. ಆಗ ಅವರಿಗೆ ಗೊತ್ತಾಗುತ್ತದೆ. ಅವರ ಹಿಂದೆ ಸಮಾಜ ಇಲ್ಲ ಎಂಬ ವಾಸ್ತವದ ಅರಿವು ಅವರಿಗಾಗುತ್ತದೆ. ಒಬ್ಬ ವ್ಯಕ್ತಿ ಎಷ್ಟೇ ಎತ್ತರಕ್ಕೆ ಬೆಳೆದರೂ ಅವರ ಹಿಂದೆ ಸಮಾಜವೇ ಇಲ್ಲದಿದ್ದರೆ? ಯಾವ ಪುರುಷಾರ್ಥ ಸಾಧನೆಗಾಗಿ ಅವರು ಒಂಟಿಯಾಗಿ ಹೋರಾಡಬೇಕು? "ಹಯಾತ್ ಲೇಕೆ ಚಲೋ ಕಾಯನಾತ್ ಲೇಕೆ ಚಲೋ ಚಲೋ ತೋ ಐಸೇ ಕೆ ಸಾರೆ ಜಹಾಂ ಕೆ ಸಾತ್ ಚಲೋ" ಎಂಬ ಕವಿವಾಣಿಯಂತೆ "ನಡೆದರೆ ಲೋಕದೊಂದಿಗೆ

ನಡೆಯಿರಿ ಎಂದು ಎಲ್ಲರೊಂದಿಗೆ ಹೆಜ್ಜೆ ಹಾಕಬೇಕಿದೆ. ಒಬ್ಬ ತಸ್ಲೀಮಾ ಮುಂದುವರೆಯುವದರಿಂದ ಇಡೀ ಸಮಾಜ ಮುಂದುವರಿಯಲಾರದು-ಒಬ್ಬ ಇಂದಿರಾಗಾಂಧಿ ಪ್ರಧಾನ ಮಂತ್ರಿಯಾದರೆ, ಇಡಿ ಮಹಿಳಾ ಜನಾಂಗದ ಸಮಸ್ಯೆಗಳು ಬಗೆಹರಿದವೆ? ಸ್ವಾತಂತ್ರದ ಹೆಸರಿನಲ್ಲಿ ಸ್ವೇಚ್ಛೆಯನ್ನು ಬೆಂಬಲಿಸಲಾಗದು. ಸ್ವಾತಂತ್ರ್ಯಕ್ಕೆ ಸಾಮಾಜಿಕ ಜವಾಬ್ದಾರಿಯಿರಬೇಕು.

**ತಸ್ಲೀಮಾರವರ ಕಾವ್ಯ :**

ಇವರ ಕವಿತೆಗಳು ಅಶ್ಲೀಲವಾಗಿವೆ ಎಂದು ಅನೇಕ ಮುಸ್ಲಿಂ ರಾಷ್ಟ್ರಗಳು ಅವರ ಕವಿತೆಗಳ ಮೇಲೆ ಬಹಿಷ್ಕಾರ ಹೇರಿದವು. ಅವರ ಕವಿತೆಗಳೆಲ್ಲ ಅವರ ಸ್ವಂತ ಬದುಕಿನ ಅನುಭವಗಳೇ ಆಗಿರಬಹುದು. ಆದರೆ ಹೇಳುವಾಗ ಸೆನ್ಸಾರ್ ಮಾಡದೇ ಇದ್ದುದ್ದನ್ನು ಇದ್ದಂತೆ ಹೇಳಿರಬಹುದು. ಇದು ಮಡಿವಂತ ಮನಸುಗಳಿಗೆ ಕಿರಿಕಿರಿಯಾಗಿರಬಹುದು. ತಸ್ಲೀಮಾರ ಇಡೀ ಕಾವ್ಯ ಅವರ ಜೀವನಾನುಭವದ ಸಾರವೇ ಆಗಿದೆ.

ಸ್ತ್ರೀ-ಪುರುಷರ ಸಮಾನತೆಯನ್ನು ಇವರ ಕಾವ್ಯ ಪ್ರತಿಪಾದಿಸುತ್ತದೆ. ಹೆಣ್ಣನ್ನು ಹೆಣ್ಣಾಗಿ-ಅವಳನ್ನೂ ಮನುಷ್ಯಳಾಗಿ ಕಾಣಲು ಅವರ ಕವಿತೆ "ಹಸಿವು" ಹೇಳುತ್ತದೆ.

"ನಾನೂ ಮನುಷ್ಯಳೇ
ಸಮಾಜದ ರೂಢಿಯಲ್ಲಿ ನಲುಗಿದವಳು
ಹೆಸರಿಗೆ ಹೆಣ್ಣಾದರೂ ನಾನೇನೂ
ಎರಡು ಕಾಲಿನ ಪಕ್ಷಿಯಲ್ಲ
ನಾನೂ ಮನುಷ್ಯಳೇ"

ಎಂದು ಹೆಣ್ಣನ್ನು ತುಚ್ಛೀಕರಿಸುವ ಸಾಂಪ್ರದಾಯಿಕತೆಯನ್ನು ಹೀಗಳೆದು ಅವಳನ್ನು ಮನುಷ್ಯಳನ್ನಾಗಿ ಕಾಣಲು ಕೋರುತ್ತಾರೆ. ಹೆಣ್ಣಿನ ಬಗ್ಗೆ ತಳೆದಿರುವ ಅಸಮಾನತೆಯ ವಿರುದ್ಧ ಅವರ ಆಕ್ರೋಶವನ್ನು ಡಾ. ಸರಜೂ ಕಾಟ್ಕರ್‌ರವರು ಅನುವಾದಿಸಿದ "ತಸ್ಲೀಮಾ ನಸ್ರೀನ್ ಕವಿತೆಗಳು" ಕೃತಿಯ "ಹೆದರಿಕೆ" ಕವಿತೆಯಲ್ಲಿ

"ಈ ಅಪವಿತ್ರ ದೇಶದಲ್ಲಿ ಹುಟ್ಟುವುದೇ ಒಂದು ತಪ್ಪು
ನೆಲಕ್ಕೆ ಕಾಲಿಟ್ಟರೆ, ಕಾಲಕೆಳಗಿನ ಮಣ್ಣ ನಡುಗುತ್ತದೆ ಥೂ
ಮಣ್ಣಿಗೂ ಗೊತ್ತು, ಈ ಕಲ್ಲು ಮಣ್ಣಿನಲ್ಲಿ ಮನೆ ಮನೆಗಳಲ್ಲಿ
ವಸ್ತಿ ಮಾಡಿದೆ ಒಂದು ಹಿಂಸ್ರ ಪ್ರಾಣಿ."

ಎಂದು-ಕೌಟುಂಬಿಕ ಹಿಂಸೆಯ ವಿರುದ್ಧ ಕಿಡಿ ಕಾರುತ್ತಾರೆ. ಅವರ ದೃಷ್ಟಿ "ಜಾಗತೀಕರಣ" ಸಮಯದಲ್ಲಿ ಹೆಣ್ಣನ್ನು ಬಳಸಿದ ಬಗೆಯನ್ನು ಅವರ "ಚಕ್ರ" ಕವಿತೆಯಲ್ಲಿ ಹೇಳುತ್ತಾ

"ದರದಲ್ಲೂ ಹೆಚ್ಚು ಕಡಿಮೆ
ಮುಕ್ತ ಮಾರುಕಟ್ಟೆಯಲ್ಲಿ ಅವಳ ಮಾರಾಟ
ಕೆಲವೆಡೆ ಆಧುನೀಕರಣ
ಕೆಲವರಿಗೆ ಇದೇ "ಸ್ತ್ರೀಪ್ರಗತಿ"

ಎಂದು ಪೊಳ್ಳು ಸ್ತ್ರೀಪ್ರಗತಿಯ ಪ್ರತಿಪಾದನೆ ಕುರಿತು ವಿರೋಧ ವ್ಯಕ್ತಪಡಿಸುತ್ತಾ "ಅಭಿಮಾನ" ಕವಿತೆಯಲ್ಲಿ "ಒಂದು ಕಥೆ" ಕವಿತೆಯಲ್ಲಿ ತಲ್ಲಾಕ್ ನೀಡಿದ ಪತಿರಾಯನಿಗೆ ಯಾವ ಯಾವ ಕಾರಣಕ್ಕೆ, ಎಷ್ಟು ಜನರಿಗೆ ತಲ್ಲಾಕ್ ನೀಡುತ್ತಾರೆ ಎಂಬ ವಿವರವಿದೆ, ನೋಡಿ. "ತಲಾಕ್ ಹೇಳಿದ್ದಾನೆ; ಆಕೆ ಬಂಜೆ ಎಂದು ಎರಡನೆಯವಳಿಗೂ ತಲ್ಲಾಖ ಹೆಳಿದ್ದಾನೆ/ ಆಕೆ ಹೆಣ್ಣು ಹಡೆದಳೆಂದು/ ಮೂರನೆಯವಳಿಗೂ ತಲ್ಲಾಖ ಹೇಳಿದ್ದಾನೆ/ಆಕೆ ಸಾಕಷ್ಟು ವರದಕ್ಷಿಣೆ ತರಲಿಲ್ಲವೆಂದು/ಈಗ ನಾಲ್ಕನೆಯವಳಿಗೆ ಮುಖ ನೋಡದೆಯೆ ಹೊಡೆಯುತ್ತಾನೆ/ ಒಂದು ಮಿರ್ಚಿಗಾಗಿ ಅಥವಾ ಉಳ್ಳಾಗಡ್ಡಿ ಉಪ್ಪಿಗಾಗಿ"–

**ತಸ್ಲೀಮಾರ ಕವಿತೆಗಳಲ್ಲಿ ಅಶ್ಲೀಲತೆ :**

ಬಹುಶಃ ಅವರ ವೈಯಕ್ತಿಕ ನೋವುಗಳು, ಪುರುಷರಿಂದ ಅನುಭವಿಸಿದ ಯಾತನೆಗಳೇ ಅಶ್ಲೀಲವೆನಿಸುವಂತೆ ಬರೆಯಲು ಪ್ರೇರೇಪಿಸಿರಬಹುದು. ಅವರ "ನನಗೆ ಗೊತ್ತಿಲ್ಲ" ಕವಿತೆಯಲ್ಲಿ ಪ್ರೀತಿ ಇಲ್ಲದೆಯೇ ಹೆಣ್ಣನ್ನು ಸಂಭೋಗಿಸಲು ಪಶು ಮತ್ತು ಗಂಡಸು ನಿಷ್ಣಾತರು" ಮತ್ತು ಇದೇ ಕವನದಲ್ಲಿ "ಗಂಡಸು ಅವಳನ್ನು ಅಂಗಾತ ಜೀಳಿಸಿ" ಎಂದು ಹೇಳುತ್ತ "ಉಲ್ಟಾ ಆಟ" ಕವಿತೆಯಲ್ಲಿ "ಕೂಡಲೆಂದು ಹೆಣ್ಣ ಖರೀದಿಸುತ್ತಿ" ಎಂದು ಹೇಳುತ್ತಾರೆ – ಗಂಡಸು ಹೆಂಗಸನ್ನು ಖರೀದಿಸುವ ಪದ್ಧತಿ ಅತ್ಯಂತ ಹೇಯವಾದದ್ದು. ಅದನ್ನು ಖಂಡಿಸುವದು ಸೂಕ್ತ. ಆದರೆ ಮುಂದೆ ಇದೇ ಕವನದಲ್ಲಿ ಹೇಳುತ್ತಾರೆ, "ನನಗೆ ಅನಿಸುತ್ತದೆ : ಒಬ್ಬ ಗಂಡಸನ್ನು ಖಂಡಿತವಾಗಿಯೂ ಖರೀದಿಸಲೇಬೇಕು/ತರುಣ/ ದಟ್ಟಕೂದಲಿನವ ಎಂದು ಹೇಳುತ್ತಾರೆ.– "ಮುಟ್ಟಿದರೆ ಮುನಿ" ಕವಿತೆಯಲ್ಲಿ "ಮುಟ್ಟಿದರೆ ಆತ ನನ್ನ ಮೊಲೆ ತುಟಿ, ಗಲ್ಲ, ನಿತಂಬ, ಹೊಕ್ಕಳ ಕೆಳಗಿನ ನಗ್ನ ಪ್ರದೇಶ" ಹಾಗೂ "ಹೆಣ್ಣು" ಕವಿತೆಯಲ್ಲಿ ಇನ್ನೂ ಅಶ್ಲೀಲವಾಗಿ ಬರೆಯುತ್ತಾರೆ. ಅಶ್ಲೀಲವಾಗಿ ಬರೆಯುವದೇ ದಿಟ್ಟತನವಲ್ಲ. ಅದಕ್ಕೆ ಜವಾಬ್ದಾರಿಯಿರಬೇಕು. ಸಮಾಜದ ಸ್ವಾಸ್ಥ್ಯ ಕಾಪಾಡಬೇಕು. ಇಲ್ಲಿ ಗಂಡಸಿನ ಕೆಟ್ಟ ಕೆಲಸ ಮಾತ್ರ ದೊಡ್ಡು ಮಾಡಿ ತೋರಿಸಿದಂತಿದೆ.

ದಿನನಿತ್ಯದ ಬದುಕಿನಲ್ಲಿ ಗಂಡಸು ನಮ್ಮ ಸಂಗಾತಿಯಾಗಿದ್ದಾನೆ. ಅಣ್ಣ, ತಮ್ಮ, ತಂದೆ, ಪತಿ, ಮಗ ಹೀಗೆ ವಿವಿಧ ಪಾತ್ರಗಳು ನಮ್ಮ ಬದುಕಿನಲ್ಲಿವೆ. ಇವರನ್ನೆಲ್ಲ ನಾವು ದ್ವೇಷಿಸಿದರೆ ಕೌಟುಂಬಿಕ ವ್ಯವಸ್ಥೆ ಉಳಿಯುವದೆ ? ಗಂಡಸೇ ಇಲ್ಲದ ಲೋಕವಾಗಲಿ, ಹೆಣ್ಣೇ ಇಲ್ಲದ ಲೋಕವಾಗಲಿ, ಎರಡೂ ಊಹೆಗೂ ನಿಲುಕದ ಮಾತುಗಳು. ಹೀಗೆ ಒಬ್ಬರನ್ನೊಬ್ಬರು ದ್ವೇಷಿಸುತ್ತಾ ನಾವು ಆರೋಗ್ಯಪೂರ್ಣ ಸಮಾಜ ಕಟ್ಟಲು ಸಾಧ್ಯವೆ? ತನ್ನ ಕುಟುಂಬ, ತನ್ನ ಜನ, ತನ್ನ ರಾಷ್ಟ್ರ, ಇವುಗಳನ್ನೆಲ್ಲ ಬಿಟ್ಟು ಅಲೆಮಾರಿಯಂತೆ ರಾಷ್ಟ್ರದಿಂದ ರಾಷ್ಟ್ರಕ್ಕೆ ವಸತಿ ಬದಲಾಯಿಸುವ ತಸ್ಲೀಮಾ ಸಾಧಿಸುವದಾದರೂ ಏನು? ತಸ್ಲೀಮಾರ ಪ್ರಗತಿಪರ ವಿಚಾರಗಳನ್ನು ಬೆಂಬಲಿಸಬಹುದು, ಆದರೆ ಅವರ ಪುರುಷದ್ವೇಷ ಮತ್ತು ಅಶ್ಲೀಲತೆಯನ್ನು ಬೆಂಬಲಿಸುವುದು ಹೇಗೆ?

* * *

# ನೋ ರೂಮ್

ತೆಲುಗು ಮೂಲ : ಕಾಳೀಪಟ್ಟಂ ರಾಮರಾವು ಕನ್ನಡಕ್ಕೆ : ಗುರುಮೂರ್ತಿ ಪೆಡಂಕೂರ

ಬೆಳದಿಂಗಳು ಹಿಟ್ಟು ಚೆಲ್ಲಿದಂತಿಲ್ಲ. ಅತ್ತೆಮನೆಯಂತೆ ಊರು ಹೊಸದು.

"ರೂಮ್ ಇದೆಯೆ?"

"ಸಿಂಗಲ್ಲೋ ಡಬಲ್ಲೋ?"

ಕೂಡಲೇ ಉತ್ತರ ಬರದ ಕಾರಣ ಒಕ್ಕಣ್ಣಿನ ಗುಮಾಸ್ತ ತಲೆಯೆತ್ತಿ ನೋಡಿದ. ಅವನ ಮುಸಕು ನೋಟಕ್ಕೆ ನೂಕರಾಜು ಮದುಮಗನಂತೆ ಕಾಣಲಿಲ್ಲ. ಪಕ್ಕದಲ್ಲಿದ್ದ ಹಳ್ಳಿಯ ಹುಡುಗಿ ಪುಟ್ಟ ಹುಡುಗಿಯಂತೆ ಕಂಡಳು. ಎರಡನೇ ಕಣ್ಣಿನಿಂದ ಎಷ್ಟು ಹುಡುಕಿದರೂ ಅವನಿಗೆ ಟ್ರಂಕು, ಬೆಡ್ಡಿಂಗ್ ಅಥವಾ ಕೈಚೀಲ ಕೂಡಾ ಕಾಣಲಿಲ್ಲ. ಅದಕ್ಕೇ–ರೂಮಿಲ್ಲ ಎಂದ.

"ಏನು?"

"ರೂಮಿಲ್ಲ" ಎಂದ ಗುಮಾಸ್ತ

ದೊಡ್ಡ ರಾಜನ ಭಾವಮೈದುನನು ಬಡವನೊಬ್ಬನನ್ನು ಅಂತಃಪುರ ದ್ರೋಹಿಯೆಂದು ಭಾವಿಸಿ ವಿಚಾರಿಸುವ ರೀತಿಯಲ್ಲಿ.

ನೂಕರಾಜುಗೆ ತನ್ನ ತಪ್ಪೇನೆಂದು ತಿಳೀಲಿಲ್ಲ. ಕ್ಷಣಕಾಲ ನಿಬ್ಬೆರಗಾಗಿ ನಿಂತಿದ್ದು, ಅನಂತರ 'ಇವಂದೊಂದು ತರಲೆ' ಎಂದೆನಿಸಿ ಸಿಟ್ಟು ತುಂಬಿ ಬಂತು. ಆದರೆ ಆ ಗುಮಾಸ್ತ ಮುಂದೆ ಬಾಗಿ ತನ್ನ ಕೂಡುವ ಲೆಕ್ಕದಲ್ಲಿ ಮುಳುಗಿ ಹೋದ. ನೂಕರಾಜುವಿನ ಬಿಸಿಗಣ್ಣಿನಿಂದ ಉದುರುವ ಬಿರುನೋಟಗಳು ಅವನನ್ನು ತಾಕದೇ ಜಾರಿ ಹೋಗುತ್ತಿರುವುದನ್ನು ಕಂಡು ಅಲ್ಲಿದ್ದ ದೇವಪ್ಪನ ಕಡೆಗೆ ದೃಷ್ಟಿ ತಿರುಗಿಸಿದ.

ದೇವಪ್ಪನ ಕಣ್ಣುಗಳಲ್ಲಿ ಅವನಿಗೆ ಥೀ ಕೊಡಲು ಏನೂ ಕಾಣಲಿಲ್ಲ, ಅವನ ಖಾಕಿ ಬಟ್ಟೆಗಳು ಸವೆದು ಸವೆದು ತೂತಾಗಲು ತಯಾರಾಗಿವೆ. ಅವನ ಹೆಗಲು ಗಾಡಿಯನ್ನು

ಎಳೆದೆಳೆದು ಜೋಲುಬಿದ್ದು ಪಕ್ಕಕ್ಕೆ ಜಾರಿದ ಮುದಿಯೆತ್ತಿನ ಹೆಗಲಿನಂತಾಗಿದೆ. ಗುಮಾಸ್ತನ ಮೇಲಿನ ಸಿಟ್ಟು ಅವನ ಹತ್ತಿರ ಬರುವಷ್ಟರಲ್ಲಿ ಅಸಹ್ಯವಾಗಿ ಬದಲಾಯಿತು.

ಮೆಟ್ಟಿಲುಗಳ ಮೇಲೆ ಬೂಟಿನ ಸದ್ದು ಮಾಡುತ್ತಾ ನೂಕರಾಜು ಬೀದಿಗೆ ಬಂದ. ಅವನ ಹಿಂದೆ ಬರುತ್ತಿದ್ದ ಅಮ್ಮಯ್ಯ ಅವನ ನೆರಳಂತೆ ಅವನ ಹೆಜ್ಜೆಯಲ್ಲಿ ಹೆಜ್ಜೆಯಿಟ್ಟು ಮೆಲ್ಲಡಿಯಿಡುತ್ತಿದ್ದಳು.

'ಪ್ರತಿ ಮುಂಡೇಮಗನಿಗೂ ಇದೊಂದು ವೇಷವಾಗಿದೆ' ಎಂದ ಗುಮಾಸ್ತ. ಯಾರನ್ನು ಬೈಯಬೇಕೆಂದರೂ ಅವರು ಬೆನ್ನು ತಿರುಗಿದ ಮೇಲೆಯೇ ಬಯ್ಯೋದು.

'ಯಾರವನು?' ಅವರು ವಾಪಸು ಬಂದು ಒದೆಯುವರೇನೋ ಎಂದು ಭಯಪಟ್ಟು ದೇವಪ್ಪ ಹೇಳಿದ. ಅವರಾರೆಂದು ದೇವಪ್ಪನಿಗೂ ಅರಿಯದು. ಆದರೂ,

"ಆ ಹುಡುಗಿ ಮಾತ್ರ ಅವನ ಹೆಂಡತಿಯೇ"

"ನಿನಗವರು ಗೊತ್ತೇ?"

"ನನಗ್ಗೊತ್ತಿಲ್ಲ, ಆದರೆ ಆ ಹುಡುಗಿಯ ಕತ್ತಿನಲ್ಲಿ ಮಾಂಗಲ್ಯವಿತ್ತು."

"ಮಾಂಗಲ್ಯ ಸೂತ್ರವು ಎಲ್ಲರ ಕೊರಳಲ್ಲಿರುತ್ತವೆ. ಅದು ಅವನೇ ಕಟ್ಟಿದ್ದೆಂದು ಅದರ ಮೇಲೆ ಬರೆದಿದೆಯೇನು?" ಆಗ ದೇವಪ್ಪ "ನೀನು ಕಟ್ಟಿದ್ದರ ಮೇಲೆ ನಿನ್ನ ಹೆಸರಿದೆಯೇನೋ ಮಂಕಾ?" ಎಂದು ಮನಸ್ಸಿನಲ್ಲಿ ಅಂದುಕೊಂಡು ತುಂಡು ಬಟ್ಟೆಯಿಂದ ಮುಖವನ್ನು ಒರೆಸಿಕೊಂಡ.

ಊಟಕ್ಕೆ ಹೊರಟ ದೇವಪ್ಪ ಮೆಟ್ಟಿಲಿಳಿದು ಕೆಳಗೆ ಬಂದಾಗ ಮೊದಲ ಸಿನಿಮಾ ನೋಡಿ ಹೊರಬಂದ ಜನರೂ, ಎರಡನೇ ಸಿನಿಮಾ ನೋಡಲು ಹೊರಡುವವರೂ ಕಾರು, ಬಸ್ಸು, ರಿಕ್ಷಾ ರೋಡನ್ನು ತುಂಬಿವೆ. ರಸ್ತೆಯ ಆ ಕಡೆ ಬೀಡಾ ಅಂಗಡಿಯನ್ನು ಜನರು ಹುಳುಗಳಂತೆ ಮುತ್ತಿದ್ದಾರೆ. ದಟ್ಟವಾಗಿ ಕತ್ತಲಂತೆ, ನೆರಳಂತೆ ಮುತ್ತುವ ಮಂದಿ ಬೆಳ್ಳಗೆ ಬೆಳದಿಂಗಳಿಗಿಂತಲೂ ಬಿಳಿದಾಗಿ ಸುರಿಯುವ ಬೆಳಕು, ಆ ಹುಡುಗ, ಹುಡುಗೀ ಅಲ್ಲೇ ಇದ್ದರು. ಆ ಜನಸಂದಣಿಯನ್ನು ಅಚ್ಚರಿಯಿಂದ ನೋಡುತ್ತ ನಿಂತಿದ್ದಾಳೆ ಅಮ್ಮಯ್ಯ, ಆ ಹುಡುಗನ ದೃಷ್ಟಿ ಲಾಜಿಂಗ್ ಮೇಲೆಯೇ ನೆಟ್ಟಿವೆ. ದೇವಪ್ಪನಿಗೆ 'ಅಯ್ಯೋ ಪಾಪ!' ಎನಿಸಿತು. ಉಂಡು, ಬೀಡಿ ಸೇದಿ, ತಲೆಗೆ ಟುವಾಲು ಸುತ್ತಿ ಕಂಕುಳಲ್ಲಿ ಬೆಡ್‌ಷೀಟ್ ತೆಗೆದುಕೊಂಡು ಗುಡಿಸಲಿನಿಂದ ದೇವಪ್ಪ ಹೊರ ಬಂದಾಗ ಆಗಲೇ ಎರಡನೇ ಜಾವದಲ್ಲಿ ಬೆಳದಿಂಗಳು ಸುರಿಯುತ್ತಿದೆ. ದೇವಪ್ಪ ಸುತ್ತ ಮುತ್ತ ನೋಡಿ ಹತ್ತೂವರೆ ಆಗಿರಬಹುದೆಂದುಕೊಂಡ.

ಅವನು ವರುಷವಿಡೀ ಹೊರ ಬಂದಾಗಲೆಲ್ಲ ಮೂರು ಹೊತ್ತು, ಸಮಯದ ಅಂದಾಜು ಮಾಡುತ್ತಲೇ ಇರುತ್ತಾನೆ. ಸಾಧ್ಯವಾದಾಗಲೆಲ್ಲ ಗಡಿಯಾರದೊಂದಿಗೆ ಸರಿ ನೋಡುತ್ತಿರುತ್ತಾನೆ. ಅವನ ಲೆಕ್ಕ ಯಾವಾಗಲೂ ಸರಿ ಇರುತ್ತದೆ.

ವಾಲ್ಮೀಕಿ ದಿಬ್ಬದಿಂದ ಕೆಳಗೆ ಬೆಳಗುತ್ತಿರುವ ನಗರವನ್ನು ನೋಡಿ 'ಅಷ್ಟೇ ಹತ್ತೂವರೆ' ಎಂದು ಮತ್ತೊಮ್ಮೆ ಗಟ್ಟಿ ಮಾಡಿಕೊಂಡನು, ಈ ದಿಬ್ಬವು ಊರಿನ ಎತ್ತರದ ಕೊನೆಗಿದೆ. ಅಲ್ಲಿಂದ ಮುಂದೆ ಹೋದರೆ ಬರೀ ಬಂಗಲೆಗಳು. ಊರೆಂಬುದು ಇಲ್ಲ. ಪಶ್ಚಿಮದ ಹದ್ದಿಗೆ ಮೈಲುದೂರದಲ್ಲಿ ದೊಡ್ಡ ಕಾರ್ಖಾನೆ, ಅದರ ಹಿಂದೆ ಪುಟ್ಟ ಕಾಲನಿ ಇದೆ. ಕಾರಖಾನೆಯಿಂದ ಟೌನಿಗೆ, ಆಕಡೆ ವಾಯುವ್ಯ ದಿಕ್ಕಿಗೆ ರೈಲು ಜಂಕ್ಷನ್ ಕಡೆಗೆ ತಿರುತಿರುಗಿ ಹೋಗುವ ರೋಡುಗಳಲ್ಲಿ ಹತ್ತಿರ ಹತ್ತಿರವಾಗುತ್ತಾ, ಊರ ಕಡೆಗೊಂದು, ಸ್ಟೇಶನ್ ಕಡೆಗೊಂದು ಲಾರಿಗಳು ಓಡುತ್ತಿವೆ. ಮನೆದೀಪಗಳು ನಂದಿಸಲ್ಪಟ್ಟಿವೆ. ಊರು ಕತ್ತಲ ಮುಸುಕಿನಲ್ಲಿ ಬೆಳಕಿನ ದಾರಿಗಳಲ್ಲಿ ಕಾಣುತ್ತಿದೆ. ದೇವಪ್ಪನು ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ಲಾಜಿಂಗ್ ಸೇರುವಾಗ ಏನಿಲ್ಲವೆಂದರೂ ಹನ್ನೊಂದು, ಹನ್ನೊಂದು ಕಾಲು ಆದೀತು.

ಅವನೆದುರಿಗೆ ಜೋಡಿಯೊಂದು ಗಡಗಡ ಬರುತ್ತಿದೆ. ಆ ಕಡೆಗಿರುವ ಹಾಲ್‌ನಿಂದ ಬರುತ್ತಿರಬೇಕೆಂದುಕೊಂಡ ದೇವಪ್ಪ. ಆ ಹೆಂಗಳೆಯ ಕಂಕುಳಲ್ಲೊಂದು ಪುಟ್ಟ ಮಗು, ಆತನ ಹೆಗಲ ಮೇಲೊಂದು ಮೂರು ವರ್ಷದ ಹುಡುಗ. ಆಕೆ ತನಗೆ ನೆನಪಾದ ಬದುಕಿನ ಅನೇಕ ಹಾಸ್ಯ ಪ್ರಸಂಗಗಳನ್ನು ಗಟ್ಟಿಯಾಗಿ ಬಣ್ಣಿಸುತ್ತಿದ್ದಾಳೆ. ಒಂದು ಕಡೆ ನಡೆದೂ ನಡೆದೂ ಆಯಾಸವಾದರೆ ಮತ್ತೊಂದೆಡೆ ಮಹದಾನಂದ. ಆಕೆ ನಿಬ್ಬೆರಗಿನಿಂದ ಇದ್ದಾಳೆ.

ಆ ಹುಡುಗ ಹುಡುಗಿ ಏನಾದರೋ? ಎಂದು ದೇವಪ್ಪ ಚಿಂತಿಸಿದ.

ಇನ್ನೊಂದು ಲಾಜಿನಲ್ಲಿ ರೂಮು ಸಿಕ್ಕಿರಬಹುದು. ಸಿಗದಿದ್ದರೆ ಎರಡನೇ ಸಿನಿಮಾ ನೋಡಿ ರಿಕ್ಷಾದಲ್ಲಿ ಮನೆ ಸೇರಿರಬಹುದು. ಪರ ಊರಿನವರಾಗಿದ್ದರೆ ರಾತ್ರಿಯೆಲ್ಲಾ ಯಾವುದಾರೂ ಛತ್ರದ ಕಟ್ಟೆಯ ಮೇಲೆ ಜಾಗರಣ ಮಾಡುತ್ತಿರಬಹುದು, ಪಾಪ.

ಈ ಕಾಲದ ಹುಡುಗರು ನಮ್ಮ ಕಾಲದವರಂತೆ 'ಅಮಾಯಕರಲ್ಲ' ಎಂದುಕೊಂಡ.

ದೇವಪ್ಪನಿಗೆ ಈ ಕಾಲದ ಹುಡುಗರಲ್ಲಿರುವ ಮುನ್ನುಗ್ಗುವ ಧೈರ್ಯ, ಅವರ ಜೀವನಾಸಕ್ತಿ, ಕಂಡರೆ ತುಂಬಾ ಇಷ್ಟ. ಆದಿತ್ಯವಾರ ಬಂತೆಂದರೆ ಹೊಸ ಹೊಸ ಬಟ್ಟೆ ಧರಿಸುತ್ತಾರೆ. ಆಯಿಲ್‌ಇಂಜಿನ್‌ಗಳಲ್ಲಿ ಅಥವಾ ಇನ್ನೆಲ್ಲೇ ಕೆಲಸ ಮಾಡುತ್ತಿರಲಿ, ಅವರು ಆ ದಿನ ರಾಜಕುಮಾರಂತೆಯೇ, ಶ್ರೀಮಂತರ ಮೊಮ್ಮಕ್ಕಳೋ ಎನ್ನುವಂತೆ ಇರುತ್ತಾರೆ. ದಿನವೆಲ್ಲಾ ಕ್ಲಬ್ಬೋ, ಹರಟೆಯೋ, ಆಟ–ಪಾಟ, ಕಡೆಗೊಂದು ಸಿನಿಮಾ, ಚಾಪೆ ಕ್ಲಾಸಿನವನೂ ಆ ದಿನ ಬಾಲ್ಕನಿಗೆ ಹಾರುತ್ತಾನೆ. ನಾಳೆಯ ಚಿಂತೆಯೇ ಇಲ್ಲ.

ದೇವಪ್ಪನಿಗೆ ಪೋತರಾಜನ ಮಾತು ಅಕ್ಷರಶಃ ನಿಜವೆನಿಸುತ್ತದೆ.

ಕೂಲಿ ಮಾಡುವವನು ಕೂಡಿಟ್ಟು ಮಹಡಿಮನೆ ಕಟ್ಟುವುದು ಸಾಧ್ಯವಿಲ್ಲ. ಆದ್ದರಿಂದ ಇದ್ದದ್ದರಲ್ಲಿ ಅನುಭವಿಸಿ ಆನಂದ ಪಡುವುದೇ ಪರಮ ಸುಖ. ಈ ಮಾತಿನ ಅರಿವಿದ್ದರೂ ತನ್ನಂಥವನಿಗೆ ಸುಖಿಸಲು ಕೈ ಮುಂದೆ ಬರುವುದೇ ಇಲ್ಲ. ಪೋತರಾಜು ಮತ್ತು ಅವನಂಥವರು ಸಾಹಸಿಗಳು.

ದೇವಪ್ಪ ಕೆಲಸ ಮಾಡುವ ಲಾಜಿಂಗ್ ಕಟ್ಟುವ ಮೇಸ್ತ್ರಿಗಳಲ್ಲಿ ಪೋತರಾಜು ಪ್ರಮುಖ. ಹೆಸರಿಗೆ ಮುದುಕ ಮೇಸ್ತ್ರಿಯನ್ನು ದೊಡ್ಡ ಮೇಸ್ತ್ರೀ ಎನ್ನುತ್ತಿದ್ದರು. ಆದರೆ ನಿಜವಾದ ಕೆಲಸ, ಉಸ್ತುವಾರಿ ಮತ್ತು ಮಾರ್ಗದರ್ಶನವೆಲ್ಲಾ ಪೋತರಾಜುವಿನದ್ದೇ.

ಅವನಿಗಿನ್ನೂ ಮೂವತ್ತು ತುಂಬಿಲ್ಲ. ಆದರೆ ಅವನಿಗೆ ಕೆಲಸ ಚೆನ್ನಾಗಿ ಗೊತ್ತು. ಅದರಂತೆ ಇತರರಿಂದ ಕೆಲಸ ಮಾಡಿಸಲೂ ಬಲ್ಲ. ಸಮಯ ಬಂದಾಗ ಕೆಲಸಗಾರರನ್ನು ಹುರಿದುಂಬಿಸಿ ಕೆಲಸ ಮಾಡಿಸಬಲ್ಲ. ಅದರಂತೆ ಅವರ ಬೆನ್ನಿಗೆ ನಿಂತು ಸಹಾಯ ಮಾಡಬಲ್ಲ. ದೊಡ್ಡ ಮೇಸ್ತ್ರೀ ಅಲ್ಲ– ಕಾಂಟ್ರಾಕ್ಟರ್ ಕೂಡಾ ಪೋತರಾಜುವಿನ ಅಗತ್ಯವನ್ನು ಗೌರವಿಸುತ್ತಿದ್ದ.

ಈ ಸೂಳೆ ಮಕ್ಕಳಿಗೆ ನಾವು ತಲೆ ಬಾಗಬೇಕೆ? ನಾವು ಅವರನ್ನು ಬೆಳೆಸುತ್ತಿದ್ದೇವೋ ಅಥವಾ ಅವರು ನಮ್ಮನ್ನು ಪೋಷಿಸುತ್ತಿದ್ದಾರೋ? ಯೋಚಿಸಿರಿ. ಈ ಮಹಡಿಯನ್ನು ನೀವು, ನಾವು ಮತ್ತು ಆ ಕಂಟ್ರಾಕ್ಟರ್ ಕತ್ತೇಮಗ ಸೇರಿ ಕಟ್ಟುತ್ತಿದ್ದೇವೆ. ಕೆಲಸ ಪೂರ್ತಿಯಾದ ಮೇಲೆ ನಿಮ್ಮಲ್ಲೇನು ಉಳಿದಿರುತ್ತದೆ? ನನ್ನಲ್ಲೇನು ಉಳಿದಿರುತ್ತದೆ? ಕಂಟ್ರಾಕ್ಟರಿಗೆ ಅಷ್ಟೊಂದು ಉಳಿಯಬೇಕಾದರೆ, ಅದು ಯಾರ ದುಡಿಮೆ? ಯಾರಿಗೆ ಸೇರಬೇಕು?

ನಾನು, ನೀನೋ ಮತ್ತೆ ಕೂಲಿಗಳಿದ್ದರೆ ಕಂಟ್ರಾಕ್ಟರ್ ಇರ್ತಾನೆ. ಅವನಿಲ್ಲದಿದ್ದರೂ ಕೆಲಸವಾಗಬೇಕಾದರೆ ಕತ್ತೆಮಕ್ಕಳು ಕೆಲಸ ಗೊತ್ತಿದ್ದವರ ಹತ್ತಿರ ಬರಲೇಬೇಕು.

ಆದ್ದರಿಂದ ಆ ಕತ್ತೆಮಗನೇ ನಮಗೆ ಬಗ್ಗಬೇಕು. ಇವೇ ಅಲ್ಲ– ಪೋತರಾಜು ವಾದಗಳೆಲ್ಲಾ ಇದೇ ರೀತಿ ಇರುತ್ತವೆ. ಆದರೆ ಅವನ ಮೇಸ್ತ್ರೀ ಅವನಿಗಿಂತ ಅನುಭವದವನು. ಪೋತರಾಜನ ಸ್ವಭಾವವನ್ನರಿತ ಮೇಸ್ತ್ರೀ ಅವನ ಹಿಂದೆಯೇ ಒಬ್ಬನನ್ನು ವ್ಯವಸ್ಥೆ ಮಾಡಿದ, ಅವನು ಟೀ ಅಂದರೆ ಟೀ, ಟಿಫನ್ ಅಂದರೆ ಟಿಫನ್, ಸಿಗರೇಟ್ ಅಂದರೆ ಸಿಗರೇಟ್ ಪ್ಯಾಕೇಟ್ ರೆಡಿ ಇಡಬೇಕಾಗಿತ್ತು. ಕೆಲಸದ ಸ್ಥಳಕ್ಕೆ ಬಂದಾಗಲೆಲ್ಲಾ ಸಣ್ಣವರ ಮುಂದೆ, ದೊಡ್ಡವರ ಮುಂದೆ ಪೋತರಾಜನನ್ನು, ಅವನ ಕೆಲಸಗಾರಿಕೆಯನ್ನು ಹಾಡಿ ಹೊಗಳುತ್ತಿದ್ದ.

ಒಂದು ದಿನ ಮಧ್ಯಾಹ್ನ ಊಟಕ್ಕೂ ಹೋಗದೆ ಮಹಡಿಯ ಮೇಲೆ ವೆಂಟಿಲೇಟರ್ ಡಿಜೈನ್ ಕೆತ್ತುತ್ತಿದ್ದ ಪೋತರಾಜುವನ್ನು ನೋಡಿದ ಸಿಂಹಾಲು ಎಂಬ ಗಟವಾಣಿ– "ಹೇದಯ್ಯ ಪೋತರಾಜು, ಇಷ್ಟೊಂದು ಮಾತಾಡ್ತಿಯಲ್ಲಾ! ನಿನಗೆ ಟೀ, ಸಿಗರೇಟ್‌ಗಳು, ಗಿಗರೇಟ್‌ಗಳೂ ಧಾರಾಳವಾಗಿ ಏಕೆ ಸಿಗುತ್ತಿವೆಯೋ ಗೊತ್ತಾ?" ಎಂದಳು.

"ಅವನು ಕೊಡುವ ಟೀ, ಟಿಫನ್, ಸಿಗರೇಟ್‌ಗಾಗಿ ಈ ಕೆಲಸ ಮಾಡ್ತೀನಂತಾ ಅವನು ಅಂದುಕೊಂಡರೆ ಅವನೊಬ್ಬ ಪದ್ದ. ಅದರಂತೆ ನೀನೂ ಮಹಾ ಪೆದ್ದಿ" ಎಂದು ಅವಳ ಮುಖಕ್ಕೆ ಸಿಗರೇಟಿನ ಹೊಗೆ ಊದಿದ.

ಕಂಟ್ರಾಕ್ಟರ್ ಮೇಸ್ತ್ರೀಗೊಂದು ರೇಟು ಕೊಡುತ್ತಾನೆ. ಅವನು ಕೊಡೋ ರೇಟಿಗೆ ನಾನೂ ಅಷ್ಟೇ ಕೆಲಸ ಮಾಡಬಹುದು. ನಾನು ಅದಕ್ಕಿಂತ ಉತ್ತಮ ಕೆಲಸ ಮಾಡಬಲ್ಲೆ, ನನ್ನ ಕೆಲಸದ ಬೆಲೆ ಕಟ್ಟಿ ಹಣ ಕೊಡುವ ಕತ್ತೆಮಗನಿನ್ನೂ ಹುಟ್ಟಿಲ್ಲ, ಆದರೇನು ಮಾಡಲಿ?

ನನ್ನ ಕೆಲಸವನ್ನು ಮುಚ್ಚಿಡಲೇ? ಮುಚ್ಚಿಡಬಹುದು. ಆದರೆ ನಾಳೆ ಇಲ್ಲಿಯ ಕೆಲಸವನ್ನು ನೋಡಿದವರಿಗೆ ಮೇಸ್ತ್ರಿಯ ಜಿಪುಣತನ ತಿಳಿಯುವುದಿಲ್ಲ. ಆದರೆ ನನ್ನನ್ನು ಕೈಲಾಗದವನು ಅಂದುಕೊಳ್ತಾರೆ.

ಅದೇ ಕೆಲಸಗಾರನಿಗೂ ಕೆಲಸ ಮಾಡಿಸುವವನಿಗೂ ಇರುವ ಭೇದ.

ಈ ಕಟ್ಟಡವಿದೆ. ಇದರಲ್ಲಿ ನಾಳೆ ಲಾಜಿಂಗ್ ಮಾಡ್ತಾರಂತೆ, ಎಲ್ಲರಿಗಿಂತ ರೂಪಾಯಿ ಹೆಚ್ಚೇ ಕೊಡ್ತೀನಿ, ನನಗೊಂದು ರಾತ್ರಿ ಇಲ್ಲಿರಲು ಬಿಡಿ – ಎಂದು ಕೇಳು, ನಿನಗೆಷ್ಟು ಕೊಟ್ಟರೂ ನೀನು ಕೂಲಿ ಆಳಾಗಿರುವವರೆಗೆ ಈ ಭವನದಲ್ಲಿ ಕಾಲಿಡಲು ಬಿಡುವುದಿಲ್ಲ.

"ಅವನ ಸ್ವತ್ತು ಅವನದು. ಅದು ನಿನಗೆ ಸಿಗದಂತೆ ಅವನು ಮಾಡಬಲ್ಲ. ನೀನಾ ಆ ರೀತಿ ಮಾಡಲಾರೆ. ಕೆಲಸಗಾರನ ಕರ್ಮವೇ ಅದು."

ಹೀಗೆ ಕುಸುಕಡು ಮಾಡುತ್ತಾ ಮಾಡಿದರೂ ಪೋತರಾಜು ಕೆಲಸ ಯಶಸ್ವಿಯಾಯಿತು.

ಕಂಟ್ರಾಕ್ಟರ್‌ನ ಸತಾಯಿಸಿ ಮೇಸ್ತ್ರೀಗಳನ್ನು ಉಬ್ಬಿಸಿ, ಬೇಡಿಕೊಂಡು, ರಾತ್ರಿ–ಹಗಲೂ ದೀಪ ಹಾಕಿ. ಕೂಲಿಗಳನ್ನು ಬೆದರಿಸಿ, ಪುಸಲಾಯಿಸಿ ಲಾಜಿಂಗ್ ಪೂರ್ತಿಯಾಗಿ ಸಂಕ್ರಾಂತಿಗೆ ಪ್ರಾರಂಭವಾಯಿತು.

ಹಾಗೆ ಹೀಗಲ್ಲ, ಊರಿಗೆ ಊರೇ ಸಂಭ್ರಮಿಸಿತು. ಆಹಾ ಏನು ಕಟ್ಟಡ! ಏನು ಫಿನಿಷಿಂಗ್! ಮತ್ತೆ ಅದೇನು ಪೇಂಟಿಂಗ್? ಅಲ್ಲಲ್ಲಿ ಅಮೃತಶಿಲೆಯ ಪುತ್ಥಳಿಗಳು, ಕುಮಟಗಳಲ್ಲಿ ಹೂವಿನ ಗಿಡಗಳು, ದಾರಿಬದಿಯಲ್ಲಿ ಕಿರುನಗೆ ಸೂಸುವ ಗಿಡಗಳು, ಮಂಚಗಳು, ಅದರ ಮೇಲೆ ಮೆತ್ತನೆ ಹಾಸಿಗೆಗಳು, ಬಣ್ಣ ಬಣ್ಣದ ದೀಪಗಳು, ಟೆರೇಸ್ ಮೇಲೆ ತೋಟ–ಒಂದು ರೀತಿಯ ಇಂದ್ರಸಭೆಯನ್ನು ಸೃಷ್ಟಿಸಿದರು.

ಬರ ಬರುತ್ತಾ ಕಳಪೆಯಾಗಿ ಇದು ಒಂದು ದರಿದ್ರ ಲಾಜಿಂಗ್ ಆಯಿತು. ಈ ನಡುವೆ ಯಜಮಾನರೂ ತೀರಿಹೋದರು. ಗುಮಾಸ್ತನೇ ಸಮಸ್ತನಾದನು. ಯಜಮಾನರ ಭಾವಮೈದುನನೇ ಅಧಿಪತಿಯಾದ. ವ್ಯಾಪಾರವೇನು ಅಷ್ಟು ಕಡಿಮೆ ಆಗಲಿಲ್ಲ.

ಈಗ ದೇವಪ್ಪನ ದೃಷ್ಟಿ ಮತ್ತೆ ಆ ಜೋಡಿಯ ಕಡೆ ತಿರುಗಿತು. ವ್ಯಾಪಾರವಿನ್ನೂ ಚನ್ನಾಗಿರೋದರಿಂದಲೇ ಈ ಗುಮಾಸ್ತನಿಗೆ ಬಡಿವಾರ. ಪಾಪ, ಆ ಹುಡುಗ ಸಾಕಷ್ಟು ಜಬರದಸ್ತಾಗಿಯೇ ಇದ್ದಾನೆ. ಷರ್ಟಿನ ಕಫ್ ಮೇಲೆ ವಾಚು ಕಟ್ಟಿದ್ದಾನೆ. ನುಣ್ಣಗೆ ಬಾಚಿಕೊಂಡಿದ್ದಾನೆ. ವೇಷ–ಗೀಷ ಎಲ್ಲಾ ಪರವಾಗಿಲ್ಲ. ಏನೋ ಎಡವಟ್ಟಿರಲೇಬೇಕು. ಒಕ್ಕಣ್ಣಿನ ಆ ಗುಮಾಸ್ತ ನೋಡಿದ ಕೂಡಲೇ ಅನುಮಾನಿಸಲು ಏನೋ ಕಾರಣವಿರಲೇಬೇಕು.

ಅದರೊಂದಿಗೆ ಆ ಹುಡುಗಿಯದು ಹಳೆಗಾಲದ ವರ್ತನೆ, ಹೆಚ್ಚೆಂದರೆ ಅವಳಿಗೆ ಹದಿನಾರರ ಹರಯ, ಸೀರೆ ಕಟ್ಟಿದ ರೀತಿ, ತಿಲಕ, ಧರಿಸಿದ ಆಭರಣಗಳು – ಎಲ್ಲಾ ಹಳೆಗಾಲದ ರೀತಿ.

ಇಷ್ಟು ವೈಸಾಗಿರೋ ಹೆಣ್ಣು ಅಪರೂಪ. ಆದರೆ ಮದುವೆ ವಯಸ್ಸು ಬಂದಾಗ ಪದ್ದಮ್ಮ ಮತ್ತು ಗಂಡನ ಮನೆಗೆ ಬಂದಾಗ ಅಪ್ಪಾಯಂ ಸುದ್ದ ಹೀಗೆ ಇದ್ದರು.

ಪದ್ದಮ್ಮ ಈಗೆಲ್ಲಿದ್ದಾಳೊ? ಅಪ್ಪಾಯಂ ಈ ಲೋಕದಲ್ಲೇ ಇಲ್ಲ.

ಕಣ್ಣಿಂದ ದೂರವಾದ ಆ ಇಬ್ಬರ ನೆನಪಿನಲ್ಲಿ ದೇವಪ್ಪನ ಹೃದಯವು ಕಬ್ಬಿಣದ ಕರಗಳಿಂದ ಹಿಸುಕಿದಂತೆ ಯಾತನೆಯನ್ನು ಅನುಭವಿಸಿತು.

ಹುಟ್ಟಿದ ಮನೆಯಿಂದ ಮೆಟ್ಟಿದ ಮನೆಗೆ ಸುಖಸಂಸಾರದ ಆಸೆಯಿಂದ ಬಂದವರನ್ನು ಸಾಸಿವೆಯಷ್ಟು ಸುಖ ನೀಡದೇ ಸತಾಯಿಸುತ್ತಾರೆ. ತಾನು ಕೂಡಾ ಎಲ್ಲರಂತೆ ಅಪ್ಪಾಯಮ್ಮನನ್ನು ಸತಾಯಿಸಿದ್ದು ನೆನಪಾಯಿತು.

ಸಣ್ಣವನಿದ್ದಾಗ ತಿಳಿಯದೇ ಆ ಅಂದರೆ ತಪ್ಪು, ಊ ಅಂದರೆ ತಪ್ಪು, ಎದ್ದರೆ ತಪ್ಪು–ಕೂತರೆ ತಪ್ಪು ಎಂದು ದಂಡಿಸುತ್ತಿದ್ದ.

ಸ್ವಲ್ಪ ದೊಡ್ಡವನಾದ ಮೇಲೆ ಬಾಳಿನ ಭಾರವನ್ನು ಹೊರಲಾಗದೇ, ಸಾಕಾಗುವಷ್ಟು ದುಡಿಮೆಯಿಲ್ಲದೇ, ದುಡಿದದ್ದು ಕುಡಿತದ ಪಾಲಾಗಿ, ಬಂಧುಗಳು ಬಂದರೆ, ಬೀದಿಯಲ್ಲಿ ಜಗಳವಾದರೆ, ಸಂಕಟವಾದರೆ, ಅವಳಿಗೆ ಕೈಯೋ ಕಾಲೋ ನೋವಾದರೆ ಒಳಿತೆನದೆ–ಕೆಟ್ಟದೆನ್ನದೇ ಹಬ್ಬವೆನ್ನದೇ ಕೈಗೆ ಸಿಕ್ಕದ್ದರಿಂದ ಬಡಿಯೋದೇ ಕೆಲಸ.

ಮುದಕ, ಮುದುಕಿ ಅಡ್ಡ ಬಂದು ಕಾಪಾಡದಿದ್ದರೆ ಅವಳೆಂದೋ ಸಾಯುತ್ತಿದ್ದಳು.

ಬರಬರುತ್ತಾ ತಾನು ಬದಲಾದದ್ದು ಯಾವಾಗ? ಹೇಗೆ? ಹೇಳಲಾರ.

ಅಮ್ಮ, ಅಪ್ಪಾ ವರುಷದಲ್ಲಿ ಒಬ್ಬರ ಹಿಂದೆ ಒಬ್ಬರು ಹೋದರು. ಅದಕ್ಕೂ ಮೊದಲು ತನಗೊಮ್ಮೆ ದೊಡ್ಡ ರೋಗವೇ ಬಂತು. ಅನಂತರ ಪದ್ದಮ್ಮ ಎಲ್ಲೋ ಬಿದ್ದು ಸತ್ತಳೆಂದು ತಿಳಿಸಿದರು. ಅವಳ ಅತ್ತೆಮನೆಯವರು ಆಗದವರು, ಯಾರೊಂದಿಗೋ ಓಡಿ ಹೋದಳೆಂದು ಹರಟಿದರು. ಅನಂತರ ಅಪ್ಪಾಯಮ್ಮಗೆ ಖಾಯಿಲೆ ಬಂತು. ಇದೆಲ್ಲಾ ನಾಲ್ಕೈದು ವರುಷದಲ್ಲಿಯೇ ನಡೆಯಿತು.

ಇಷ್ಟಾದ ನಂತರ ಬರೀ ಬೈದಾಡಿದನೇ ಹೊರತು ಎಂದೂ ಕೈ ಮಾಡಲಿಲ್ಲ.

ಅವಳಿಗೆ ಮೂವತ್ತಾದ ಮೇಲೆ, ತನಗೆ ನಲವತ್ತಾದ ಮೇಲೆ ಐದಾರು ವರ್ಷ ಅದೇನು ಸುಖಪಟ್ಟರೋ. ಅದೇ ಸುಖ, ಅದೇನು ಮಹಾ! ತೀರದ ಆಸೆಗಳು.

ಸಾಯುವ ಮುಂಚೆ, ಜಬ್ಬಿಗೂ ಸುಧಾರಣೆಗೂ ನಡುವೆ, ಅವರೊಮ್ಮೆ ದಾಂಪತ್ಯ ಸುಖ ಕಂಡರು. ಎಲ್ಲಾ ಆದ ಮೇಲೆ ಅಪ್ಪಾಯಮ್ಮ–

ಒಂದು ಆಸೆ ನೆರವೇರಿದರೆ ನಾನಿನ್ನು ಸತ್ತರೂ ಪರವಾ ಇಲ್ಲ ಎಂದುಕೊಂಡಳು.

ಗುಡಿಸಿಲಿನಲ್ಲಿ ಅಡ್ಡ ಪರದೆಯ ಆಚೆ ಕುರುಡು ದೀಪವಿದೆ. ಅದು ಮೊದಲೇ ಮಬ್ಬುದೀಪ. ಅಪ್ಪಾಯಂ ಅದನ್ನು ಮತ್ತಷ್ಟು ಕಡಿಮೆ ಮಾಡಿದಳು. ದೇವಪ್ಪನಿಗೆ ಅವಳು ಕಾಣುತ್ತಿರಲಿಲ್ಲ. ಅವಳ ಕಣ್ಣು ಮಾತ್ರ ತಳ ತಳ ಹೊಳೆಯುತ್ತಿದ್ದವು.

ಏನೇ! ಎಂದು ದೇವಪ್ಪ ಕದಲಿದಾಗ ಕಾಲಂಚಿಗೆ ಇದ್ದ ಮುಸುರೆ ಪಾತ್ರೆ ಧಡಧಡವೆಂದವು. ಅಂತಹ ಸುಖದ ಸಮಯದಲ್ಲಿ ಅಪ್ಪಾಯಮ್ಮನಿಗೆ ಶಬ್ದವೆಂದರೆ ವಾಕರಿಕೆ. ತಟ್ಟನೆ ಎದ್ದಾಕೆ ಚಿಂದಿ ತೆರೆಯ ಒಂದು ತೂತಿನಿಂದ ಹಣಿಕಿ ನೋಡಿದಳು. ಆಕಡೆ ಮಕ್ಕಳೆಲ್ಲಾ ಗಾಢ ನಿದ್ದೆಯಲ್ಲಿದ್ದರು.

ನಾಳೆ ಹೇಳ್ತೀನಿ ಎಂದವಳೇ ಎದ್ದು ಹೊರಟಳು. ತಲೆ ಕೆದರಿದರೂ, ಕಟ್ಟಿದ ಬುಚ್ಚಡ ಕದಲಿರಲಿಲ್ಲ, ಬೆವೆತು ರಾಡಿಯಾಗಿದ್ದರೂ ಹಣೆಯ ಕುಂಕುಮ ಕದಲಿರಲಿಲ್ಲ. ಮುಖ ಒರೆಸಿಕೊಂಡಾಗ ಕಣ್ಣಿನ ಕಾಡಿಗೆ ಅಳಿಸಿತ್ತು.

ಕುಪ್ಪಸ ತೊಡಲು ಹೋದಾಗ ದೇವಪ್ಪ ಎಡಗೈ ಹಿಡಿದು ಎಳೆದುಕೊಂಡ. 'ಅಮ್ಮಾ' ಎಂದು ಕನಲಿದಳು. ಅಪ್ಪಾಯಂ ಅಂಗೀಕರಿಸಲಿಲ್ಲ. ಆದರೆ ಆಕೆಯ ಸೊಂಟ ಉಳುಕಿರಬೇಕು.

ಮತ್ತೆ ಕೆಲ ಹೊತ್ತು ಮೇಲಿಂದ ಮೇಲೆ ಬೇಡಿಕೊಂಡ ಮೇಲೆ 'ಹೊರನಡೆ, ಅಲ್ಲಿ ಹೇಳ್ತೀನಿ' ಎಂದು ಎದ್ದು ಹೊರಟಳು. ಬೆಳದಿಂಗಳು ಅಷ್ಟೇನೂ ಚನ್ನಾಗಿರಲಿಲ್ಲ, ಸುತ್ತಲಿನ ಲೋಕವೆಲ್ಲಾ ನಿದ್ರೆಯ ಅಮಲಿನಲ್ಲಿತ್ತು.

ಗುಡಿಸಲ ದೀಪವನ್ನು ದೊಡ್ಡದು ಮಾಡಿ, ಅವಸರದ ತೆರೆ ಗಿರೆ ತೆಗೆದುಹಾಕಿ, ದೇವಪ್ಪನಿಗೆ ಹೊರಗೆ, ತನಗೆ ಒಳಗೆ ಹಾಸಿಗೆ ಹಾಕಿದಳು. ಮಕ್ಕಳಿಗೆ ಹೊದಿಸಿದ ಹರಕು ಚಾದರಗಳನ್ನೇ ಸರಿ ಮಾಡಿದಳು. ಬಾಗಿಲ ಹತ್ತಿರ ಬಂದು ಕೂತಳು.

ಅವರ ದಾಂಪತ್ಯ ಜೀವನಕ್ಕೆ ಈಗಾಗಲೇ ಇಪ್ಪತ್ತು ವರುಷ. ಅಮ್ಮ-ಅಪ್ಪ ಒಬ್ಬರ ನಂತರ ಒಬ್ಬರು ಹೋದರು. ಅಪ್ಪನ ಹಾಸಿಗೆ ಖಾಲಿ ಆಯಿತು. ಆ ಹಾಸಿಗೆ ಅವರ ಮಂಚಕ್ಕೆ ಸರಿಯಾಗಿತ್ತು. ಆದರೆ ಅಪ್ಪನೊಂದಿಗೆ ಮಂಚ ಹೋಯಿತು. ದೇವಪ್ಪ ನೆಲದ ಮೇಲೆ ಮಲಗುತ್ತಾನೆ.

ಆದರೂ ಆ ಗೋಣಿಚೀಲದ ಮೇಲೆ ಆರಾಮವಾಗಿ ಕಾಲು ಚಾಚಿ, ಚಿಂದಿಸೀರೆಯನ್ನು ಹೊದ್ದು ಮಲಗಿದರೆ, ತಲೆದಿಂಬಿನ ಕಡೆ ಬಾಗಿಲಿಗೆ ಆತುಕೂತ ಅಪ್ಪಾಯಮ್ಮ ಸುದ್ದಿ ಸಮಾಚಾರ ತಿಳಿಸುತ್ತಿದ್ದರೆ, ಮೆಲ್ಲ ಮೆಲ್ಲಗೆ ತೆರೆ ತೆರೆಯಾಗಿ ನಿದ್ದೆ ಆವರಿಸುತ್ತಿದ್ದರೆ, ಜೀವಕ್ಕೆ ಇನ್ನೇನು ಬೇಕು? ಎಂದುಕೊಳ್ಳುತ್ತಾನೆ ದೇವಪ್ಪ.

ಅಪ್ಪಾಯಂ ತಗಣಿ ಕಾಟಕ್ಕೆ ಬೆನ್ನು ಗೀರುತ್ತಿದ್ದರೆ, ದೇವಪ್ಪ ಆಕೆಯ ಕಡೆ ತಿರುಗಿ 'ಈಗ ಹೇಳು' ಎನ್ನುತ್ತಾನೆ.

ಕೆಲಕಾಲ ತಿಗಣೆಗಳನ್ನು ಹುಡುಕಿ, ಹೊಸಕಿ ಹಾಕಿ 'ಅಮೇಲೆ ಬಾ' ಎಂದು ನಸುನಕ್ಕು, ತರುವಾಯ ನಾಚಿಕೆ ಮರೆತು ನುಡಿದಳು:

'ಇಡೀ ರಾತ್ರಿ ಬಿಡದಂತೆ ಒಂದೇ ಮಗ್ಗಲು ನಿನ್ನೊಂದಿಗೆ ಮಲಗಬೇಕೆನಿಸಿದೆ' ಎಂದಳು ದೈನ್ಯದಿಂದ.

ಮೊದಲರ್ಧ ಮಾತು ಸ್ಪಷ್ಟವಾಗಿ ಕೇಳಿದ್ದರಿಂದ ದೇವಪ್ಪನಿಗೆ ಉಳಿದ ಮಾತು ಮನದಟ್ಟಾಯಿತು. ತಕ್ಷಣ ಅವನಿಗೆ ಅಡಿಯಿಂದ ಮುಡಿಗೆ. ಮುಡಿಯಿಂದ ಅಡಿಗೆ ಚೈತನ್ಯ ಪ್ರವಾಹವು ದೌಡಾಯಿಸಿತು. ಅವನ ಕಣ್ಣ ಮುಂದೆ ಚಿತ್ರಪಟ ಸಂಪುಟವೇ ತೆರೆಯಿತು.

ಅವರು ಮದುವೆಯಾದಂದಿನಿಂದ ಒಂದೇ ಕೋಣೆಯ ಗುಡಿಸಿಲಿನಲ್ಲಿ ಬಾಡಿಗೆಗೆ ಇದ್ದಾರೆ. ಮೊದಲ ಮೂರು ರಾತ್ರಿ ಬಿಟ್ಟರೆ ಏಕಾಂತವೆಂದರೇನೋ? ಅವರು ಅರಿಯರು.

ಮೊದಲು ಅಪ್ಪ-ತಂಗಿಯರು, ಅಣ್ಣ-ತಮ್ಮಂದಿರು ಸೇರಿ ಹತ್ತು ಜನ. ಅನಂತರ ಅವರ ಸಂತಾನ - ತಮ್ಮ ಸಂತಾನ ಸೇರಿದವು. ಈಗ ತಾವು, ತಮ್ಮ ಮಕ್ಕಳೇ ಹತ್ತು ಜನರಾಗಿದ್ದಾರೆ.

ಅದರಲ್ಲೇ, ಅಂತಹ ಪುಟ್ಟ ಕೊಂಪೆಯಲ್ಲೇ ಮೂರುಜೋಡಿ, ನಾಲ್ಕುಜೋಡಿ, ಅನುಸರಿಸಿ ಜೀವಿಸಿದ ಕಾಲವಿದೆ. ಕಷ್ಟ-ಸಂಕಷ್ಟದಿಂದ ಮಕ್ಕಳು ಮರಿ, ಕುಳುಂಬರದಲ್ಲಿ ಮನುಷ್ಯರ ಮೇಲೆ ಮನುಷ್ಯರು ಮಂಚದ ಕೆಳಗೆ, ಮೇಲೆ, ಹಾಗೂ ಹೀಗೂ ದಿನಗಳೆದದ್ದು ಆಗಿದೆ.

ಹಿಂದೆ ಮುಂದೆ ಭಯಂಕರವಾದ ಸಾಂಕ್ರಾಮಿಕ ರೋಗಗಳೊಂದಿಗೆ, ಮೇಲೆ-ಕೆಳಗೆ ನೀರೂ ಕೆಸರೂ ಹರಿಯುತ್ತಿರುವಾಗ, ಮುದುರಿಕೊಂಡು ಗಡ ಗಡ ನಡುಗುತ್ತಾ ತೊಪ್ಪನೆ ತೋಯ್ದುಕೊಂಡು, ಬದಲಾಯಿಸಲು ಬಟ್ಟೆಗಳಿಲ್ಲದೇ, ಹಗಲೂ-ರಾತ್ರಿ ಕಳೆದ ಕಾಲವೂ ಇದೆ.

ಮೈಮೇಲೆ ಬಟ್ಟೆಯಿಲ್ಲದೆ, ಅರ್ಧನಿದ್ದೆಯಲ್ಲಿ, ಮತ್ತೆ ನಿದ್ದೆಯಿಂದೆದ್ದು, ಜಾಗರಣ ಮಾಡಿ, ದೀಪವಾರಿಸಿ, ಕತ್ತಲ ಮರೆಯಲ್ಲಿ, ಗೋಣಿ ಪರದೆಯ ಹಿಂದೆ, ತಡಿಕೆಯ ಹಿಂದೆ, ಮಂಚದ ಹಿಂದೆ ಗಾಬರಿ ಗಾಬರಿಯಿಂದ, ಹಡಾವಿಡಿಯಲ್ಲಿ, ಏನೋ ಮಾಡಬಾರದ ಕೆಲಸ ಮಾಡಿದವರಂತೆ, ಅಸಹ್ಯಭಾವದಿಂದ, ತೃಪ್ತಿಯಾಗದ ಆಸೆಗಳಿಂದ, ಕಡಿಯುವ ತಿಗಣೆಗಳನ್ನು ಹೊಡೆದೋಡಿಸುತ್ತಾ, ಮಕ್ಕಳ ರೋದನವನ್ನು, ಮುದುಕರ ಯಾತನೆಯನ್ನೂ, ಸುತ್ತಿದ ದುರ್ವಾಸನೆಯಲ್ಲಿ ಈ ವರೆಗೆ ಇವರ ಬದುಕು ಸಾಗಿದೆ.

ದೇವಪ್ಪ ಎಂದೂ ಗಮನಿಸಿದವನಲ್ಲ. ಅಪ್ಪಾಯಮ್ಮನಿಗೂ ಮನಸು-ಕನಸು ಇವೆ ಎಂದಾಯಿತು.

ಕಟ್ಟುತ್ತಿರುವ ಮನೆಗಳ ಮುಂದೆ ಸುಮ್ಮನೇ ನೋಡುತ್ತಾ ನಿಂತುಬಿಡುವಳು, ಅಪ್ಪಾಯಮ್ಮ ದೊಡ್ಡ ದೊಡ್ಡ ಮನೆಗಳ ನೋಡಿ-ಎಷ್ಟು ದೊಡ್ಡ ಮನೆಗಳು- ಎಂದು ಬೆರಗಾಗುವಳು. ಒಮ್ಮೆ ಒಬ್ಬ ಶ್ರೀಮಂತರ ಮನೆಗೆ ಸುಣ್ಣ ಬಳಿಯಲು ಹೋಗಿ ಬಂದಮೇಲೆ ಹತ್ತು ಹದಿನೈದು ದಿನ ಆ ಮನೆಯದೇ ವರ್ಣನೆ. ಅಲ್ಲಿ ತನ್ನ ಎಣಿಕೆಗೆ ಸಿಗದ ಕೋಣೆಗಳನ್ನು, ಅಲ್ಲಿರುವ ಅಮೂಲ್ಯ ವಸ್ತುಗಳನ್ನು, ಸುಪ್ಪತ್ತಿಗೆಯ ಹಾಸಿಗೆಗಳನ್ನು, ಮೆತ್ತನೆ ಸೋಫಾ ಸೆಟ್‌ಗಳನ್ನು, ಅವುಗಳ ಶುಭ್ರತೆಯನ್ನು, ಅವುಗಳನ್ನು ಉಪಯೋಗಿಸುವ ನಯ ನಾಜೂಕಿನ ಜನರನ್ನು, ಮತ್ತೆ ಮತ್ತೆ ಬಣ್ಣಿಸಿದಳು.

ಮತ್ತೊಮ್ಮೆ ಒಂದು ದೊಡ್ಡ ಮನೆಯನ್ನು ವರ್ಣಿಸಿ, ಅಲ್ಲಿನ ಯಜಮಾನಿಗೆ ಗಂಡ ಮತ್ತು ಇಬ್ಬರು ಮಕ್ಕಳು, ಅಲ್ಲದೇ ಮತ್ತಾರಿಲ್ಲ ಎಂದಳು. ಬೀಗ ಜಡಿದ ಮನೆಗಳು, ಜನರಿರದೇ ಹಾಳಾಗುತ್ತಿರುವ ಮನೆಗಳ ಬಗ್ಗೆ ಆಕೆ ಮಾತಾಡಿಲ್ಲ. ಎಂದಿಗಾದರೂ ಎರಡು ಕೋಣೆಯ ಪುಟ್ಟ ಮನೆಯನ್ನು ಕಟ್ಟಿಕೊಳ್ಳಬಯಸುವುದೂ ದೊಡ್ಡ ಆಶೆಯೆಂದು ಅರಿತು ಈಗ ಅದನ್ನು ಕೈ ಬಿಟ್ಟಿದ್ದಾಳೆ.

ಈಕೆಗೆ ಈಗ ಇರುವ ಆಸೆಯಿದು ಎಂದಾಯಿತು.

ಜಾಲಿಯಾಗಿ, ಸಹಾನುಭೂತಿಯಿಂದ, ಆಕೆಯ ಆಸೆಯನ್ನು ನೆರವೇರಿಸಲು ದೇವಪ್ಪ ಯೋಚಿಸಿದ. ಆದರೆ ಎಷ್ಟು ಹುಡುಕಿದರೂ ಅಂದು ಅದನ್ನು ನೆರವೇರಿಸಬಲ್ಲ ದಾರಿ ಕಾಣಿಸಲಿಲ್ಲ. ಎಂದಾದರೂ ಒಂದು ದಿನ ಅಷ್ಟು ಅವಕಾಶ ಸಿಗಲಾರದೇ? ಎಂದು ಕೆಲ ಕಾಲ ಚಿಂತಿಸಿದ. ಇಷ್ಟರಲ್ಲಿ ಒಂದು ದಿನ ಅಪ್ಪಾಯಮ್ಮ ಎಲ್ಲ ಆಸೆಗಳ ದಾಟಿ 'ನಾರಾಯಣ' ಎಂದು ಬಿಟ್ಟಳು.

ದೇವಪ್ಪನ ಕಣ್ಣಲ್ಲಿ ನೀರು ಉಕ್ಕಲಿಲ್ಲ, ಆದರೆ ಅಪ್ಪಾಯಮ್ಮನ ನೆನಪಿಗೆ ದೀರ್ಘ ನಿಟ್ಟುಸಿರು ಮಾತ್ರ ಬಂತು. ಈ ಪ್ರಪಂಚದಲ್ಲಿ ಬಡತನಕ್ಕಿಂತ ಘೋರವಾದುದು ಮತ್ತೊಂದಿಲ್ಲ ಎನಿಸಿತು. ಅಪ್ಪಾಯುಮ್ಮನನ್ನು ನೆನೆದು ಬಡತನಕ್ಕಿಂತ ಘೋರವಾದದ್ದು ಏನಿದೆ? ಅಂದುಕೊಳ್ಳುವಾಗ ಮತ್ತೆ ಆ ಜೋಡಿ ಕಾಣಿಸಿತು.

ಸಂದಿಯಿಂದ ದೇವಪ್ಪ ಮೇನ್ ರೋಡಿಗೆ ಬಂದ: ಮಾರ್ಕೆಟ್ ರೋಡಿನ ಇಬ್ಬದಿಯ ಭವನಗಳು ಭರ್ಜರಿ ಉಂಡು ಮಲಗಿದ ಭೂತಗಳಂತೆ ತೋರುತ್ತಿವೆ. ಈಗ ಬೆಳದಿಂಗಳು ಹಿಟ್ಟು ಚೆಲ್ಲಿದಂತಿದೆ. ನಿರ್ಮಲವಾದ ನೀಲ ಗಗನದಲ್ಲಿ ಚಂದ್ರನು ಮಿಂಚುತ್ತಿದ್ದಾನೆ.

ದಿನದಂತೆ ಮೂರು ಸಿನಿಮಾಗಳಿರುವ ಸರ್ಕಲ್‌ನಲ್ಲಿ ಹೊಟೇಲುಗಳು ತುಂಬಿಕೊಂಡಿವೆ. ಅವುಗಳ ಪೆಟ್ರೋಮ್ಯಾಕ್ಸ್ ಲೈಟಿನ ಬೆಳಕಿನಲ್ಲಿ ಬೆಳದಿಂಗಳು ವಿದ್ಯುದ್ದೀಪಗಳು ಮಂಕಾಗಿ ಕಾಣುತ್ತಿವೆ. ಅವುಗಳ ನಡುವೆ ಜನರು ಆಕಡೆ ಈಕಡೆ ನೆರಳಿನಂತೆ, ಬೆಳಕಿನಂತೆ ಚಲಿಸುತ್ತಿದ್ದಾರೆ. ಎಲ್ಲಿಂದಲೋ ಬಂದ ರಿಕ್ಷಾಗಳು ಅತ್ತಿತ್ತ ತಿರುಗಿ 'ಕ್ಯೂ' ನಿಲ್ಲುತ್ತಿವೆ.

ನೋಡಿ ನೋಡಿ ಸಾಕಾಗಿ, ಇನ್ನು ಉಪಯೋಗವಿಲ್ಲವೆಂದುಕೊಂಡು ನೂಕರಾಜು ದಕ್ಷಿಣ ದಿಕ್ಕಿಗೆ ಹೊರಟ. ಹೊರಡುವ ಮೊದಲು ಆತನ ಮನಸ್ಸಿನಲ್ಲಿ ಏನಿದ್ದರೂ ಹೊರಟ ಮೇಲೆ ಆತನಲ್ಲಿ ಭೂಮಿ, ಭೂಲೋಕವನ್ನೇ ಆವರಿಸುವಂಥ ಸೇಡಿನ ಭಾವಗಳು ಉಂಟಾಗುತ್ತಿವೆ.

ಅವನಿಗೆ ಇಂತಹ ಅನುಭವಗಳು ಈ ಮೊದಲು ಎರಡು ಸಲ ಸಂಭವಿಸಿವೆ.

ಒಮ್ಮೆ ನೆಹರು ಅವರ ಜನ್ಮದಿನಾಚರಣೆಯ ಸಂದರ್ಭದಲ್ಲಿ ಅನೇಕ ಸ್ಪರ್ಧೆಗಳಿದ್ದವು. ಆಗ ಆತನು ಏಳನೇ ತರಗತಿಯ ವಿದ್ಯಾರ್ಥಿ, ಅವರ ಡ್ರಾಯಿಂಗ್ ಟೀಚರ್ ತುಂಬಾ ಉತ್ಸಾಹಿ, ಅವರು ನೂಕರಾಜು, ಮತ್ತಿಬ್ಬರನ್ನು ಡ್ರಾಯಿಂಗ್ ಸ್ಪರ್ಧೆಗೆ ಕರೆದೊಯ್ದರು. ಅಲ್ಲಿಗೆ ಬಂದವರಲ್ಲಿ ಬಹುತೇಕ ದೊಡ್ಡ ಆಫೀಸರುಗಳ ಅಥವಾ ಶ್ರೀಮಂತರ ಮಕ್ಕಳು. ನೂಕರಾಜುಗೆ ಆ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಬಂದಿತು.

ಸಮಾರಂಭದ ಮೊದಲು ಬಹುಮಾನ ಪಡೆದವರನ್ನೆಲ್ಲಾ ಮುಂದಿನ ಸಾಲಿನಲ್ಲಿ ನಿಲ್ಲಿಸಿದರು. ಟೆರಿಲಿನ್ ಜುಬ್ಬಾಗಳ ನಡುವೆ, ನೈಲಾನ್ ಸಾಕ್ಸ್ ಪಂಕ್ತಿಯಲ್ಲಿ, ಕೆನೆ ಬಣ್ಣದ ರಬ್ಬರ್ ಗೊಂಬೆಗಳ ನಡುವೆ, ಕರಗೆ ಕಾಖಿ ನಿಕ್ಕರಿನಲ್ಲಿ ಬಣ್ಣ ಮಾಸಿದ ಸೀಳು ಸೀಳಾದ ಅಂಗಿಯನ್ನು ಧರಿಸಿದ ನೂಕರಾಜು ತನ್ನ ಕಣ್ಣಿಗೇ ದೃಷ್ಟಿಗೊಂಬೆಯಂತೆ ಕಂಡನು. ಸಾಲಿನಿಂದ ಹೊರಬರಬೇಕೆಂದರೆ ಡ್ರಾಯಿಂಗ್ ಮೇಷ್ಟ್ರು ಬಿಡಲೊಲ್ಲರು.

ಬಹುಮಾನಗಳನ್ನು ನೀಡಲು ಪ್ರಾರಂಭಿಸಿದರು. ಅಂದಿನ ಅಧ್ಯಕ್ಷರಾರೋ ಆತನಿಗೆ ತಿಳಿಯದು, ಯಾರೋ ದೊಡ್ಡ ಮನುಷ್ಯನೆಂದಷ್ಟೇ ನೆನಪು.

ಆತನು ಬಹುಮಾನ ಪಡೆಯುತ್ತಿರುವವರಲ್ಲಿ ಕೆಲವರೊಂದಿಗೆ ಫೋಟೋ ತೆಗೆಸಿಕೊಳ್ಳುತ್ತಿದ್ದಾನೆ.

ಕೆಲವರ ಕೆನ್ನೆ ತಟ್ಟಿ ನಗಿಸುತ್ತಿದ್ದಾನೆ. ಮತ್ತೆ ಕೆಲವರ ತಲೆಯಲ್ಲಿ ಕೈಯಾಡಿಸುತ್ತಿದ್ದಾನೆ. ಬಹುಮಾನ ಕೊಡುವ ಮೊದಲು, ಅನಂತರ ಕೈ ಕುಲುಕುತ್ತಾನೆ.

ತನ್ನ ಹೆಸರು ಕರೆದರು. ತಾನು ಹೋಗುವ ಸಮಯಕ್ಕೆ ಪಕ್ಕದವರೊಂದಿಗೆ ಮಾತನಾಡುತ್ತಿದ್ದಾನೆ. ಬಹುಮಾನವನ್ನು ಕೈಗೆ ತೆಗೆದುಕೊಂಡು ಮುಗುಳು ನಗೆ ಸೂಸುತ್ತಾ ನೂಕರಾಜು ಕಡೆಗೆ ತಿರುಗಿದನು. ಆಕಸ್ಮಾತ್ ಆತನ ಮುಖವು ವಿವರ್ಣವಾಯಿತು.

ತಾನೇನೋ ತಪ್ಪು ಮಾಡುತ್ತಿರುವೆನೆಂದು ಭಾವಿಸಿ ಕುಲುಕಲು ಚಾಚಿದ ಕೈಯನ್ನು ನೂಕರಾಜು ತಟಕ್ಕನೆ ಹಿಂತೆಗೆದುಕೊಂಡನು. ಛೇ! ಸಂಕೋಚವೇಕೆಂದು ಕೈ ಮುಂದೆ ಚಾಚಿದ್ದಾನೆ. ಅವನ ಹಿಂಜರಿಕೆಯನ್ನು ಅರ್ಥಮಾಡಿಕೊಂಡವನಂತೆ ಸಹಾನುಭೂತಿಯಿಂದ ಫೋಜನ್ನು ಧರಿಸಿದನು, ನಮಸ್ಕಾರ ಮಾಡುವುದನ್ನು ಕಲಿಸುವವರಂತೆ ನಮಸ್ಕರಿಸಿ, ಆವನಿಂದ ಪ್ರತಿ ನಮಸ್ಕಾರ ಪಡೆದು, ಮುಂದಿನ ಬಹುಮಾನವನ್ನು ಆ ದೊಡ್ಡ ಮನುಷ್ಯರು ಕೈಗೆತ್ತಿಕೊಂಡರು.

ಇನ್ನೊಮ್ಮೆ ತನ್ನ ಗೆಳೆಯನ ಮನೆಯಲ್ಲಿ ಕೂಡಾ ಹೀಗೆಯೇ ಆಯಿತು.

ಆ ದಿನಗಳಲ್ಲಿ ಅವರ ಫುಟ್‌ಬಾಲ್ ಟೀಮಿಗೆ ನೂಕರಾಜು ಗೋಲಿ, ಕ್ಯಾಪ್ಟನ್ ಬ್ರಾಹ್ಮಣರ ಹುಡುಗ. ಒಂದು ಆಟ ಮುಗಿದ ಮೇಲೆ ಮಾತನಾಡುತ್ತಾ ಅವರ ಮನೆಗೆ ಹೋದರು. ಗೇಟಿನ ಹತ್ತಿರ ಆವನೇನೋ ಹೇಳುತ್ತಿದ್ದಾನೆ. ತನಗೆ ವಿಪರೀತ ನೀರಡಿಕೆಯಾಗಿದೆ. ಪಕ್ಕದಲ್ಲಿದ್ದ ಅವರ ತಮ್ಮನಿಗೆ ನೀರು ತರಲು ಹೇಳಿದನು.

ಒಂದು ನಿಮಿಷದ ನಂತರ ಅವರಮ್ಮನ ದನಿ ಕೇಳಿತು – 'ನೀರು ಯಾರಿಗೋ?' ಗೋಲಿ ನೂಕರಾಜುಗೆಂದು ತಿಳಿದ ಮೇಲೆ. 'ಆ ಗ್ಲಾಸು ಬೇಡ, ತಂಬಿಗೆಯಲ್ಲಿ ಒಯ್ಯಿ' ಎಂದು ಗಟ್ಟಿಯಾಗಿ ಹೇಳಿದರು.

ಗೆಳೆಯ ಏನೋ ಹೇಳ್ತಾನೆ ಇದ್ದ. ಮತ್ತೆ ಬರುವೆನೆಂದು ತಾನು ಹೊರಟನು. ಅವರ ಕೂಗು ಬಹು ದೂರದ ವರೆಗೆ ಕೇಳುತ್ತಿದ್ದರೂ ತಾನು ತಿರುಗಿ ನೋಡಲಿಲ್ಲ.

ಆದರೆ ಶೈಶವದಲ್ಲಿ ನಡೆದ ಮೊದಲ ಪ್ರಸಂಗದಿಂದ ಅವನಿಗಷ್ಟು ನೋವಾಗಲಿಲ್ಲ. ವಯಸ್ಸು ಬಂದ ಮೇಲೆ ನಡೆದ ಎರಡನೇ ಪ್ರಸಂಗವನ್ನು ಹೇಗೋ ನುಂಗಿಕೊಂಡನು. ಆದರೆ ಎಷ್ಟು ಪ್ರಯತ್ನಿಸಿದರೂ ಮರೆಯಲು ಸಾಧ್ಯವಾಗಿಲ್ಲ.

ನೂಕರಾಜು ಜನಿಸಿದ್ದು ಒಡಗುಡಿಸಲಿನಲ್ಲಿಯೇ, ಆದರೆ ಆತನಿಗೆ ಪಂಚಿನ ಮನೆಯವರೊಂದಿಗೆ, ದೊಡ್ಡ ಮಹಡಿ ಮನೆಯವರೊಂದಿಗೆ ಗೆಳೆತನ–ಪರಿಚಯ ಇದೆ. ಓದು ನಡುವೆ ನಿಂತಿದೆ. ಆದರೆ ಇಂದಲ್ಲ ನಾಳೆ ಮೆಟ್ರಿಕ್ ಪರೀಕ್ಷೆಗೆ ಕೂಡುತ್ತಾನೆ. ಅವನ ಗೆಳೆಯರಲ್ಲಿ ಕ್ಲಬ್ ಮೆಂಬರ್‌ಗಳು, ಭಜನಾ ಸಂಘದವರು, ಭಾವೀ ರೌಡಿಗಳು, ಭಾವೀ ರಾಜಕಾರಣಿಗಳು, ಹೋಟೆಲ್ ಮಾಲಕರ, ಸಿನಿಮಾ ಮಾಲಕರ ಮಕ್ಕಳಿದ್ದಾರೆ. ಅವನಿಗೆ ಒಂದು ಕಾರ್ಖಾನೆಯಲ್ಲಿ ಸಣ್ಣದಾದರೂ ಒಳ್ಳೆಯ ನೌಕರಿ ಇದೆ.

ಅವನಿಗೆ ಮಹಿಳೆಯರೆಂದರೆ ಅಪಾರ ಗೌರವ: ಭಾರತಮಾತೆಯ ಹೆಸರು ಕೇಳಿದರೆ ರೋಮಾಂಚನವಾಗುತ್ತದೆ. ಗಾಂಧಿ, ನೆಹರೂ ಅಂದರೆ ದೇವರು, ನೆಹರೂ, ಕೆನಡಿ, ಕೃಶ್ಚೇವ್ ಅವರು ಕೈಸೇರಿಸಿ ಕರತಾಡನ ಮಾಡುವ ದೃಶ್ಯವನ್ನು ಅವನು ಮರೆಯಲಾರ.

ನೂಕರಾಜುಗೆ ಸಂಗೀತವೆಂದರೆ ಹುಚ್ಚು. ಅವನ ಪಾಕೆಟ್‌ಮನಿಯಲ್ಲಿ ಮುಕ್ಕಾಲುಭಾಗ ಸಿನಿಮಾಗಳಿಗೇ ಖರ್ಚಾಗುತ್ತದೆ.

ನೂಕರಾಜುವಿನ ಸ್ವಭಾವದಿಂದ ನೆರೆಹೊರೆಯವರಿಗೆ ಸಂತೋಷವಾದರೆ ಅವನ ತಾಯಿಗೆ ಆತಂಕ, ಅವನಪ್ಪ ಆ ವಯಸ್ಸಿಗೆ ಮಹಾ ಕುಡುಕ. ಅವನಿಗೆ ಐವತ್ತು ತುಂಬುವಲ್ಲಿ ನೂರಾಗಲು ಅದೊಂದು ಕಾರಣ. ಅವನ ಅಣ್ಣಂದಿರು ಮಹಾ ಕುಡುಕರಲ್ಲ. ನೂಕರಾಜುಗೆ ಆಕಡೆ ಮನಸು ಹೋಗಲಿಲ್ಲ. ಅದೇ ಆ ತಾಯಿಗೆ ವಿಚಿತ್ರ.

ಇಷ್ಟರಲ್ಲಿ ಪಾಕಿಸ್ತಾನ್ ದಾಳಿ ಮಾಡಿತು. ನೂಕರಾಜು ಹುಚ್ಚೆದ್ದು ಶ್ರಮದಾನ, ರಕ್ತದಾನ ಮತ್ತು ಕೊನೆಗೆ ಪ್ರಾಣದಾನಕ್ಕೂ ಸಿದ್ಧನಾದ. ತಾಯಿ ಭಯದಿಂದ ಕಣ್ಣೀರಿಟ್ಟು, ಆಣೆ ಪ್ರಮಾಣ ಮಾಡಿಸಿ, ನೇಣು ಹಾಕಿಕೊಳ್ಳುತ್ತೇನೆಂದು ಹೆದರಿಸಿದಳು. ಕೊನೆಗೆ ಹೋಮ್‌ಗಾರ್ಡ್ಸ್ ಸೇರಲು ಒಪ್ಪಿದಳು. ಏನಾದರಾಗಲೆಂದು ಮೂರನೆಯ ಸೋದರಮಾವನನ್ನು ಕರೆಸಿ, ಆತನ ಮಗಳು ಮುತ್ಯಾಲಮ್ಮನೊಂದಿಗೆ ನೂಕರಾಜುನ ಮದುವೆ ನೆರವೇರಿಸಿದಳು.

ಹುಡುಗಿ ಹಳ್ಳಿಯವಳಾದರೂ ಅವಳನ್ನು ಮತ್ತು ಅವಳ ಕಣ್ಣುಗಳನ್ನು ನೋಡಿದ ನೂಕರಾಜು ಮೂಕನಾದ, ಮದುವೆಯಾದ ಆರು ತಿಂಗಳಿಗೆ ಮುತ್ಯಾಲಮ್ಮ ಮೈನೆರೆತಳು. ಆನಂತರ ಕೆಲಕಾಲ ಮೈ ಆರಬೇಕೆಂದರು.

ಈ ನಡುವೆ ಪಾಕಿಸ್ತಾನ ತಣ್ಣಗಾಯಿತು. ಹೋಮ್‌ಗಾರ್ಡ್ಸ್ ಸೇರಿದ ಮೇಲೆ ಅವನ ದೇಶಭಕ್ತಿಯ ಅಭಿಪ್ರಾಯಗಳು ಬದಲಾದವು. ಈಗ ಡ್ಯೂಟಿಗೆ ಹೋಗೋದು ವಾರ, ಪಕ್ಷ,ಮಾಸ ಪತ್ರಿಕೆಗಳನ್ನು ಓದುವುದು ಬಿಟ್ಟಿದ್ದಾನೆ. ಕ್ಲಬ್ಬಿಗೂ ಹೋಗೋದಿಲ್ಲ. ರಾತ್ರಿ ಟ್ಯುಟೋರಿಯಲ್ ಕಾಲೇಜಿಗೆ ಹೋಗುವ ಯೋಚನೆ, ಹಣದ ವ್ಯವಸ್ಥೆಯಾಗದ ಕಾರಣ ಈ ಯೋಚನೆ ಹಾಗೇ ಉಳಿಯಿತು.

ಮೂರು ತಿಂಗಳ ನಂತರ ಶೋಭನ ಕಾರ್ಯ ನೆರವೇರಿತು. ಅಂದಿನ ರಾತ್ರಿಯಿಂದ–ಅಲ್ಲ–ಅದಕ್ಕೆ ಮುನ್ನ ಎಷ್ಟೋ ಹಗಲು–ರಾತ್ರಿ ಅವನ ಮನಸ್ಸೆಲ್ಲಾ ಆ ಒಂದೇ ಸುಖದ ಕನಸು ಕಾಣುತ್ತಿತ್ತು. ಅಪ್ಸರಾ ಹೋಟೆಲ್‌ನ ಆರನೇ ಮಹಡಿಯ ಕೋಣೆಯಲ್ಲ. ಸಾಧಾರಣವಾದ ಸ್ವಚ್ಛವಾದ ಲಾಜಿಂಗ್‌ನ ಮೂಲೆಯ ಕೋಣೆಯಾದರೂ ಸರಿ, ಪ್ರೇಯಸಿಯೊಂದಿಗೆ ಒಂದು ರಾತ್ರಿ ಕಳೆಯುವಾಸೆ.

ಅದಕ್ಕಾಗಿ ಮೂರು ತಿಂಗಳಿಂದ ಎಲ್ಲ ಬಯಕೆಗಳನ್ನು ಹತ್ತಿಕ್ಕಿ ಹಣ ಕೂಡಿಸಿದ್ದ. ಮೂರುದಿನದಿಂದ ಮನದನ್ನೆಯ ಹತ್ತಿರ ನಾನಾ ರೀತಿ ವಾದಿಸಿ ಅವಳಂಗೀಕಾರವನ್ನು ಪಡೆದ, ಹೇಳಿದ ಸುಳ್ಳನ್ನೇ ಹೇಳಿದೆ ಒಂದು ರಾತ್ರಿ ತಾವು ಹೊರಹೋಗುವುದಕ್ಕೆ ಹಿರಿಯರು ಕಣ್ಮುಚ್ಚಿ ಅನುಮತಿ ನೀಡುವಂತೆ ಮಾಡಿದ. ಇಷ್ಟು ಮಾಡಿದ ಮೇಲೆ ಆಗಿದ್ದು ಇದು.

ಊರ ಕೊನೇ ಅಲದ ಮರದ ಕೆಳಗೆ ಮುನಿಸಿಪಲ್ ಆಸ್ಪತ್ರೆ ಗೇಟಿನ ಹತ್ತಿರ ನೂಕರಾಜುಗೆ ಜ್ಞಾನೋದಯವಾಯಿತು. ತಟ್ಟನೆ ಹಿಂತಿರುಗಿ ನೋಡಿದರೆ ಹೆಂಡತಿ ಹಿಂದೆಯೇ ಇದ್ದಾಳೆ.

ಅಂತಹ ಸಮಯದಲ್ಲಿ, ಅಂತಹ ಜಾಗದಲ್ಲಿ ಒಂದು ಜೋಡಿ ಕಂಡರೆ ಯಾವ ರಿಕ್ಷಾವಾಲಾ ಆದರೂ ಗಂಟೆ ಬಾರಿಸುತ್ತಾನೆ. ಹಾಗೆ ಬಾರಿಸಿದರೆ, ವಿಷಲ್ ಹಾಕಿದರೆ ಮೊದಲು ಸಿಟ್ಟು ಬಂದರೂ, ಅವರಲ್ಲಿ ತಪ್ಪೇನಿದೆ? ಬಂದ ರಿಕ್ಷಾ ಹತ್ತಿ ಕೂತ ನೂಕರಾಜು ಹೆಂಡತಿಯ ಸ್ಪರ್ಶದಿಂದ ಈ ಲೋಕಕ್ಕೆ ಬಂದವನು– 'ವೆಂಕಟೇಶ್ವರ ಟಾಕೀಸ್‌ಗೆ ನಡೆ' ಎಂದನು. ಅಂದು ವೆಂಕಟೇಶ್ವರ ಟಾಕೀಸ್ ಅಲ್ಲ, ಕನಕದುರ್ಗ ಪ್ಯಾಲೇಸ್ ಕೂಡಾ ಹೌಸ್‌ಫುಲ್.

ಕ್ಷಣಕಾಲ ನೂಕರಾಜುಗೆ ವಿಪರೀತ ಕೋಪ ಬಂತು ಆದರೆ ಯಾರ ಮೇಲೆ ?

'ಹಸಿವಾಗ್ತಿದೆಯಾ?' ಎಂದು ಹೆಂಡತಿಯನ್ನು ಕೇಳಿದ.

ಅವನ ಮಾತಿಗಾಗಿಯೆ ಮೈಯಲ್ಲಾ ಕಿವಿಯಾಗಿದ್ದ, ಅವನ ನೋಟಕ್ಕಾಗಿಯೇ ಮೈಯಲ್ಲಾ ಕಣ್ಣಾಗಿದ್ದ ಆಕೆ – ಊಹೂಂ ಎಂದು, ನಿನಗೆ ಬೇಕಾದರೆ ತಿನ್ನು ಎಂದು ಹೇಳಿದಳು.

ಆಕೆಯ ಕಣ್ಣಿನ ಕರುಣೆ, ಆಕೆಯ ಮಾತಿನಲ್ಲಿ ಆರ್ದ್ರತೆ, ನೂಕರಾಜುನ ಹೃದಯವನ್ನು ತುಂಬಿದವು.

'ನಡೆ' ಎಂದು ಪೆಟ್ರೊಮ್ಯಾಕ್ಸ್ ಲೈಟಿನ ಬಯಲು ಹೋಟೆಲ್‌ಗೆ ನಡೆದ.

ಉಡುಪಿ ಶ್ರೀಕೃಷ್ಣವಿಲಾಸ್, ಸಾಧ್ಯವಾದರೆ ಎ/ಸಿ ರೂಮಿನಲ್ಲಿ ದಂಪತಿಗಳು ಏಕಾಂತವಾಗಿ ಮಾಡಬೇಕಿದ್ದ ಊಟವದು ಕನಕದುರ್ಗ ಟೀಷಾಪಿನಲ್ಲಿ. ಹೊಲಸು ಗಟಾರದ ಪಕ್ಕದಲ್ಲಿ, ಕುಂಟುವ ಬೆಂಚಿನ ಮೇಲೆ ನೀರಿಗೆ ತೊಯ್ದು ಬಿಸಿಲಿಗೆ ಒಣಗಿ ಕಪ್ಪಾದ, ಮೊದಲ ಆಟ ನೋಡಿದ ಜನರಿಂದ ಕೆಸರು ಕೆಸರಾದ ಟೇಬಲ್ ಮೇಲೆ, ಅಂಚುಮುರಿದು ಮಧ್ಯದಲ್ಲಿ ತಗ್ಗುದಿನ್ನೆಯಾದ ಪ್ಲೇಟಿನ ಫಲಾಹಾರವಾಗಿ ತಯಾರಾಯಿತು.

ಸ್ವಲ್ಪ ದೂರದಲ್ಲಿ ಮೂರರಲ್ಲಿ ಆರು ಚಾ ಮಾಡ್ಸಿಕೊಂಡು ಬೇರಾರು ಮಂದಿ ಕೇಕೆಹಾಕಿ ನಗುತ್ತಿದ್ದಾರೆ. ಅವರನ್ನು ತಡವಿ ಒಂದಿಬ್ಬರನ್ನು ಚನ್ನಾಗಿ ಹಣಿಯಬೇಕೆಂದು ನೂಕರಾಜು ಮನಸ್ಸು ತಡಪಡಿಸಿತು.

ಬಿಲ್ಲು ಕೊಟ್ಟು ಹೊರಗೆ ಬಂದು ಬೇಕೆಂತಲೇ ಅವರ ಮುಂದೆ ನಡೆದ ನೂಕರಾಜು. ಅವರಲ್ಲಿಬ್ಬರು ಮುತ್ಯಾಲಮ್ಮನ ಕಡೆ ಗೇಲಿನೋಟ ಬೀರಿದರು. 'ಒಬ್ಬರೋ ಇಬ್ಬರೋ ಇವತ್ತು ಗತಿ ಕಾಣ್ತಾರೆ' ಎಂದುಕೊಂಡ. ಆದರೆ ಅವರು ಇವರನ್ನು ಹಿಂಬಾಲಿಸಲಿಲ್ಲ.

ಬೆಳದಿಂಗಳು ಅದ್ಭುತವಾಗಿದೆ, ಬೀದಿಯ ಎರಡೂ ಬದಿಗೆ ಮನೆಗಳು ನಿದ್ರಿಸುತ್ತಿವೆ. ಬೀದಿಯಲ್ಲಿ ನೂಕರಾಜು, ಅವನನ್ನು ಹಿಂಬಾಲಿಸಿ ಮುತ್ಯಾಲಮ್ಮ ಹೋಗುತ್ತಿದ್ದಾರೆ.

ಒಂದು ಕಟ್ಟೆಯ ಮೇಲೆ ಜನರು ಮಂದೆಯಂತೆ ಮಲಗಿದ್ದಾರೆ. ಎದುರಿನ ಮಹಡಿಯಲ್ಲಿ ಲೈಟು ಇನ್ನೂ ಆರಿಲ್ಲ. ದಿನ್ನೆಯ ಮೇಲೆ ಭಿಕ್ಷುಕಿ ಮತ್ತು ಭಿಕ್ಷುಕ ಏನೋ ಮಾತನಾಡುತ್ತಿದ್ದವರು ಸುಮ್ಮನಾದರು. 'ಇವರಿಗೆ ಮನೆಯೆಂಬುದೇ ಇರೋದಿಲ್ಲ. ಅದು ಹೇಗೆ ಜೀವಿಸುತ್ತಾರೆ?' ಎಂದುಕೊಂಡ ನೂಕರಾಜು. 'ಹಾಗೇನೇ, ನಾಯಿಗಳಂತೆ' ನೂಕರಾಜು ಕಕ್ಕಾಬಿಕ್ಕಿಯಾದ. ಸಾವಿರಾರು ಜನರು ಜೀವಿಸುತ್ತಿದ್ದಾರೆ. ಮರದ ಕೆಳಗೇ ಸಂಸಾರ, ವಡ್ಡಿನ ಮೇಲೆ ಅಡಿಗೆ, ಊಟ, ಮಳೆಬಂದರೆ, ನೆರೆಬಂದರೆ ಅಲ್ಲಲ್ಲಿ ರಕ್ಷಣೆ ಪಡೆಯುತ್ತಾರೆ.

ದುಪ್ಪಟಿಯ ಮುಸುಗೂ, ನೆರೆಹೊರೆಯವರ ರೆಪ್ಪೆಯ ಭಾರವೂ ತಪ್ಪದ ಕತ್ತಲ ಸಂಸಾರಗಳು.

ಇವರನ್ನು ನೋಡಿ ಮನಸು ಕರಗುವ ಬದಲು ನೂಕರಾಜುಗೆ ಕೋಪ ಬರುತ್ತದೆ. ಯಾವುದೋ ಸಿನಿಮಾದಲ್ಲಿ, ಎಲ್ಲೋ ಯಾರೋ ಜನರು, ಯಾತನೆಗೆ, ಹಿಂಸೆಗೆ, ಅನ್ಯಾಯಕ್ಕೆ ಎದುರುಬಿದ್ದು ಹೋರಾಡುವುದನ್ನು ನೋಡಿದ್ದಾನೆ. ಈ ಜನ ಮಾತ್ರ ಎಂದಾದರೂ ಇಷ್ಟೇ, ಹಂದಿಗಳಿಗೆ ಹೊಲಸು ಕೆಟ್ಟದೆನಿಸುವುದೇ ಇಲ್ಲ – ಎಂದುಕೊಂಡ ಮನಸಲ್ಲಿ.

ರೊಯ್ ಎಂದು ಲಾರಿಯೊಂದು ಹೋಯಿತು. ಒಂದು ಭರ್ಜರಿ ಕಾರು ಮೆಲ್ಲಗೆ ಸಾಗುತ್ತಿದೆ. ಅದರಲ್ಲಿ ಬಿಳಿ ಸೀರೆಯಲ್ಲಿ, ಅತಿ ಬಿಳುಪಿನ ಲಲನೆಯೊಬ್ಬಳು, ಕೆಂಪು ರವಿಕೆ ಧರಿಸಿ, ಹಾಯಾಗಿ ಕೂತಿದ್ದಾಳೆ. ಆಕೆಯ ಕಪ್ಪು ಜಡೆಯಲ್ಲಿ ಅಚ್ಚ ಬಿಳಿಯ ಮಲ್ಲಿಗೆ ದಂಡೆ. ಖಚಿತವಾಗಿ ಲಾಜಿಂಗಿಗೋ, ಲಾಜಿಂಗ್‌ನಿಂದಲೋ ಆಗಿರಬೇಕು.

ದೂರದಲ್ಲಿ ಮೂರು ಸಿನಿಮಾ ಹಾಲಿನ ಆವರಣಗಳು ದೊಡ್ಡ ರಕ್ಕಸಿಯ ಬಾಯಿಯಂತೆ ತೆರೆದುಕೊಂಡಿವೆ. ನೂಕರಾಜು ಅಲ್ಲಿಗೆ ಬರುವಲ್ಲಿ ಚಂದ್ರನು ನಡುನೆತ್ತಿಯನೇರಿ ಬೆಳದಿಂಗಳು ಸುರಿಸುತ್ತಿದ್ದಾನೆ.

ನೂಕರಾಜುನ ಸ್ವಂತ ಊರಲ್ಲದಿದ್ದರೂ ಈ ಹಾಲುಗಳು ಹೊಸವೇನಲ್ಲ. ಈ ಮೂರು ಹಾಲುಗಳಲ್ಲಿ ಯಾವಾಗಲೂ ಜನರು ಕಿಕ್ಕಿರಿದು ತುಂಬಿರುತ್ತಾರೆ. ಅವರು ಧರಿಸಿದ ಹೊಲಸು ಬಟ್ಟೆಗಳು, ಸುರಿಯುತ್ತಿರುವ ಬೆವರು, ಕಮಟು ವಾಸನೆಯ ಪರಿವಿಲ್ಲ. ಅವರನ್ನು ಕಚ್ಚುತ್ತಿರುವ ತಿಗಣೆಗಳ ಬಾಧೆಯ ಅರಿವೇ ಅವರಿಗಿಲ್ಲ.

ಎದುರಿನ ತೆರೆಯ ಮೇಲೆ ದೊಡ್ಡ ಭವನಗಳು. ಅವು ಅವರು ನೋಡುವ ಗೊಂಬೆಗಳಂತೆ ಬರೀ ಮಾಯೆ. ಅದರಲ್ಲಿ ಅಂದಗಿತ್ತಿಯರು, ಅವರು ಮೇಕಪ್ಪು ಕಳಚಿದರೆ, ಅವರ ಹೆಂಡಂದಿರು, ಅಪ್ಪಂದಿರು, ಬಂಧುಗಳೂ, ಅವರು ತುಟಿಪಿಟಿಕಿಸುವ ಹಾಡುಗಳೂ ಎಲ್ಲವೂ ಭ್ರಮೆ.

ನಡೆಯುವ ಕತೆಗಳನ್ನು ನಡೆದಂತೆ ಭಾವಿಸಿ, ಇಲ್ಲಸಲ್ಲದ ಪ್ರೀತಿ, ಪ್ರೇಮಗಳು ಇದ್ದಂತೆ ನಟನೆ.

ಪರದೆಯ ಮೇಲಿನ ಕತೆಯೆಲ್ಲಾ ಮಾಯೆ. ಮಾಯೆಯನ್ನು ಕಡುಮಾಯೆಯಾಗಿ ತೋರಿಸುವ ಮಾಯಾಧೂರ್ತರು.

ಜನರಿಗೆ ನಿಜವಾದ ಅನುಭವಗಳು ನೋಡ ಸಿಗುವುದಿಲ್ಲ. ಅವುಗಳನ್ನು ನೋಡಬೇಕೆಂಬ ಬಯಕೆ ಕನಸು–ಮನಸಿನಲ್ಲಿ ಬಂದರೂ ಪ್ರಮಾದವೇ.

ಅದ್ದರಿಂದ ದೊಡ್ಡವರು ಮಕ್ಕಳನ್ನು ಜೊಳ್ಳು ಸುದ್ದಿಗಳ, ಅಂತೆ ಕಂತೆಗಳ ಮಬ್ಬಿನಲ್ಲಿಟ್ಟಂತೆ, ಪ್ರಭುಗಳು ಜನರನ್ನು ಸುಳ್ಳು ವಾಗ್ದಾನಗಳಿಂದ ಮೋಸ ಮಾಡುತ್ತಿರುವಂತೆ, ಕೆಲವರು ಜನರನ್ನು ಮಾಯಾಲೋಕದ ಅನುಭವ ನೀಡಿ ವಂಚಿಸುತ್ತಿದ್ದಾರೆ. ಜನರು ಮೋಸ ಹೋಗಲು ತಯಾರು. ಅದಕ್ಕೆ ಹಣ ನೀಡುತ್ತಾರೆ. ಅದನ್ನು ಬ್ಲಾಕ್‌ರೇಟಿನಲ್ಲಿ ಸಲ್ಲಿಸಲೂ ತಯಾರು. ಮೋಸ ಮಾಡುವವರದೇನು ತಪ್ಪು?

ಜನರಿಗೆ ಧೈರ್ಯವಿಲ್ಲ. ಇಲ್ಲವಾದರೆ ಸುಮ್ಮಸುಮ್ಮನೆ ಗಂಡ–ಹೆಂಡತಿ, ಸುಮ್ಮಸುಮ್ಮನೆ ಪುಸ್ತದ ಕೋಣೆಯಲ್ಲಿ, ಸುಮ್ಮನೇ ಕಳ್ಳನೋಟ ಬೀರುತ್ತಿರುವರೆಂದು ತಿಳಿದೂ, ಜೊಲ್ಲು ಸುರಿಸುತ್ತಾ ಸೀಟ ಹಾಕುತ್ತಾರೆಯೆ?

ನೂಕರಾಜು ಸಿಟ್ಟು ಈ ರೀತಿಯಲ್ಲಿ ಸಿನಿಮಾ ನೋಡುವವರ ಮೇಲೆ, ಸಿನಿಮಾ ತೆಗೆಯುವವರ ಮೇಲೆ, ಅವುಗಳನ್ನು ತಯಾರಿಸುವವರ ಮೇಲೆ, ತೋರಿಸುವವರ ಮೇಲೆ ಉದ್ರೇಕಗೊಳ್ಳುತಿರುವ ಹೊತ್ತಿಗೆ ಸರಿಯಾಗಿ ಅವನು ಸಿನಿಮಾ ಹತ್ತಿರ ಸೇರಿದ.

ದೇವಪ್ಪನೂ ಅದೇ ಸಮಯಕ್ಕೆ ಅಲ್ಲಿಗೆ ಬಂದು ಸೇರಿದನು.

***

"ಯೇ ಹುಡುಗಿ ಯಾವೂರು?" ಎಂದ ದೇವಪ್ಪ, ನೂಕರಾಜು ಮುಖ ನೋಡಿದರೆ ಹುಡುಗಿ ಕೂಡಿಕೊಂಡವಳಂತೆ ಕಂಡಳು.

ಹುಡುಗಿ ದೇವಪ್ಪನನ್ನು ಗುರುತಿಸಲಿಲ್ಲ.

'ಯಾರದು' ಎಂದು ಮಿಂಚುವ ಕಣ್ಣುಗಳಿಂದ ಕೇಳಿದಳು.

'ನಿಂದೇ! ನಿಂದ್ಯಾವೂರು?'

ನೂಕರಾಜು ಕಡೆ ನೋಡಹೋಗಿ ಬೇರೆಡೆ ನೋಡಿದನು ದೇವಪ್ಪ. 'ನಮ್ಮದು ಅನಕಾಪಲ್ಲಿ' ಎಂದು 'ನೀವ್ಯಾರು?' ಎಂದಳು. ಆಗ ನೂಕರಾಜು ಈ ಕಡೆ ತಿರುಗಿದನು. ಆದರೂ ದೇವಪ್ಪ ನೆನಪಾಗಲಿಲ್ಲ.

'ನೀವು ಆ ಲಾಜಿಂಗ್‌ಗೆ ಬಂದಿದ್ದಿರಲ್ಲ. ಅಲ್ಲೇ ನನಗೆ ಕೆಲಸ' ಎಂದ ನೂಕರಾಜು ಕಡೆ ತಿರುಗಿ.

'ಪಾಪ, ನಿಮಗೆ ರೂಮು ಸಿಗಲಿಲ್ಲವೇ?' ಎನ್ನುವ ಬದಲು 'ನಿನಗಾ ಹುಡುಗಿ ಏನಾಗಬೇಕು?' ಎಂದ

ನೂಕರಾಜುಗೆ ಆ ಪ್ರಶ್ನೆಯಲ್ಲಿ ಅಮಾಯಕತನವಾಗಲೀ, ಅಪ್ಯಾಯತೆಯಾಗಲೀ ಕಾಣದೆ ಅನುಮಾನದ ಅನ್ವೇಷಣೆಯೇ ಕಂಡಿತು. ಅದರ ಹಿಂದೆ ಒಕ್ಕಣ್ಣಿನ ಗುಮಾಸ್ತೆ, ಕಾಕದೃಷ್ಟಿಯಿಂದ ನೋಡಿ ಕೇಳಿದ ರೀತಿ ಕೋಟಿ ದನಿಗಳಿಂದ ಪ್ರತಿಧ್ವನಿಸಿದಂತಾಯಿತು.

'ಏಯ್ ಹುಡುಗಿ' ಮಾತು ಮುಗಿಯುವ ಮೊದಲೇ ದೇವಪ್ಪನ ದವಡೆಗೆ ಠಪಾರ್ ಎಂದು ಏಟು ಬಿತ್ತು. 'ಸೂಳೇಮಗನೇ, ನನ್ನವಳೊಂದಿಗೆ ಮಾತಾಡುವ ಕೆಲಸ ನಿನಗೇನಲೇ? ಎಂಬ ಘೋಷಣೆಯೊಂದಿಗೆ ಕ್ರೋಧವು ಮಿತಿಮೀರಿ.

ಟಪ್ ಟಪ್ ಎಂದು ದೇವಪ್ಪನನ್ನು ಎಡಬಲ ನೋಡದೇ, ಪೆಟ್ಟು ಎಲ್ಲಿಗೆ ಬೀಳುತ್ತದೆಂದೂ ಗಮನಿಸದೆ ಬೂಟುಗಾಲಿನಿಂದ ಅಡಿಮುಡಿಯೆನ್ನದೆ ತದುಕಿ, ಕೊಳ್ಳಪಟ್ಟಿ ಹಿಡಿದು ಮೇಲೆತ್ತಿ –

'ಸೂಳೆಮಗನೇ, ಯಾರೆಂದುಕೊಂಡೆ? ಯಾರೆಂದುಕೊಂಡೆಲೇ ನಿನ್ನ ಮನಸ್ಸಲ್ಲಿ?' ಎಂದು ಮತ್ತೆ ಸಿಕ್ಕ ಸಿಕ್ಕಲ್ಲಿ ಬಾರಿಸತೊಡಗಿದನು.

ಕ್ಷಣಕಾಲ ನಿಬ್ಬೆರಗಾದ ಅಂಗಡಿಕಾರರೂ ರಿಕ್ಷಾದವರೂ ದಿಕ್ಕಾಪಾಲು ಓಡಿದರು.

ಮುತ್ತಾಲಮ್ಮ ಸಣ್ಣ ದನಿಯಲ್ಲಿ 'ಅಮ್ಮಾ, ಅಯ್ಯೋ! ಕೊಂದುಹಾಕ್ತಾನೆ. ನನ್ನ ಭಾವ ಕೊಲ್ತಾನೆ, ಮುದುಕ ಸಾಯ್ತಾನೆ' ಎಂದು ನಡುಗ್ತಾ ಅಳತೊಡಗಿದಳು.

ಈ ನಡುವೆ ಸುತ್ತ ಸೇರಿದ ಜನರು ಮುದುಕ ದೇವಪ್ಪನನ್ನು, ಯುವಕ ನೂಕರಾಜು ಕೈಯಿಂದ ತಪ್ಪಿಸಿ ರಕ್ಷಿಸಿ ದೂರ ಕೊಂಡೊಯ್ದರು.

ನೂಕರಾಜು ನುಣ್ಣಗೆ ಬಾಚಿದ ತಲೆ ಕೆದರಿತ್ತು, ಅಂಗಿ ಹರಿದಿತ್ತು. ರಿಸ್ಟ್ ವಾಚ್ ಚೈನು ಉಚ್ಚಿತ್ತು. ಅವನು ಅವುಗಳನ್ನು ಸರಿಮಾಡಿಕೊಳ್ಳುತ್ತಾ ಅರಸುತ್ತಿದ್ದಾನೆ 'ಲೇ ಸೂಳೇ ಮಗನೇ, ನಿನ್ನ ನೆತ್ತರು ಕುಡಿಯುತ್ತೇನೆ, ನಿನ್ನನ್ನು ಕೊಂದು ಹಾಕ್ತೀನಿ. ಹೆಣ್ಣೊಂದು ರಸ್ತೆ ಮೇಲೆ ಕಂಡರೆ ಸಾಕು. ಅವಳು ಸೂಳೇನಾ! ದೊಡ್ಡವರು ಸೂಳೇರ ತಂದರೆ ಸಂಸಾರಿಗಳಾ? ಸಂಸಾರಿ ಗಂಡನೊಂದಿಗೆ ಬಂದರೂ ಸೂಳೇನಾ? ನಿಂದು ಸೂಳೇರ ಲಾಜ್! ನಿನ್ನನ್ನೂ ನಿನ್ನ ಕುರುಡುಗಣ್ಣಿನ ಗುಮಾಸ್ತನನ್ನು ನಿನ್ನ ಸೂಳೇರ ಲಾಜ್ ಮಾಲಿಕನನ್ನು ಒಂದೇ ಹೊಡೆತಕ್ಕೆ ಸಫಾ ಮಾಡ್ತೀನಿ. ಒಂದು ಗುದ್ದು ಸಾಕು.

ನೂಕರಾಜು ಸುತ್ತಲೂ ಸೇರಿದ ಜನರು 'ನೂಕರಾಜುದು ತಪ್ಪೇನಿಲ್ಲ' ಎಂದುಕೊಂಡರು. ಉದುರಿದೆಲೆಯಂತೆ ನಡುಗುತ್ತಾ ಬಂದು, ಅಷ್ಟು ದೂರದಿಂದಲೇ 'ಬಾವ, ಬಾ, ಹೋಗೋಣ, ನನ್ನ ಮಾತು ಕೇಳು, ಆ ಮದುಕನ ಗೊಡವೆ ಏಕೆ ? ಬಾ ಹೋಗೋಣ' ಎಂದು ಬೇಡಿಕೊಳ್ಳುತ್ತಿರುವುದನ್ನು ಕಂಡ ಜನರ ಅನುಮಾನಗಳು ದೂರಾದವು.

ದೇವಪ್ಪನ ಪರಿಚಿತರು ಅಲ್ಲಿ ಯಾರೂ ಇರಲಿಲ್ಲ ಮತ್ತು ಒಂದೂ ಮಾತಿಗೆ ಅವನು ಉತ್ತರ ನೀಡದ ಕಾರಣ ಎಲ್ಲರೂ ದೇವಪ್ಪನದೇ ತಪ್ಪೆಂದು ತಿಳಿದರು.

ಆಗ–

'ಹೋಗಲಿ ಬಿಡು. ಈಗಾಗಲೇ ಮುದುಕ ಅರ್ಧ ಹೆಣವಾಗಿದ್ದಾನೆ. ಇನ್ನು ನಿನ್ನ ದಾರಿ ಹಿಡಿ' ಎಂದು ಮಧ್ಯವಯಸ್ಕರೊಬ್ಬರು ಹೇಳಿದರು.

'ಅವನಾ ಮುದುಕ! ಅವನಾ ಮುದುಕ! ತಲೆಹಿಡುಕ ಮುಂಡೇಮಗ. ಅಡ್ಡಸೂಳೇಮಗ' ಎಂದು ಕೋಪೋದ್ರಿಕ್ತನಾಗುತ್ತಿದ್ದಾನೆ. ಈಸಲ ಮುತ್ಯಾಲಮ್ಮ ಧೈರ್ಯದಿಂದ ಅವನ ಕೈಹಿಡಿದಳು.

ಇಷ್ಟರಲ್ಲಿ ಇಂಟರ್ವೆಲ್ – ನಾಲ್ಕು ಕಡೆಯಿಂದ ಜನರು ಸೇರಿದ್ದರಿಂದ ಅವರಿಬ್ಬರೂ ಜನಸಾಗರದ ನಡುವೆ ಆದರು.

***

ಮೂರು ಸಿನಿಮಾಗಳು ಐದು–ಹತ್ತು ನಿಮಿಷದ ಅಂತರದಲ್ಲಿ ಇಂಟರ್‌ವೆಲ್ ಬಿಡುತ್ತವೆ. ಒಮ್ಮೊಮ್ಮೆ ಈ ಅಂತರವೂ ಇಲ್ಲವಾಗಿ ಮೂರು ಸಿನಿಮಾದ ಜನರು ಒಮ್ಮೆಗೇ ಅಂಗಡಿಗಳಿಗೆ ಮುಗಿಬೀಳುತ್ತಾರೆ. ಆಗ ಸೋಡಾಗಳ ಕೀರಲು ದನಿಯಿಂದಲೂ ಟೀ ಅಂಗಡಿಗಳ ಒದರಾಟದಿಂದಲೂ, ದಪ್ಪೋ ಬಂಡಿಯ ತಿನಿಸಿನ ಅಂಗಡಿಗಳ ಕೂಗಿನಿಂದಲೂ ಜನ ತಬ್ಬಿಬ್ಬಾಗಿ, ದಬ್ಬಿಕೊಂಡು ನಾಚಿಕೆ – ಭಿಡೆಯಾ ತೊರೆದು ರೋಡೆಲ್ಲಾ ಗಲೀಜು ಮಾಡುತ್ತಾ, ತಿನ್ನುತ್ತಾ, ಕುಡಿಯುತ್ತಾ, ಗೊಂಬೆಗಳ ಕಡೆ, ಮನುಷ್ಯರ ಕಡೆ, ಹಸಿದವರಂತೆ ನೋಡುತ್ತಾ, ತಮ್ಮನ್ನು ತಾವು ನೋಡಿಕೊಂಡು 'ಏನು ಜನರಪ್ಪಾ !' ಎಂದು ಉದ್ಗಾರವೆತ್ತುತ್ತಾರೆ.

ಅಂತಹ ಸಮಯದಲ್ಲಿ, ಅಂತಹ ಜನರ ಆಕಡೆಗೆ, ಮುದುಕ ದೇವಪ್ಪ ಧಿಂ ಎನ್ನುವ ತಲೆಹೊತ್ತು ಕ್ಷತಕ್ಷತ ಶರೀರದಿಂದ, ಅಲ್ಲಲ್ಲಿ ಉರಿಉರಿ ನೋವಿನಿಂದ ನರಳುತ್ತಾ, ಒಂದು ಕಡೆ ಮಲಗಿದ್ದ.

ಜನಸಂದಣಿ ಕರಗಿದ ಮೇಲೆ ಯಾರೋ ಕೊಟ್ಟ ಸೋಡಾ ಕುಡಿದು, ಮತ್ತಾರೋ ಕೊಟ್ಟ ಬಟ್ಟೆ ಉಟ್ಟು, ಒತ್ತಿ ಬರುವ ದುಃಖವನ್ನು ಹತ್ತಿಟ್ಟುಕೊಳ್ಳುತ್ತಾ, ಹೊಡೆತದ ಮೇಲೆ ಹೊಡೆತದಿಂದ, ದುಃಖದಿಂದ ಕೋಲು ಎಳೆದುಕೊಂಡು ಲಾಜಿಂಗ್ ಕಡೆಗೆ ನಡೆದಿದ್ದಾನೆ.

ಇನ್ನೊಂದು ಕಡೆ, ಆ ಜನನಿಂದ ದೂರದಲ್ಲಿ ಎದುರಿಗೆ ಬಂದ ಖಾಲಿ ರಿಕ್ಷಾ ನಿಲ್ಲಿಸಿ, ಆ ಹುಡುಗಿ ಹುಡುಗ ಅದರಲ್ಲೇರಿ ಕುಳಿತರು. ಮುತ್ಯಾಲಮ್ಮಗೆ ಒತ್ತರಿಸಿ ಬರುತ್ತಿರುವ ಅಳುವನ್ನು ತಡೆಯಲಾಗುತ್ತಿಲ್ಲ. ನೂಕರಾಜು ಅವಳನ್ನು ಸಂತೈಸುತ್ತಿಲ್ಲ. ಒಂದು ಕೈಯಿಂದ ಅವಳನ್ನು ಗಟ್ಟಿಯಾಗಿ ಹಿಡಕೊಂಡು, ಮತ್ತೊಂದು ಕೈಯಿಂದ ಕರವಸ್ತ್ರ ತೆಗೆದು ಸೀಳಿದ ತನ್ನ ತುಟಿಗಳನ್ನು ಒತ್ತಿಕೊಳ್ಳುತ್ತಿದ್ದಾನೆ ರಿಕ್ಷಾ ನಿಧಾನವಾಗಿ ಬೆಳದಿಂಗಳಲ್ಲಿ ದೂರ ತೆರಳಿತು.

***

# ಗಿರೀಶ್ ಕಾರ್ನಾಡರ "ಅಂಜು ಮಲ್ಲಿಗೆ"

ಬಿ.ಆರ್. ನಾಗೇಶ್

ಇಪ್ಪತ್ತನೆಯ ಶತಮಾನದ ಅರುವತ್ತು ಮತ್ತು ಎಪ್ಪತ್ತರ ದಶಕಗಳಲ್ಲಿ ಕರ್ನಾಟಕದ ಹವ್ಯಾಸಿ ರಂಗಕರ್ಮಿಗಳೆಲ್ಲ ರಂಗೋಲ್ಲಾಸಗಳಿಂದ ವಿಜೃಂಭಿಸಿದರು. ಈ ಬಗೆಯ ವಿಜೃಂಭಣೆಗೆ ನಾಲ್ಕು ಕಾರಣಗಳು:

೧. ಕನ್ನಡ ಸಾಹಿತ್ಯರಂಗದಲ್ಲಿ ಒಮ್ಮಿಂದೊಮ್ಮೆ ಪ್ರತಿಭಾಶಾಲಿಯಾಗಿರುವ ಹಲವಾರು ತರುಣ ಬರಹಗಾರರು, ರಂಗಕ್ರಿಯೆಗೆ ಒತ್ತು ಕೊಟ್ಟು ನಾಟಕಗಳನ್ನು ಬರೆದದ್ದು.

೨. ಈ ಬಗೆಯ ನಾಟಕಗಳನ್ನು ವಿಶೇಷ ತರಬೇತಿ ಪಡೆದ ನಿರ್ದೇಶಕರು ನಿರ್ದೇಶಿಸಿದ್ದು.

೩. ಅಂಥವರ ನಿರ್ದೇಶನವನ್ನು ಒಗ್ಗಿಸಿಕೊಂಡು ಒಂದು ನಟವರ್ಗ ಬೆಳೆದದ್ದು ಮತ್ತು

೪. ರಂಗಭೂಮಿಯಲ್ಲಿ ತಾಂತ್ರಿಕ ಪರಿಕರಗಳ ಕಲ್ಪನಾಚಾತುರ್ಯದಿಂದ ಕೂಡಿದ ಸೃಜನಾತ್ಮಕ ಉಪಯೋಗ ಪ್ರಾರಂಭವಾದದ್ದು. ಗಿರೀಶ್ ಕಾರ್ನಾಡ್, ಲಂಕೇಶ್, ಚಂದ್ರಶೇಖರ ಪಾಟೀಲ, ಪ್ರಸನ್ನ – ಮೊದಲಾದವರು ಚೈತನ್ಯಪೂರ್ಣ, ಹೊಸ ವಿಚಾರಗಳನ್ನು ಸೃಷ್ಟಿಸಬಲ್ಲ, ಪ್ರೇಕ್ಷಕರನ್ನು ಆಳವಾದ ಯೋಚನೆಗಳಿಗೆ ಹಚ್ಚಬಲ್ಲ ನಾಟಕಗಳನ್ನು ಬರೆದರು.

ಇವರೆಲ್ಲರೂ ಗುರುತಿಸಿದ ಒಂದು ಮುಖ್ಯ ಅಂಶವೆಂದರೆ – ನಾಟಕವೆಂದರೆ ಬರಿಯ ಸಂಭಾಷಣೆಗಳಲ್ಲ – ಒಂದು ನಾಟಕದಲ್ಲಿ ಸಂಭಾಷಣೆ ಎಷ್ಟು ಮುಖ್ಯವೋ, ಅದನ್ನು ಹೊಂದಿಕೊಂಡು ಬೆಳೆಯುವ ರಂಗಕ್ರಿಯೆಗಳು ಅಷ್ಟೇ ಮುಖ್ಯವಾದವುಗಳು. ಹಾಗಾಗಿ ಈ ನಾಟಕಕಾರರ ನಾಟಕಗಳು ಹವ್ಯಾಸೀ ರಂಗದಲ್ಲಿ ಸೋಲಲಿಲ್ಲ – ಬೇರೆ ಬೇರೆ ರೀತಿಯ ಪ್ರಯೋಗಗಳಿಗೆ ಪಕ್ಕಾದರೂ, ನಲವತ್ತು ವರ್ಷಗಳ ಬಳಿಕವೂ ಆ ಬಗೆಯ ನಾಟಕಗಳನ್ನು ಆಡುತ್ತಿದ್ದಾರೆ ಎಂದರೆ, ಆ ನಾಟಕಗಳ ಅಂತಃಸತ್ವವನ್ನು ಊಹಿಸಬಹುದು. ಆದರೆ ಈ ನಾಟಕಕಾರರು ಬರೆದಿರುವ ಕೆಲವು ನಾಟಕಗಳು ಪ್ರೌಢವಾಗಿದ್ದರೂ, ಪ್ರದರ್ಶನಭಾಗ್ಯವನ್ನು ಕಂಡದ್ದು ಕಡಿಮೆಯೆ ಎಂದು ಹೇಳಬಹುದು.

ಈ ರೀತಿಯಾಗಿ ಪ್ರದರ್ಶನ ಭಾಗ್ಯವನ್ನು ಕಳೆದುಕೊಂಡಿರುವ ನಾಟಕಗಳಲ್ಲಿ ಗಿರೀಶ್ ಕಾರ್ನಾಡರ "ಅಂಜು ಮಲ್ಲಿಗೆ" ಒಂದು. ಈ ನಾಟಕ ಹವ್ಯಾಸೀ ತಂಡಗಳಿಂದಲೂ ಅನಾದರಕ್ಕೆ ಗುರಿಯಾಗಲು ಏನು ಕಾರಣ ಇರಬಹುದು ಎಂಬುದನ್ನು ಚರ್ಚಿಸಿ, ವಿವರಿಸಲು ಈ ಬರಹದಲ್ಲಿ ಸ್ಥಾನವಿಲ್ಲ. ಆದರೆ ಒಂದು ಮಾತಂತೂ ಸತ್ಯ - ಅದು ಈ ತನಕ ಯಾವ ನಾಟಕಕಾರನೂ ಕೈಗೆತ್ತಿಕೊಳ್ಳದ ಒಂದು ವಸ್ತುವನ್ನು ಕಾರ್ನಾಡರು ಈ ನಾಟಕದಲ್ಲಿ ಎತ್ತಿಕೊಂಡದ್ದು. ಆ ವಸ್ತು ಅನೈಸರ್ಗಿಕವೂ ಅಲ್ಲ, ಅಸ್ವಾಭಾವಿಕವೂ ಅಲ್ಲ ಆದರೆ ಅಸಾಮಾಜಿಕವಾಗಿತ್ತು. ಈ ಬಗೆಯ ವಸ್ತುವುಳ್ಳ ನಾಟಕವನ್ನು ಪ್ರದರ್ಶಿಸಲು ಹವ್ಯಾಸೀ ತಂಡಗಳಿಗೆ ಅಗೋಚರವಾದ ಸಾಮಾಜಿಕ ಕಟ್ಟುಪಾಡುಗಳಿದ್ದವು. ಇಷ್ಟೆಲ್ಲಾ ಅರ್ಥ-ಅನರ್ಥಗಳನ್ನು ಒಳಗೊಂಡ ಈ ನಾಟಕದ ವಸ್ತುವೇ ಗಂಡು -ಹೆಣ್ಣಿನೊಳಗೆ ಅಲ್ಲೊಮ್ಮೆ ಇಲ್ಲೊಮ್ಮೆ, ಆಗೊಮ್ಮೆ ಈಗೊಮ್ಮೆ ಕಂಡುಬರುವ ಅಸಾಮಾಜಿಕ ಸಂಬಂಧಗಳೇ. ಗಂಡು-ಹೆಣ್ಣಿನೊಳಗಿರುವ ಸಂಬಂಧ ಯಾವ ಕಾಲದಲ್ಲಿಯೇ ಆಗಿರಲಿ ಯಾವ ದೇಶದಲ್ಲಿಯೇ ಆಗಿರಲಿ, ಕಾಮ-ಪ್ರೇಮಗಳ ನಡುವಿನ ಹಲವು ಛಾಯೆಗಳನ್ನೊಳಗೊಂಡ ಅನುಭವಗಳಲ್ಲಿರುತ್ತದೆ. ಹೆಣ್ಣನ್ನು ಕಂಡೊಡನೆ ಗಂಡು ಏನನ್ನು ಯೋಚಿಸುತ್ತಾನೆಯೋ, ಹಾಗೆಯೇ ಗಂಡನ್ನು ಕಂಡೊಡನೆ ಹೆಣ್ಣು ಯೋಚಿಸುತ್ತಾಳೆ. ಇದರಲ್ಲಿ ನಾಚುಗೆ ಪಡಬೇಕಾದ, ಅಥವಾ ಮುಜುಗರಕ್ಕೆ ಒಳಗಾಗಬೇಕಾದ ಪ್ರಮೇಯ ಇರುವುದಿಲ್ಲ. ಮನುಷ್ಯನಿಗೆ ಉಸಿರಾಟ ಎಷ್ಟು ಸ್ವಾಭಾವಿಕವೋ ಎಷ್ಟು ಅನೈಚ್ಛಿಕವೋ, ಪ್ರೇಮ - ಕಾಮಗಳ ಅನುಭವವೂ ಅಷ್ಟೇ ಸ್ವಾಭಾವಿಕ, ಅನೈಚ್ಛಿಕ. ಒಬ್ಬಾಕೆ ಸ್ತ್ರೀಯನ್ನು ಕಂಡೊಡನೆ ತಾಯಿಯ ನೆನಪಾಗಬಲ್ಲುದಾದರೂ, ಆ ನೆನಪಿನ ಹಿಂಗಡೆ ಇರುವುದು ಪ್ರೇಮ- ಕಾಮಗಳ ಒಂದು ವಿಚಿತ್ರ ಮಿಶ್ರಣ. ಇದೇ ವಸ್ತುವನ್ನು ಆಧರಿಸಿಕೊಂಡು ಕಾರ್ನಾಡರು ಕೆಲವು ಪ್ರಬುದ್ಧ ನಾಟಕಗಳನ್ನು ಬರೆದಿದ್ದಾರೆ. ಪ್ರೇಮ-ಕಾಮಗಳ ವಿಶಿಷ್ಟತೆಯನ್ನು ಪಾತ್ರಗಳ ಮೂಲಕ ನಡೆಸಿದ್ದಾರೆ. ಇದಕ್ಕೊಂದು ಅದ್ಭುತ ಉದಾಹರಣೆ ಅವರ 'ಹಿಟ್ಟಿನ ಹುಂಜ' ನಾಟಕ.

ಪ್ರೇಮ - ಕಾಮಗಳ ಅನುಭವಗಳ ಮಧ್ಯಾಂತರದ ಅನುಭವಗಳ ಸೂಕ್ಷ್ಮ ವಿವೇಚನೆಯೇ "ಅಂಜುಮಲ್ಲಿಗೆ" ಎನ್ನಬಹುದು. ನಾಟಕದಲ್ಲಿ ಬರುವ ಪಾತ್ರಗಳ ನಡುವಿನ ಪ್ರೇಮ - ಕಾಮಗಳನ್ನು ಅಭ್ಯಸಿಸಿದರೆ ಇಡಿಯ ನಾಟಕ ಒಂದು ಸುಂದರವಾದ ಕಾಮಶಾಸ್ತ್ರಾನುಭವವನ್ನು ಕೊಡಬಲ್ಲದು - ಎಂದು ಅನಿಸುತ್ತದೆ.

ಈ ನಾಟಕದಲ್ಲಿ ವಿಮರ್ಶೆಗೆ ಒಳಗಾಗುವ ಹೆಣ್ಣು - ಗಂಡಿನ ಸಂಬಂಧದ ಉದಾಹರಣೆಯಾಗಿ ಕೆಲವು ಸಾಲುಗಳನ್ನು ಬರೆಯಬೇಕಾಗಿದೆ:

ಮೊದಲಾಗಿ ಹರೀನ್ ಮತ್ತು ಪೆಟ್ರೀಷಿಯಾ. ಹರೀನ್ ಭಾರತೀಯ. ಆದರೆ ಇಂಗ್ಲಿಷ್ ಸಾಮಾಜಿಕ ಜೀವನಶೈಲಿಗೆ ತೀರಾ ಒಗ್ಗಿಕೊಳ್ಳುವ ಪ್ರಯತ್ನ ಕೊಡುತ್ತದೆ. ಪೆಟ್ರೀಷಿಯಾಳೊಡನೆ ಪ್ರೇಮ ಪ್ರಕರಣ ಸ್ಥಾಪಿಸಿ, ಅವಳು ಗರ್ಭಿಣಿಯಾದೊಡನೆ ಅವಳನ್ನು ಮದುವೆಯಾಗುವ ವಿದೂಷಕನಂತಿರುವ ಒಬ್ಬ ತರುಣ. ತನ್ನ ಮೂಲದ ಭಾರತೀಯ ಹೆಸರು ಏನಾಗಿದ್ದರೂ, ಅದನ್ನು ಬದಲಾಯಿಸಿ ಇಂಗ್ಲೀಷಿನವರಂತೆ ಇರಬೇಕೆಂದು ಇರಾದೆಯಿಂದ ಹರೀನ್ ಎಂದುಕೊಳ್ಳುವ ಒಬ್ಬ ವಿಚಿತ್ರ ವ್ಯಕ್ತಿ. ಇವನಿಗೆ ಗಂಡು ಹೆಣ್ಣಿನೊಳಗಿನ

ಸಂಬಂಧದ ಸೂಕ್ಷ್ಮತೆಯ ಅರಿವು ಕೊಂಚವೂ ಇಲ್ಲ. ಪೆಟ್ರಿಷಿಯಾಳನ್ನು ಗರ್ಭಿಣಿ ಮಾಡಿದ್ದೇ ಇವನ ದೊಡ್ಡ ಸಾಧನೆ. ಪ್ರೇಮವಂತೂ ಇವನಿಂದ ನೂರು ಗಾವುದ ದೂರದ ಅನುಭವ. ತನ್ನ ವಿದ್ಯಾಭ್ಯಾಸ ಮುಗಿದೊಡನೆ, ಇಂಗ್ಲಂಡಿನಲ್ಲಿಯೇ ಒಳ್ಳೆಯ ಉದ್ಯೋಗ ದೊರಕಿಸಿಕೊಂಡು, ತನಗೆ ಹುಟ್ಟಲಿರುವ ಮಗನಿಗೆ ಅತ್ಯುತ್ತಮ ಇಂಗ್ಲಿಷ್ ವಿದ್ಯಾಭ್ಯಾಸ ಕೊಡಿಸಬೇಕೆಂದು ಮಾತ್ರ – ತನ್ನ ಜೀವನದ ಪರಮೋಚ್ಚ ಧ್ಯೇಯ ಎಂದು ತಿಳಿದವ. ಅವನಲ್ಲಿ ಪ್ರೇಮವೂ ಇಲ್ಲ, ಕಾಮವೂ ಇಲ್ಲ. ಕಾಮ ಇದ್ದರೆ ಅದು ತಾತ್ಪೂರ್ತಿಕವಾಗಿ ಮಾತ್ರ. ಹಾಗಾಗಿ ಗಂಡು ಹೆಣ್ಣಿನೊಡನೆ ಉಂಟಾಗಬಲ್ಲ ಯಾವ ಮಧುರ ಅನುಭವವಕ್ಕೂ ಅವನನ್ನಾಗಲಿ ಅವನ ಹೆಂಡತಿ ಪೆಟ್ರೀಷಿಯಳನ್ನಾಗಲಿ ಮಾದರಿಯಾಗಿ ತೆಗೆದುಕೊಳ್ಳುವುದಿಲ್ಲ. ಈ ಕಾರಣಕ್ಕಾಗಿಯೇ ನಾಟಕದ ಒಂದು ಭಾಗದಲ್ಲಿ ಆತನನ್ನು 'ವಿದೂಷಕ' ಎಂದು ಗುರುತಿಸುತ್ತಾರೆ.

ಈ ನಾಟಕದಲ್ಲಿ ಬರುವ ಮೂರು ಜೊತೆ ಗಂಡು ಹೆಣ್ಣುಗಳ ಒಳಗಿನ ಸಂಬಂಧ ಸಮೀಕ್ಷೆ ಮುಖ್ಯವಾದುದಾಗಿರುತ್ತದೆ. ಕಾರಣ ಈ ಮೂರು ಜೊತೆಯ ಪ್ರೇಮ – ಕಾಮಗಳ ನಡುವಿನ ಎಳೆದಾಟ – ಸಂಘರ್ಷಗಳು ಇಡಿಯ ನಾಟಕದ ಹಂದರವಾಗಿ ಬೆಳೆದಿರುವದು. ಈ ಮೂರು ಜೊತೆಗಳೆಂದರೆ : ಯಾಮಿನಿ ಮತ್ತು ಸತೀಶ, ಯಾಮಿನಿ ಮತ್ತು ಡೇವಿಡ್ ಮತ್ತು ಯಾಮಿನಿ ಮತ್ತು ಗೌತಮ. ಗೌತಮನು ವಿದ್ಯಾಭ್ಯಾಸಕ್ಕೆಂದು ಇಂಗ್ಲೆಂಡಿಗೆ ಬಂದವನಾಗಿದ್ದರೂ, ವಿದ್ಯಾಭ್ಯಾಸ ಮುಗಿದೊಡನೆಯೆ ಭಾರತಕ್ಕೆ ಹಿಂತಿರುಗಬೇಕೆಂಬ ದೃಢ ನಿಶ್ಚಯ ಇರುವಾತ, ಇಂಗ್ಲಿಷ್ ಸಂಸ್ಕೃತಿಯಿಂದ ಸ್ವಲ್ಪವೂ ವಿಚಲಿತಗೊಳ್ಳದ ವ್ಯಕ್ತಿ. ಆತ ಇಡಿಯ ನಾಟಕದಲ್ಲಿ ಮಾಡಿದ ಒಂದೇ ಒಂದು ದೊಡ್ಡ ತಪ್ಪೆಂದರೆ ಯಾಮಿನಿಯನ್ನು ಮನಃಪೂರ್ವಕವಾಗಿ ಪ್ರೀತಿಸಿದ್ದು. ಅವಳನ್ನು ಮದುವೆಯಾಗಲೂ ಸಿದ್ಧನೆಂದು ತೋಡಿಕೊಂಡದ್ದು. ಯಾಮಿನಿಯನ್ನು ಒಲಿಸಿಕೊಳ್ಳಲು, ಭಾರತೀಯವಾದ ಹಲವಾರು ಕ್ರಮಗಳನ್ನು ಅವನು ಅನುಸರಿಸಿದರೂ, ಯಾಮಿನಿ ಆತನನ್ನು, ಆತನ ನಿರ್ವ್ಯಾಜ ಪ್ರೀತಿಯನ್ನು ಅರ್ಥಮಾಡಿಕೊಳ್ಳಲು ಅಸಾಧ್ಯಳಾದಳು. ಅವಳಿಗೆ ಬೇಕಾಗಿತ್ತು – ಆ ಸಮಯದಲ್ಲಿ, ತನ್ನನ್ನು ತೀವ್ರವಾಗಿ ಪ್ರೀತಿಸಬಲ್ಲವನೊಬ್ಬನ ಸ್ನೇಹ. ಆ ತೀವ್ರತೆಯ ಹಿಂದೆ ಇದ್ದುದು ಬರಿಯ ದೈಹಿಕ ಉದ್ರಿಕ್ತ ಕಾಮವೇ ವಿನಾ ಪ್ರೇಮ ನಿರೀಕ್ಷಣೆಯಲ್ಲ. ಹಾಗಾಗಿ ಗೌತಮ, ಅವಳ ಪಾಲಿಗೆ ತೀರಾ ನೀರಸ ವ್ಯಕ್ತಿಯಾಗಿ ಗೋಚರಿಸಿದ. ಅವನು ಎದುರಾದಾಗೆಲ್ಲಾ ಆತನ ಕಣ್ಣು ತಪ್ಪಿಸಿ ಇರಲು ಆಕೆ ಪ್ರಯತ್ನಿಸುತಿದ್ದುದಾದರೂ ಅದಕ್ಕೆ.

ಇಂಗ್ಲೆಂಡಿನಲ್ಲಿ ಯಾಮಿನಿಯನ್ನು ಪ್ರೇಮಿಸಿದವ ಗೌತಮ ಮಾತ್ರ. ಪ್ರೇಮದಿಂದ ಕಾಮ ಎಂಬ ಅವನ ಸಿದ್ಧಾಂತದ ನೆಲಗಟ್ಟನ್ನು ಯಾಮಿನಿಗೆ ಅರ್ಥ ಮಾಡಿಕೊಳ್ಳಲು ಸಾಧ್ಯವಾಗಲಿಲ್ಲ. ಕಾರಣ ಆಕೆ ಕಾಮದಿಂದ ಪ್ರೇಮ ಎಂಬ ಸಿದ್ಧಾಂತಕ್ಕೆ ಕಟ್ಟು ಬಿದ್ದವಳು. (ಡೇವಿಡ್‌ನ ಪ್ರಕರಣದಿಂದ ಇದು ಸೃಷ್ಟಿಯಾಗುತ್ತದೆ.) ಪರಿಸ್ಥಿತಿ ಹೀಗಿರುವಾಗ ಗೌತಮ ಮತ್ತು ಯಾಮಿನಿಯೊಳಗೆ ಯಾವ ರೀತಿಯ ಸಂಬಂಧ ಬೆಳೆಯಲು ಸಾಧ್ಯವಾದೀತು? ನಾಟಕದ ಕೊನೆಯ ದೃಶ್ಯದಲ್ಲಿ ಗೌತಮ ಇಂಗ್ಲೆಂಡಿನಲ್ಲಿಯ ತನ್ನ ಬದುಕಿನ ಬೌದ್ಧಿಕ –

ಮಾನಸಿಕ ಸೋಲನ್ನು ಒಪ್ಪಿಕೊಂಡು, ಭಾರತಕ್ಕೆ ಹಿಂತಿರುಗಲು ಸಿದ್ಧನಾಗುತ್ತಾನೆ. ಬಹುಶಃ ಆತ ಆ ರೀತಿಯಾಗಿ ನಿರಾಶೆಯಲ್ಲಿ ಅದ್ದಿ ಹೋಗಬೇಕಾದರೆ, ತಾನು ಪ್ರೀತಿಸಿದಾಕೆ ತನಗೆ ದಕ್ಕದೆ ಹೋದಳಲ್ಲಾ ಎಂಬ ಬೇಸರವೂ ಕೂಡಿರಬೇಕು. ಯಾಮಿನಿಯಿಂದಾಗಿ ಪರೋಕ್ಷ ದುರಂತವನ್ನು ತನ್ನ ಬಳಿಗೆ ತಾನೇ ತಂದೊಡ್ಡಿದ್ದ ಗೌತಮ ಒಂದು ರೀತಿಯಿಂದ ಆದರ್ಶ ಪ್ರೇಮಿ. ಆದರೆ ಯಾವ ಆದರ್ಶಗಳೂ ಇಲ್ಲದೆ, ಸ್ವೇಚ್ಛೆಯಾಗಿ ಬದುಕಿದ ಯಾಮಿನಿಗೆ ಆವನ ನಿರ್ಮಲ ಪ್ರೀತಿಯ ಅರಿವಾಗುವುದಾದರೂ ಹೇಗೆ? ಹೀಗೆ ಅವರಿಬ್ಬರೊಳಗಿನ ಸಂಬಂಧ ಒಂದು ರೀತಿಯಲ್ಲಿ ಪೂರ್ವನಿಶ್ಚಿತದಂತೆ ಕಡಿದು ಬಿತ್ತು ಎಂದು ಸೂಚಿಸಿದರೂ ತಪ್ಪಾಗಲಾರದು. ಪ್ರೇಮದಿಂದ ಕಾಮ ಮತ್ತು ಕಾಮದಿಂದ ಪ್ರೇಮ ಎಂಬ ಎರಡು ಸಿದ್ಧಾಂತಗಳು ಎಂದಿಗೂ ಒಟ್ಟಾಗಲಾರವು. ಅಷ್ಟೇ ಏಕೆ, ಸಮಾನಾಂತರವಾಗಿಯೂ ಹೋಗಲಾರವು ಎಂಬ ಒಳನೋಟವನ್ನು ಇವರಿಬ್ಬರ ಸಂಬಂಧದಿಂದ ತಿಳಿಯಬಹುದೇನೋ?

ಮೇಲ್ನೋಟಕ್ಕೆ ಡೇವಿಡ್ ಮತ್ತು ಯಾಮಿನಿಯೊಳಗಿರುವ ಗಂಡು ಹೆಣ್ಣಿನ ಸಂಬಂಧ ಒಂದೇ ಬಗೆಯದು–ಪ್ರೇಮವಿಲ್ಲದ ಕಾಮ. ಒಬ್ಬರನ್ನೊಬ್ಬರು ನೋಡಿದ ಕೆಲವೇ ಕ್ಷಣಗಳಲ್ಲಿ ಜನ್ಮ ಜನ್ಮಗಳಿಂದ ತಾವು ಪರಿಚಿತರು ಎಂಬಂತೆ ವರ್ತಿಸಿದ ಅವರಿಬ್ಬರೊಳಗೆ ಉರಿಯುತ್ತಿದ್ದ ಕಾಮವನ್ನು ಬಿಟ್ಟರೆ ಮತ್ತೇನೂ ಇರಲಿಲ್ಲ. ಆದರೆ ಆ ಕಾಮದ ಆಳವಾದ ಅಭ್ಯಾಸ ನಡೆಸಿದಾಗ, ಅದರ ಒಳ ಸುಳಿಗಳಲ್ಲಿ, ಸಂಘರ್ಷಗಳಲ್ಲಿ ಹೊಸ ಹೊಸ ಅನುಭವಗಳು ತೆರೆದುಕೊಳ್ಳುತ್ತವೆ. ಡೇವಿಡ್‌ನನ್ನು ಕಂಡೊಡನೆ ಯಾಮಿನಿ ತಾನು ಭಾರತೀಯಳು ಎಂಬುದನ್ನು ತೀರಾ ಮರೆತು ಬಿಟ್ಟವಳಂತೆ ಏಕೆ ವರ್ತಿಸಿದಳು? ಅವಳನ್ನು ಕ್ರೂರವಾದ ಪ್ರಾಣಿಯಂತೆ ಆಕ್ರಮಿಸಿದಾಗ, ಡೇವಿಡ್‌ನ ಮನಸ್ಸಿನ ಆಳದಲ್ಲಿದ್ದ ಭಾವನೆಗಳೇನು ಎಂಬುದನ್ನು ವಿಶ್ಲೇಷಿಸಿದರೆ ಅವರಿಬ್ಬರ ಕಾಮದ ಹಿಂದೆ ಹುರಿಗೊಳಿಸದ ಹಲವಾರು ವಿಚಾರಗಳಿವೆ ಎಂದು ತಿಳಿದು ಬರುತ್ತವೆ. ಡೇವಿಡ್‌ನನ್ನು ಕಂಡೊಡನೆ ತನ್ನನ್ನು ತಾನು ಮರೆತು ಬಿಡುವಂತಾಗಲು, ಯಾಮಿನಿಯ ಹಿನ್ನೆಲೆಯನ್ನು, ಆಕೆ ಇಂಗ್ಲೆಂಡಿಗೆ ಬಂದ ಕಾರಣಗಳನ್ನು ಸ್ವಲ್ಪ ಚರ್ಚಿಸೋಣ.

ಅಕ್ಕ ಯಾಮಿನಿ, ತಮ್ಮ ಸತೀಶರ ನಡುವೆ ದೈಹಿಕ ಸಂಪರ್ಕ ಏರ್ಪಟ್ಟು, ಅದು ಯಾಮಿನಿ ಗರ್ಭಿಣಿಯಾಗುವ ತನಕವೂ ಮುಂದುವರಿಯಿತು. ಇದಾದ ಬಳಿಕ ಸತೀಶ ಭಾರತದಲ್ಲಿದ್ದಾಗಲೇ ಯಾವನೋ ಒಬ್ಬ ಡಾಕ್ಟರನ್ನು ಹಿಡಿದು, ಯಾಮಿನಿಯ ಗರ್ಭಪಾತ ಮಾಡಿಸಿ ಬಳಿಕ ಇಂಗ್ಲೆಂಡಿಗೆ ಓದಲೆಂದು ತೆರಳುತ್ತಾನೆ. ಎಷ್ಟಾದರೂ ಹಲವಾರು ವರ್ಷಗಳಿಂದ ಬೆಳೆದು ಬಂದಿದ್ದ ಸಾಮೀಪ್ಯವನ್ನು, ಪರಸ್ಪರರು ಕೊಟ್ಟ ದೈಹಿಕ ಸುಖವನ್ನು ಮರೆತು ಬಿಡಲು ಸಾಧ್ಯವಾಗುವುದಿಲ್ಲ. ಅದೇ ಕಾರಣಕ್ಕಾಗಿ, ಇಂಗ್ಲೆಂಡಿಗೆ ಬಂದ ಸತೀಶ್ ಯಾಮಿನಿಯನ್ನು ಇಂಗ್ಲೆಂಡಿಗೆ ಬರಲು ಸೂಚಿಸುತ್ತಾನೆ. ಆರ್ಥಿಕವಾಗಿ ಬಹಳಷ್ಟು ಶ್ರೀಮಂತರಾಗಿದ್ದ ಅವರಿಬ್ಬರ ತಾಯಿ–ತಂದೆಯರು, ಯಾಮಿನಿಯನ್ನು ಇಂಗ್ಲೆಂಡಿಗೆ ಚಿತ್ರ ಕಲೆ ಅಭ್ಯಾಸಕ್ಕೆಂದು ಕಳುಹಿಸುತ್ತಾರೆ. ಆದರೆ ಅದರೊಟ್ಟಿಗೆ ಸತೀಶನ ಬದುಕಿನೊಳಗೆ ಹಲವಾರು ಇಂಗ್ಲೀಷ್ ಯುವತಿಯರು ಬಂದು ಹೋಗಿರುತ್ತಾರೆ. ಹಾಗಾಗಿ ಯಾವ ಕಾರಣಕ್ಕಾಗಿ ಯಾಮಿನಿಯ ಸಾಮೀಪ್ಯವನ್ನು ಸತೀಶ ಬಯಸಿದ್ದನೋ, ಆ ಕಾರಣ

ಅವನಿಗೆ ಧಾರಾಳವಾಗಿ ದೊರಕಿಸಿದ ಸ್ತ್ರೀ ಸಖ್ಯದಿಂದ, ತನ್ನ ತೀಕ್ಷತೆಯನ್ನು ಕಳೆದುಕೊಂಡಿರುತ್ತದೆ. ಇದರಿಂದಾಗಿ ಯಾಮಿನಿ ಚಿತ್ರಕಲೆ ಕಲಿಯುವ ನೆಪದಿಂದ ಇಂಗ್ಲೆಂಡಿಗೆ ಬಂದು, ಸತೀಶನನ್ನು ಕೂಡುವ ಸಂದರ್ಭ ಸಂಪೂರ್ಣವಾಗಿ ಕಳೆದು ಹೋಗುತ್ತದೆ. ಓಗಾಗಿ ಇಂಗ್ಲೆಂಡ್ ತಲುಪಿದ ಯಾಮಿನಿಗೆ ತನ್ನ ಪ್ರಿಯಕರ ತಮ್ಮನೊಡನೆ ಇರಲು ಸಾಧ್ಯವಾಗುವುದಿಲ್ಲ. ಅವಳ ಮನಸ್ಸಿನೊಳಗೆ ಕುದಿಯುತ್ತಿದ್ದ ಕಾಮ, ತನ್ನೆಲ್ಲಾ ಮರ್ಯಾದೆಯ ಮೇರೆಯನ್ನು ಮೀರಿ, ಡೇವಿಡ್‌ನನ್ನು ಕಂಡೊಡನೆ ಅವನತ್ತ ಜಾರುತ್ತಾಳೆ; ಕ್ಷಣಾರ್ಧದೊಳಗೆ ಅವಳ ದೈಹಿಕ ಕಾಮದ ತುಡಿತಕ್ಕೆ ಡೇವಿಡ್‌ನ ಅದ್ಭುತ ದೇಹ ಸಂತೃಪ್ತಿ ನೀಡುತ್ತದೆ. ಆ ಸಂತೃಪ್ತಿಯಾದರೂ ಯಾವ ಬಗೆಯದು? ತನ್ನಿಡಿಯ ಜೀವಮಾನದಲ್ಲಿ ಅನುಭವಿಸದ ಸಂತೋಷವನ್ನು, ಕಾಮತೃಪ್ತಿಯನ್ನು ಡೇವಿಡ್‌ನಿಂದ ಆಕೆ ಪಡೆಯುವುದರಿಂದಲೇ ಆತನನ್ನು ತನ್ನ ಪಾಲಿನ ದೇವರು ಎಂದು ತಿಳಿಯುತ್ತಾಳೆ. ಹೀಗೆ, ಇಂಗ್ಲೆಂಡಿನ ಅಶಿಕ್ಷಿತ ಟ್ರಕ್ ಡ್ರೈವರ್ ಒಬ್ಬಾತ, ಭಾರತೀಯ ನಾರಿಗೆ ದೇವರಾಗಿ ಒದಗಿ ಬರುತ್ತಾನೆ. –ತಾನು ಆಕೆಗೆ ಒದಗಿಸಿದ ಕಾಮದ ಸಂತೃಪ್ತಿಯಿಂದ. ತನ್ನ ಹೆಣ್ಣು ದೇಹದ ಪ್ರತಿಭಾಗವನ್ನು ಸ್ಪರ್ಶಿಸಿ, ತನಗೆ ಅನನ್ಯ ಸುಖವನ್ನು ಒದಗಿಸಿದ ತನ್ನ ತಮ್ಮ ಸತೀಶನನ್ನು ಸೇರಲೆಂದು ಯಾಮಿನಿ ಲಂಡನಿಗೆ ಬರುತ್ತಾಳೆ. ಬಹುಶಃ ಅವಳ ಮನಸ್ಸಿನಲ್ಲಿದ್ದುದು ತಮ್ಮಿಬ್ಬರ ಸಾಮಿಪ್ಯ ಲಂಡನ್ನಿನಲ್ಲೂ ಮುಂದುವರಿಯಬಹುದು – ಎಂದು. ಆದರೆ ಅಷ್ಟರಲ್ಲಿ ಸತೀಶ ಜ್ಯೂಲಿಯ ಹಿಡಿತಕ್ಕೆ ಸಿಕ್ಕಿಬಿದ್ದಿದ್ದ. ಯಾವ ಸುಖಕ್ಕಾಗಿ ತಾನು ಹಾತೊರೆದು ಭಾರತವನ್ನು ಬಿಟ್ಟು ಲಂಡನ್ನಿಗೆ ಬಂದಿದ್ದಳೋ, ಆ ಸುಖ ಇನ್ನೊಬ್ಬ ಹೆಣ್ಣಿನ ಪಾಲಾಗುವುದನ್ನು ಸಾಕ್ಷೀಭೂತವಾಗಿ ನೋಡಲು ಯಾಮಿನಿಗೆ ಸಾಧ್ಯವಾಗುವುದಿಲ್ಲ. ಆಕೆ ಮೊದಲಿನಿಂದಲೇ ಜ್ಯೂಲಿಯನ್ನು ದ್ವೇಷಿಸುತ್ತಾಳೆ; ಆದರೆ ಅದನ್ನು ತೋರಗೊಡುವುದಿಲ್ಲ. ಈ ಬಗೆಯ ದ್ವೇಷವೇ ಅಸಹನೀಯ ಕಾಮದ ಒತ್ತಡವಾಗಿ ಯಾಮಿನಿಯನ್ನು ಮಾನಸಿಕವಾಗಿ ಹರಿದು ತಿನ್ನುತ್ತಿರುವಾಗಲೇ, ಡೇವಿಡ್‌ನ ಪರಿಚಯ ಅವಳಿಗಾಗುವುದು. ಆತನೂ ಭಾರತೀಯರನ್ನು ದ್ವೇಷಿಸುವವ. ಅವನ ದ್ವೇಷದ ಹಿಂದಿರುವ ಕಾರಣ ಆರ್ಥಿಕವಾಗಿದ್ದರೂ, ದ್ವೇಷಕ್ಕೆ ಆ ಯಾವ ಕಾರಣಗಳೂ ಬೇಕಾಗಿರಲಿಲ್ಲ. ಆತನ ಮನಸ್ಸಿನಲ್ಲಿರುವ ಜನಾಂಗೀಯ ದ್ವೇಷ, ಅಸಹನೀಯ, ಅತೃಪ್ತ ಕಾಮವಾಗಿ ರೂಪು ಕಟ್ಟಿದಾಗಲೇ ಆತನಿಗೆ ಯಾಮಿನಿಯ ಪರಿಚಯವಾದದ್ದು. ಇಬ್ಬರಲ್ಲಿಯೂ ಇರುವ ಬೇರೆ ಬೇರೆ ಬಗೆಯ ದ್ವೇಷ, ಕಾಮ ರೂಪಿನಿಂದ ಅವರನ್ನು ಒಂದುಗೂಡಿಸಿದ್ದು ಒಂದು ದುರಂತವೇ. ಭಾರತೀಯರನ್ನು ಪಾಕಿಸ್ತಾನಿಗಳನ್ನು ಕಂಡಲ್ಲಿ ವಿನಾಕಾರಣ ಶಿಕ್ಷಿಸುವ ಡೇವಿಡ್‌ನ ಮನೋವೃತ್ತಿ ಯಾಮಿನಿಗೆ ಒಂದು ಬಗೆಯ ಸಾಂತ್ವನವನ್ನು ನೀಡುತ್ತದೆ. ಹಾಗಾಗಿ ಪರಿಚಯವಾದ ಒಂದೆರಡು ಗಂಟೆಗಳಲ್ಲಿಯೇ ಪರಸ್ಪರರನ್ನು ಮೆಚ್ಚುತ್ತಾರೆ ಎನ್ನುವ ಬದಲು ಪರಸ್ಪರರನ್ನು ದ್ವೇಷಿಸುತ್ತಲೇ ಕಾಮಿಸುತ್ತಾರೆ. ನಾಟಕದಲ್ಲಿ ಬರುವ ಒಂದು ಕುತೂಹಲಕಾರಿ ಬೆಳವಣಿಗೆ ಇದು. ಯಾವಯಾವುದೋ ಪರಸ್ಪರ ಅರ್ಥದಿಂದ, ಘಟನೆಗಳ ಮೇಲಿನ ದ್ವೇಷದಿಂದ, ಗಂಡು ಹೆಣ್ಣುಗಳಿಬ್ಬರು ಜೊತೆಯಾಗುವದು; ಕಾಮಕೇಳಿಯಲ್ಲಿ ತೊಡಗುವದು. ಕಾಮದಿಂದ ದೊರೆತ ತೃಪ್ತಿಯಿಂದಲೇ ತಮ್ಮ ದ್ವೇಷ ಸಾಧನೆ ಸಾಧ್ಯವಾಯಿತು ಎಂದು ತಿಳಿಯುವುದು. ಇಂಗ್ಲೆಂಡಿಗೆ ಬಂದೊಡನೆಯೆ, ಸತೀಶ ತನ್ನ ಪ್ರಿಯಕರನಾಗಿ ಉಳಿದಿಲ್ಲ – ಎಂದು ಯಾಮಿನಿಗೆ ನಿಶ್ಚಯವಾಗಿಯೂ ತಿಳಿಯುತ್ತದೆ.

ಜ್ಯೂಲಿಯಾಳ ಹಿಡಿತದಿಂದ ಸತೀಶನನ್ನು ಬಿಡಿಸಿಕೊಳ್ಳಲು ಸಾಧ್ಯವೇ ಇಲ್ಲ – ಎಂದಾಕೆಗೆ ಮನವರಿಕೆಯಾದಂತೆ, ಜ್ಯೂಲಿಯ ವಿಚಾರ ದ್ವೇಷ ಹುಟ್ಟುತ್ತದೆ. ಆದರೆ ಈ ದ್ವೇಷವನ್ನು ತಾನು ಯಾವತ್ತಾದರೂ, ಯಾವ ಬಗೆಯಲ್ಲಾದರೂ ತೋರಿಸಲು ಯಾಮಿನಿ ಸಿದ್ಧಳಿಲ್ಲ. ಹೀಗಾಗಿ ಈ ದ್ವೇಷ ಮನಸ್ಸಿನಲ್ಲಿಯೇ ಕುದಿಯುತ್ತಿದ್ದಾಗ, ಸೇಡು ತೀರಿಸಿಕೊಳ್ಳಬೇಕೆಂಬ ಮನೋಸ್ಥಿತಿಯನ್ನು ತಲುಪಿದಾಗ, ಆಕೆಗೆ ದೊರೆಯುವುದು ಡೇವಿಡ್‌ನ ಸ್ನೇಹ ಹಸ್ತ. ಅದು ಸ್ನೇಹ ಹಸ್ತ ಎಂದು ಗುರುತಿಸಲಾಗದ್ದು, ಅದನ್ನು ಕಾಮ ಹಸ್ತ ಎಂದು ಹೆಸರಿಸಬಹುದು. ಏನೇ ಇದ್ದರೂ, ಡೇವಿಡ್‌ನ ಕಾಮ ಹಸ್ತ ಚಾಚುವಿಕೆ, ಯಾಮಿನಿಯ ಮನಸ್ಸಿನ ಮೂಲೆಯಲ್ಲಿ ಅದಷ್ಟರಲ್ಲಿಯೇ ಹೊಗೆಯಾಗತೊಡಗಿದ್ದ ಸೇಡಿನ ಭಾವನೆಯನ್ನು ಸ್ವಲ್ಪ ಶಮನಗೊಳಿಸಿರಬೇಕು. ಇದು ನಾಟಕದಲ್ಲಿಯೇ ತಿಳಿದು ಬರುತ್ತದೆ; ಡೇವಿಡ್‌ನ ಸ್ನೇಹದ ಬಳಿಕ ಯಾಮಿನಿಯ ಗಮನ ಜ್ಯೂಲಿಯಾಳ ಕಡೆಗೆ ಅಷ್ಟು ತೀವ್ರವಾಗಿ ಹೋಗುವುದಿಲ್ಲ.

ಡೇವಿಡ್ ಎಷ್ಟೆಂದರೂ ಟ್ರಕ್ ಡ್ರೈವರ್. ಅವನ ಟ್ರಕ್‌ನಲ್ಲಿಯೆ ಎರಡು ದಿನಗಳಷ್ಟು ಕಾಲವನ್ನು ಕಾಮಕೇಳಿಯ ವಿಜೃಂಭಣೆಯಿಂದ, ಅದರ ಸಕಲ ಸುಖ ಭೋಗಗಳನ್ನು ಕಳೆದ ಯಾಮಿನಿಗೆ, ತಾನು ಭಾರತೀಯ ನಾರಿ, ಮೇಲ್‌ಮಧ್ಯಮ ವರ್ಗಕ್ಕೆ ಸೇರಿದವಳು; ಡೇವಿಡ್‌ನಿಗೂ ತನಗೂ ಮಧ್ಯ ವರ್ಣಾಂತರವಿದೆ, ಅವರ ಸಂಸ್ಕೃತಿ ಬೇರೆ, ಅವನ ನಡೆನುಡಿಗಳು ಹೇಸುಗೆ ಹುಟ್ಟಿಸುವಂಥವು–ಇತ್ಯಾದಿ ಯಾವ ಸೂಕ್ಷ್ಮ ವಿಚಾರಗಳೂ ಅವಳ ಗಮನಕ್ಕೆ ಆ ಎರಡು ದಿನಗಳಲ್ಲಿ ಬಂದಿರುವುದಿಲ್ಲ. ಕಾರಣ, ಆ ಎರಡು ದಿನಗಳಲ್ಲಿ ಆಕೆ ಡೇವಿಡ್‌ನ ದೇಹದಿಂದ ಪಡೆದ, ಉಂಡ ಸುಖ, ಅವಳ ಇಡಿಯ ಜೀವಮಾನಕ್ಕೆ ಸಾಲುವಂತಿತ್ತು. ಆ ಎರಡು ದಿನಗಳಲ್ಲಿ ಅವರಿಬ್ಬರು ಕಳೆದದ್ದು ಟ್ರಕ್ಕಿನ ಒಳಗೆಯೆ. ಅವಳಿಗೆ ಅದು ದೇವರಥವಾಗಿತ್ತು. ಡೇವಿಡ್ ದೇವರಾಗಿದ್ದ. ಬರಿಯ ದ್ವೇಷದಿಂದ ಹುಟ್ಟಿದ ಕಾಮಕ್ಕೆ ಈ ಬಗೆಯ ಸರ್ವಸುಖವನ್ನು ಒದಗಿಸಬಲ್ಲ ಶಕ್ತಿ ಇರಬಹುದು ಎಂಬುದನ್ನು ಗಿರೀಶರು ಇಲ್ಲಿ ಸೂಚಿಸುತ್ತಿರಬಹುದೇ?

ಡೇವಿಡ್ ವಿವಾಹಿತ : ಎರಡು ಮಕ್ಕಳ ತಂದೆ. ಹಾಗಿದ್ದರೂ ತಣಿಯದ ಕಾಮ ಅವನಲ್ಲಿದೆ. ಆ ಕಾಮವನ್ನು ತಿರುತಿರುಗಿ ಉರಿಯುವಂತೆ ಮಾಡುವುದು ಅವನ ಜನಾಂಗ ದ್ವೇಷೀಯ ಗುಣ. ತಾನು ನೂರಕ್ಕೆ ನೂರರಷ್ಟು ದ್ವೇಷಿಸುವ ಜನಾಂಗದ, ಒಬ್ಬಾಕೆ ಹೆಣ್ಣು, ಅದು ಕುಮಾರಿಯಾಗಿರುವಾಗಲೇ ತನಗೆ ದೊರೆತಷ್ಟು ಡೇವಿಡ್‌ನಿಗೆ ಅತ್ಯುಗ್ರ ಕಾಮ ಪಿಪಾಸೆಯನ್ನು ಹುಟ್ಟಿಸಿರಬೇಕು. ಪರಸ್ಪರ ಪರಿಚಯವಾದ ಕೆಲವೇ ಕ್ಷಣಗಳಲ್ಲಿ, ಯಾಮಿನಿಯ ಮೇಲೇರಿ ಹೋಗಿ, ಅವಳ ಕೌಮಾರ್ಯವನ್ನು ಮುರಿದು, ತನ್ನ ಶೂರತನವನ್ನು ಮೆರೆಸಬೇಕೆಂಬ ಡೇವಿಡ್‌ನ ಮನೋಕಾಂಕ್ಷೆಗೆ ಪೂರಕವಾಗಿ ಒತ್ತು ಕೊಡುವವಳು ಯಾಮಿನಿಯೇ. ಪರಿಚಯವಾದ ಕೆಲವೇ ಕ್ಷಣಗಳೊಳಗೆ, ಯಾವ ಹೆಂಗಸಾದರೂ ನಾಚಿಕೆಯಿಂದ ಹೇಳಲಾರದ, ತನ್ನ ಕೌಮಾರ್ಯದ ಹಸಿತನವನ್ನು ಯಾಮಿನಿ ಡೇವಿಡ್‌ನಲ್ಲಿ ಹೇಳಿಕೊಳ್ಳುತ್ತಾಳೆ. ಈ ಸಂದರ್ಭದಲ್ಲಿ ಅವಳ ಮಾತು, ಅವಳ ಮಾನಸಿಕ ಸಮತೋಲನವನ್ನು ಕಳೆದುಕೊಂಡಿರುವಂತೆ ಕಾಣುತ್ತದೆ. ಆದರೂ ಕಾಮಾತುರತೆಯ ಒತ್ತಡದಿಂದಾಗಿ, ತನ್ನ ಕೌಮಾರ್ಯವನ್ನು ಡೇವೀಡ್‌ನಿಗೆ ಒಪ್ಪಿಸುತ್ತೇನೆ – ಎಂದು ಬಾಯಿ ಬಿಟ್ಟು ಹೇಳುವಷ್ಟು

ನಾಚುಗೇಡು ಹೆಣ್ಣು ಯಾಮಿನಿ ಆಗ ಆಗುತ್ತಾಳೆ. ತನ್ನ ಪ್ರಿಯಕರ ತಮ್ಮ ಸತೀಶ ತನ್ನ ಕೈ ತಪ್ಪಿ ಹೋದೊಡನೆಯೆ, ಯಾಮಿನಿ ಆತನ ಸಾಮೀಪ್ಯವನ್ನು ಇನ್ನೂ ಬಯಸುವಂತೆ, ಆತನಿಗೆ ತಾಯಿಯಂತೆ ನೆರವಾಗುತ್ತಾಳೆ. ಅವನಿಗೆ ಹೊಸ ಶರ್ಟು ತಂದು ಕೊಡುತ್ತಾಳೆ. ಅಡುಗೆ ಕೋಣೆಯಲ್ಲಿ ಖಾಲಿಯಾಗಿದ್ದ ಡಬ್ಬಿಗಳನ್ನು ವಸ್ತುಗಳಿಂದ ತುಂಬುತ್ತಾಳೆ. ಇಷ್ಟೊಂದನ್ನು ಆಕೆ ಮಾಡುವದು ಸತೀಶನನ್ನು ತಿರುಗಿ ಒಲಿಸಿಕೊಳ್ಳಬೇಕೆಂಬ ಪ್ರಯತ್ನಗಳ ಮಗ್ಗುಲುಗಳಾಗಿರಬಹುದು. ಆದರೆ, ಯಾವ ದೈಹಿಕ ಸಂಬಂಧ ತನ್ನ ಮತ್ತು ಸತೀಶನನ್ನು ಒಗ್ಗೂಡಿಸಿದೆಯೋ ಅದನ್ನು ಆಕೆಗೆ ತಿರುಗಿ ಪಡೆಯಲು ಸಾಧ್ಯವೇ ಆಗುವುದಿಲ್ಲ. ಹಾಗಾಗಿ ಪ್ರೀತಿ ಸತೀಶನ ಕಡೆಗೆ, ದೇಹ ಡೇವಿಡ್‌ನ ಕಡೆಗೆ ಎಂಬ ದ್ವಿಮುಖ ಧೋರಣೆಯನ್ನು ಅಳವಡಿಸಿಕೊಂಡು, ಯಾಮಿನಿ ನರಳುತ್ತಿರುವುದು, ನಾಟಕದಲ್ಲಿ ಹಣಕಿ ಹಾಕಿರುವ ಮೌನ ದುರಂತದ ಚಿತ್ರಣವಾಗಿ ಬಂದಿದೆ. ಏನಿದ್ದರೂ, ಯಾಮಿನಿ ಮತ್ತು ಡೇವಿಡ್‌ರೊಳಗಿರುವ ಗಂಡು-ಹೆಣ್ಣಿನ ಸಂಬಂಧಕ್ಕೆ, ಕಾಮಾತುರತೆಯ ಹೊರತು ಬೇರೆ ಅರ್ಥವೇ ಹೊಮ್ಮುವುದಿಲ್ಲ ಈ ನಾಟಕದಲ್ಲಿ.

ಒಂದು ರೀತಿಯಲ್ಲಿ ನೋಡ ಹೋದರೆ, ಯಾಮಿನಿ ಮತ್ತು ಡೇವಿಡ್‌ರೊಳಗಿನ ಗಂಡು-ಹೆಣ್ಣಿನ ಸಂಬಂಧ ಸರಳ ರೇಖಾತ್ಮಕವಾದದ್ದು - ಅಲ್ಲಿದ್ದದ್ದು ಕಾಮ ಮಾತ್ರ. ಆದರೆ ಯಾಮಿನಿ ಮತ್ತು ಸತೀಶರ ಒಳಗಿದ್ದ ಗಂಡು-ಹೆಣ್ಣಿನ ಸಂಬಂಧ ತುಂಬಾ ಸಂಕೀರ್ಣವಾದದ್ದು. ಎಷ್ಟೋ ಏರು, ತಗ್ಗುಗಳ ನಡುವೆ ಹಾದು ಹೋಗುವ ಸಂಬಂಧ. ಅದಕ್ಕೆ ಹಲವಾರು ಮೈಗಳು ಇವೆ; ಮಗ್ಗುಲುಗಳು ಇವೆ. ಇಡಿಯ ನಾಟಕದ ಮೂಲವಸ್ತು, ಅವರಿಬ್ಬರ ಸಂಬಂಧದ ಒಳಗಿನ ತಿರುವು - ಒಳ ತಿರುವುಗಳನ್ನು ಅರ್ಥೈಸುವುದರಲ್ಲಿಯೇ ಇದೆ. ಅಂಜು ಮಲ್ಲಿಗೆ ಎಂಬ ರೂಪಕ, ನಾಟಕದ ಮೊದಲ ಅರ್ಧದಲ್ಲಿ ಸಮರ್ಪಕವಾಗಿ ಹೊಂದಿಕೊಳ್ಳದಂತಿದ್ದರೂ, ನಾಟಕದ ಉತ್ತರಾರ್ಧದಲ್ಲಿ ಹಾಗೆ ಕಿತ್ತು ಬಿಸಿಲಿಗೆ ಒಣಗಲು ಹಾಕಿದ ಗಿಡವನ್ನು ತಿರುಗಿ ನೆಡಲು ಯಾರೂ ಪ್ರಯತ್ನಿಸುವುದಿಲ್ಲವಾದುದರಿಂದ, ರೂಪಕವು ಅರ್ಧರೂಪಕವಾಗಿಯೆ ಉಳಿದಿರುತ್ತದೆ.

ಭಾರತದಲ್ಲಿರುವ ತಮ್ಮ ದೊಡ ಬಂಗಲೆಯಂಥ ಮನೆಯಲ್ಲಿ, ಅಕ್ಕ-ತಮ್ಮಂದಿರಾದ ತಾವಿಬ್ಬರೇ ಇದ್ದು, ಸ್ನೇಹಿತರಾರನ್ನೂ ಗಳಿಸಿಕೊಂಡಿರದ ಕಾಲದಲ್ಲಿ ಒಬ್ಬರೊಂದಿಗೆ ಒಬ್ಬರು ದೈಹಿಕವಾಗಿ, ಮಾನಸಿಕವಾಗಿ ಹೊಂದಿಕೊಂಡು ಬದುಕಿರುವುದು ಸ್ವಾಭಾವಿಕವೇ ಆಗಿತ್ತು. ಆಗ ತಾವಿಬ್ಬರೂ ಆಡುತ್ತಿದ್ದ ಹಲವಾರು ಆಟಗಳಲ್ಲಿ ಲೈಂಗಿಕ ಕ್ರಿಯೆಯ ಆಟಗಳು ಸೇರಿಕೊಂಡಿದ್ದರೂ, ಅವರಿಗದು ಅಸ್ವಾಭಾವಿಕ, ಅನೈತಿಕ ಎಂದು ಅನಿಸಿರಲೇ ಇಲ್ಲ. ತಮ್ಮಿಬ್ಬರೊಳಗಿನ ದೈಹಿಕ ಅನ್ಯೋನ್ಯತೆಯನ್ನು ಅವರು ಬೇರೊಬ್ಬರೊಡನೆ ಹೇಳುವಂತೆಯೂ ಇರಲಿಲ್ಲ. ಹೀಗೆ ಸ್ವೇಚ್ಛೆಯಾಗಿ ಬೆಳೆದ ಅವರ ದೈಹಿಕ ಸಾಮೀಪ್ಯ, ಯಾಮಿನಿ ಗರ್ಭವತಿಯಾಗುವ ಹಂತ ತಲುಪಿದಾಗ, ಎಚ್ಚರಗೊಂಡ ಸತೀಶ್, ಡಾಕ್ಟರರೊಬ್ಬರನ್ನು ಹಿಡಿದು, ಗರ್ಭಪಾತ ಮಾಡಿಸಿ, ಮುಂದಕ್ಕೆ ತನ್ನಿಂದ ಈ ಬಗೆಯ ಅನೌಚಿತ್ಯ ಕಾರ್ಯ ಜರುಗಬಾರದು - ಎಂಬ ಮಾನಸಿಕ ಹೆದರಿಕೆಯಿಂದ ಇಂಗ್ಲಂಡಿಗೆ ಓದಲೆಂದು ಹೊರಟು ಹೋಗುತ್ತಾನೆ, ಎಂಬಲ್ಲಿಗೆ ಅವರ ಸಂಬಂಧದ ಒಂದು ಘಟ್ಟ ಮುಗಿಯುತ್ತದೆ. ಈ

ಸಂಬಂಧ ಬೇರೆಯೇ ರೂಪ ತಾಳುವುದು. ಸತೀಶ ಇಂಗ್ಲೆಂಡಿನಲ್ಲಿ ಒಂಟಿತನ ಅನುಭವಿಸಿ, ಯಾಮಿನಿಯನ್ನು ಇಂಗ್ಲೆಂಡಿಗೆ ಬಂದಿರಲು ಹೇಳುವ ಘಟ್ಟ ಇನ್ನೊಂದು. ಅಷ್ಟರಲ್ಲಿ ಆವನಿಗೆ ತನ್ನನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡಿದ್ದ ಯಾಮಿನಿ, ಸತೀಶನ ಪತ್ರವನ್ನು ಕಂಡು, ತಾನು ಬಯಸುತ್ತಿದ್ದ ಸುಖ ತಿರುಗೊಮ್ಮೆ ತನಗೆ ಸಿಗಲು ಸಾಕು ಎಂಬ ಆಸೆಯಿಂದ, ಇಂಗ್ಲೆಂಡಿಗೆ ಬರುತ್ತಾಳೆ. ಆದರೆ ಇಂಗ್ಲೆಂಡ್ ಅದಷ್ಟರಲ್ಲಿ ಅವಳಿಗೆ ಒದಗಿಸ ಬೇಕಾದುದನ್ನು ಒದಗಿಸುವ ಶಕ್ತಿಯನ್ನು ಕಳೆದುಕೊಂಡಿರುತ್ತದೆ. ಯಾವ ಮನೋ ಆಕಾಂಕ್ಷೆಯಿಂದ ಆಕೆ ಇಂಗ್ಲೆಂಡಿಗೆ ಬಂದಿರುತ್ತಾಳೆಯೋ, ಅಷ್ಟೇ ನಿರಾಶೆಯಿಂದ, ಬೇರೆಲ್ಲಾ ಪ್ರಭಾವಗಳಿಗೆ ಒಳಗಾಗಿ, ತನ್ನ ಆರಾಧ್ಯದೇವ ಸತೀಶನನ್ನು ಆಕೆ ಕಳೆದುಕೊಳ್ಳುವುದು – ಅವರಿಬ್ಬರೊಳಗಿನ ಸಂಬಂಧದ ಮೂರನೆ ಘಟ್ಟ.

ಸತೀಶ್ ಲಂಡನ್ನಿಗೆ ಬಂದೊಡನೆ, ಭಾರತದಲ್ಲಿ ಉಳಿದ ಯಾಮಿನಿ ದೈಹಿಕ – ಮಾನಸಿಕ ತುಮುಲಕ್ಕೆ ಒಳಗಾಗುತ್ತಾಳೆ. ಆಕೆ ಚಿತ್ರಕಲೆಯ ನೆಪ ಮಾಡಿ ಲಂಡನಿಗೆ ಹೋದದ್ದಾದರೂ, ತನ್ನ ಆರಾಧ್ಯದೈವ ಸತೀಶನ ಲೈಂಗಿಕ ಸುಖ ಸಂಪಾದನೆಗೆ ಇದ್ದಿರಬೇಕು. ಆದರೆ, ಅದಷ್ಟರಲ್ಲಿ ಸತೀಶ್, ಜ್ಯೂಲಿಯೊಡನೆ ಒಂದಾಗಿದ್ದ. ಯಾಮಿನಿಯ ದೈಹಿಕ ಹಸಿವು ಅವನಿಂದಾಗಿ ತಣಿದುಕೊಳ್ಳಲಾರದ ಸಂದರ್ಭದಲ್ಲಿ, ಮನಸ್ಸಿನೊಳಗೆ ಅತ್ಯುಗ್ರವಾಗಿ ಬೆಳೆದ ಆ ಕಾಮದ ಉರಿಯನ್ನು ತಾಳಲಾರದೆ ಡೇವಿಡ್‌ನ ಬಲೆಗೆ ಬೀಳುತ್ತಾಳೆ. ಆತ ಕರಡಿಯಂತೆ ಅವಳ ಮೇಲೆಗುತ್ತಾನೆ. ಅವಳ ದೈಹಿಕ ಕಾಮದ ಇಚ್ಛೆ ಎಷ್ಟು ಪ್ರಬಲವಾಗಿತ್ತೆಂದರೆ, ಡೇವಿಡ್‌ನ ಪ್ರಾಣಿ ಸಹಜ ನಡವಳಿಕೆಯೂ ಅವಳಲ್ಲಿ ಮುಜುಗುರವನ್ನು ತರಲಿಲ್ಲ. ಅವಳ ಕಾಮೇಚ್ಛೆ ಆ ಬಗೆಯ ಕ್ರೂರ ಕಾಮ ಪರಿಹಾರಕ್ಕಾಗಿಯೇ ಕಾಯುವಂತಿತ್ತು. ಆದರೆ ಡೇವಿಡ್‌ನ ಮತ್ತು ಯಾಮಿನಿಯರ ಒಳಗೆ ಯಾವ ಪ್ರೇಮದ ಎಳೆಯೂ ಕಾಣುವದಿಲ್ಲ. ಯಾಮಿನಿಯ ಮನಸ್ಸಿನಲ್ಲಿದ್ದ ಪ್ರೇಮ ತನ್ನ ತಮ್ಮ ಸತೀಶನ ಕಡೆಗೆ ವಾಲಿದ್ದರೆ, ಅವಳಲ್ಲಿದ್ದ ಕಾಮದ ಬಾಯಾರಿಕೆ ಆಸೆಯನ್ನು ಡೇವಿಡ್‌ನ ಬಳಿಗೆ ವಾಲಿಸಿತ್ತು. ತಾನು ಇಂಗ್ಲೆಂಡಿಗೆ ಬಂದರೂ, ತನ್ನ ತಮ್ಮನೊಡನೆ ಇರಲಾಗಲಿಲ್ಲ – ಎಂಬ ಖಿನ್ನತೆ ಅವಳಲ್ಲಿ ಮನೆ ಮಾಡಿತ್ತು. ಒಂದು ಬಾರಿ ತನ್ನ ಕಣ್ಣೆದುರಿಗೆಯೆ ಡೇವಿಡ್ ಸತೀಶನ ಹೊಟ್ಟೆಗೆ ಹೊಡೆದು ಕೆಳಗೆ ಉರುಳಿಸಿದಾಗ, ಯಾಮಿನಿಯಲ್ಲಿದ್ದ ಪ್ರೇಯಸಿ/ತಾಯಿ ಒಮ್ಮಿಂದೊಮ್ಮೆ ರೊಚ್ಚಿಗೆದ್ದಳು. ಪರಿಣಾಮವಾಗಿ ಮನೋಸ್ವಾಸ್ಥ್ಯವನ್ನು ಕಳೆದುಕೊಂಡಳು. ಅದಕ್ಕಾಗಿ ಆಸ್ಪತ್ರೆಯಲ್ಲಿ ಕೆಲವು ದಿನಗಳನ್ನು ಕಳೆಯಬೇಕಾಯ್ತು. ಮನೆಯಿಂದ ಅವಳ ಅನುಪಸ್ಥಿತಿಯನ್ನೇ ಹಾರೈಸುತ್ತಿದ್ದ ಸತೀಶ್, ಆಕೆ ಆಸ್ಪತ್ರೆಯಲ್ಲಿದ್ದಾಗಲೆ, ಜ್ಯೂಲಿಯಾಳನ್ನು ಮದುವೆಯಾಗುತ್ತಾನೆ. ಆದರೆ ಈ ಘಟನೆಗಳ ನಡುವೆ, ಜೂಲಿಯಾಳನ್ನು ಇನ್ನೂ ಕೆಣಕಬೇಕೆಂಬ ಉದ್ದೇಶದಿಂದ ತಾನು ಭಾರತದಲ್ಲಿದಾಗ ಸತೀಶನಿಂದ ಗರ್ಭಿಣಿಯಾದುದನ್ನು ಹೇಳುತ್ತಾಳೆ. ಇದು ಜ್ಯೂಲಿಯಾಗೆ ಮಾನಸಿಕ ಏಟು ಬಿದ್ದಂತಾಗುತ್ತದೆ. ಆದರೆ ಸತೀಶ ಕೋಣೆಗೆ ಬಂದಾಗ, ತಾನು ಜ್ಯೂಲಿಯಾಗೆ ಒಂದು "ಅಜ್ಜಿ ಕತೆ" ಹೇಳಿದೆ – ಎಂದು ಯಾಮಿನಿ ಹೇಳುತ್ತಾಳೆ. ತಾನು ಸತೀಶನಿಂದ ಗರ್ಭ ಧರಿಸಿದ್ದು ಅಜ್ಜಿಕತೆಯಾಗಿ ಅವಳಿಗೆ ಹೊಳೆದಿರಬೇಕು. ಮೊದಲೊಮ್ಮೆ ಡೇವಿಡ್‌ನೊಡನೆ ತಾನಿನ್ನೂ ಕುಮಾರಿ ಎಂದು ಹೇಳಿದ ಯಾಮಿನಿ, ನಾಟಕದ ಈ ಭಾಗದಲ್ಲಿ "ಅಜ್ಜಿ ಕತೆಯನ್ನು" ಹೇಳಿದ ಉದ್ದೇಶ ಸ್ಪಷ್ಟ,

ಜ್ಯೂಲಿಯಾಳನ್ನು ಸತೀಶನಿಂದ ಇನ್ನಾದರೂ ದೂರವಿರಿಸಬೇಕೆಂಬ ಹಂಬಲ. ಈ ಅಜ್ಜಿಕತೆಯನ್ನು ಯಾಮಿನಿ ಜ್ಯೂಲಿಯಾಳಿಗೆ ಏಕೆ ಹೇಳಿದಳೆಂದು ಕಾರಣವನ್ನು ಊಹಿಸಿದ ಸತೀಶ, ಯಾಮಿನಿಯಿಂದ ತಾನು ಯಾವತ್ತೂ ದೂರವಾಗಿಯೆ ಇರಬೇಕೆಂಬ ನಿಶ್ಚಯದಿಂದ, ಜ್ಯೂಲಿಯಾಳನ್ನು ಮದುವೆಯಾಗುತ್ತಾನೆ. ಸತೀಶ ಜ್ಯೂಲಿಯರ ಮದುವೆ – ಯಾಮಿನಿಯ ಬದುಕಿನ ಕೊನೆಯ ದುರಂತ ದೃಶ್ಯವಾಗಿ ಬರುತ್ತದೆ. ತನಗೆ ಇನ್ನು ತನ್ನ ಆರಾಧ್ಯ ದೇವತೆ ಸತೀಶ ಸಿಗುವುದೇ ಇಲ್ಲ ಎಂದು ತಿಳಿದ ಯಾಮಿನಿ, ಮೋಣಕೈಯ ರಕ್ತನಾಳವನ್ನು ಸೀಳಿಕೊಂಡು, ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

(ಸತೀಶ ತನ್ನ ಬಾಲ್ಯದಾರಭ್ಯದ ಸಖಿಯನ್ನು ದೂರ ಮಾಡಲು ಮುಖ್ಯ ಕಾರಣ ಸಾಮಾಜಿಕವಾಗಿಯೇ ಇತ್ತಲ್ಲದೆ, ಅನೈಸರ್ಗಿಕ, ಅಸ್ವಾಭಾವಿಕ ಗುಣಗಳನ್ನು, ಮೇಲಾಗಿ ಆತನಿಗೆ ಬೇಕಾಗಿದ್ದ, ತುರ್ತಾಗಿ ಬೇಕಾಗಿದ್ದ ಸ್ತ್ರೀದೇಹ ಪ್ರೇಮಸಹಿತ ಜ್ಯೂಲಿಯಾ ದೊರಕಿರುವ ಸಾಧ್ಯತೆಗಳೂ ಇವೆ. ಆದರೆ ಆತ ಯಾಮಿನಿಯನ್ನು, ಯಾಮಿನಿ ಆತನನ್ನು ಹಚ್ಚಿಕೊಂಡಷ್ಟು ಹಚ್ಚಿಕೊಂಡಿರಲಿಲ್ಲ ಎಂಬುದು ನಾಟಕದಲ್ಲಿ ಸ್ಪಷ್ಟವಾಗಿ ಮೂಡಿರುತ್ತದೆ. ಯಾಮಿನಿಯ ಶವ ಸಂಸ್ಕಾರದ ಬಳಿಕ, ಅವನ ಕೋಣೆಯಲ್ಲಿ ಸೇರಿದ್ದ ಸ್ನೇಹಿತರೊಡನೆ, ಇಂಗ್ಲೆಂಡಿನ ಸಂಪ್ರದಾಯದಂತೆ, ಅವನು ದ್ರಾಕ್ಷಾರಸ ಸೇವಿಸುತ್ತಾನೆ. ಆಗಲೂ ಅವನಲ್ಲಿ ಆ ಬಗೆಯ ಮನೋವ್ಯಥೆ ಕಾಣಿಸುವುದಿಲ್ಲ.

ಈ ನಾಟಕದಲ್ಲಿ ಬರುವ ಗಂಡು–ಹೆಣ್ಣಿನ ಸಂಬಂಧಗಳ ಕುರಿತು ಹೆಚ್ಚೇನನ್ನೂ ಬರೆಯಲಾಗುವುದಿಲ್ಲ. ನಾಟಕದ ವಸ್ತುವೇ ಅಕ್ಕ – ತಮ್ಮಂದಿರೊಳಗಿನ ಲೈಂಗಿಕ ಸಂಬಂಧದ ಕುರಿತಾಗಿ ಇರುವುದರಿಂದ, ಈ ಬಗೆಯ ಸಂಬಂಧ ಎಷ್ಟು ಗ್ರಾಹ್ಯ? ಎಷ್ಟು ಅಗ್ರಾಹ್ಯ? ಎಂದು ನಾಟಕದ ವಿವಿಧ ಘಟನೆಗಳ ಬೆಳವಣಿಗೆಯಲ್ಲಿ ಕಾರ್ನಾಡರೇ ಸೂಚಿಸಿದ್ದಾರೆ. ಹೀಗಿದ್ದರೂ ಇದೊಂದು ಜಿಗುಟು ನಾಟಕ. ಇದರ ವಸ್ತು ಹೇಗೆ ಅಸಾಮಾಜಿಕವೋ, ಅದರ ಪ್ರದರ್ಶನ ಕೂಡಾ ಅಷ್ಟೇ ಅಸಾಮಾಜಿಕವಾಗಿ ಬಿಡಬಹುದಾದ ಸಾಧ್ಯತೆಗಳಿವೆ. ಇದೇ ಕಾರಣಕ್ಕಾಗಿ ಕರ್ನಾಟಕದ ಹೆಚ್ಚಿನ ಹವ್ಯಾಸೀ ತಂಡಗಳು ಈ ನಾಟಕವನ್ನು ಪ್ರದರ್ಶಿಸುವ ಎದೆಗಾರಿಕೆ ತೋರಿಲ್ಲ. ರಂಗಭೂಮಿಯ ಮೇಲೆ ಯಾವ ಬಗೆಯ ನಾಟಕಗಳನ್ನು ಪ್ರದರ್ಶಿಸಬೇಕು – ಎಂಬ ಕಟ್ಟುನಿಟ್ಟಾದ ಶಾಸ್ತ್ರ ಇಲ್ಲ. ಮೇಲಾಗಿ ಈ ನಾಟಕದಲ್ಲಿ ಬರುವ ಡೇವಿಡ್‌ನ ಪಾತ್ರ, ಆತ ಇಂಗ್ಲೆಂಡಿನ ಟ್ರಕ್ ಡ್ರೈವರ್. ಕರ್ನಾಟಕದ ಯಾವ ಹವ್ಯಾಸೀ ನಟನೂ ಈ ಪಾತ್ರವನ್ನು ಸಮರ್ಪಕವಾಗಿ ಅಭಿನಯಿಸಲು ಸಾಧ್ಯವಿಲ್ಲ. (ಬೆಂಗಳೂರಿನ ಪ್ರಸಿದ್ಧ ಹವ್ಯಾಸೀ ತಂಡವೊಂದು ಈ ನಾಟಕವನ್ನು ಪ್ರದರ್ಶಿಸಿತ್ತು; ಆದರೆ ಯಾಮಿನಿ ಪಾತ್ರಧಾರಿಯ ನಟನೆಯೊಂದನ್ನು ಬಿಟ್ಟು, ನಾಟಕವು ಬರೀ ಸಪ್ಪೆಯಾಗಿತ್ತು. ನಾಟಕಕ್ಕೆ ಬಳಸಿದ ರಂಗಸಜ್ಜಿಕೆ, ವೇಷಭೂಷಣ ಇತ್ಯಾದಿಗಳು ಬೆಂಗಳೂರಿನವುಗಳೆ ಆಗಿದ್ದವೇ ಹೊರತು, ಇಂಗ್ಲೆಂಡಿನವು ಆಗಿರಲಿಲ್ಲ. ಈ ನಾಟಕದ ಈ ಬಗೆಯ ಪ್ರದರ್ಶನ ಯಾವ ರೀತಿಯಲ್ಲಿಯೂ ನಾಟಕಕಾರನಿಗಾಗಲೀ, ನಾಟಕದ ವಸ್ತುವಿಗಾಗಲೀ ಶೋಭೆ ತರುವುದಿಲ್ಲ. ಕರ್ನಾಟಕದಲ್ಲಿ ಇಂಗ್ಲಿಷ್ ಪಾತ್ರಧಾರಿಯೊಬ್ಬ ಕಾಣಿಸುವುದು ಬಹಳ ವಿರಳ. ಕಂಪೆನಿ ನಾಟಕಗಳಲ್ಲಿ, ಕಾರ್ನ್‌ವಾಲಿಸ್‌ನ ಪಾತ್ರವನ್ನು ವಿದೂಷಕನಂತೆ ಚಿತ್ರಿಸಿದ್ದೇ ಸಾಮಾನ್ಯ,

ಬೇರೆಯೇ ಒಂದು ಜನಾಂಗದ, ಬೇರೆಯೇ ಒಂದು ಸಂಸ್ಕೃತಿಯ ಒಂದು ಪಾತ್ರವನ್ನು ಬರವಣಿಗೆಯಲ್ಲಿ ಸೃಷ್ಟಿಸಬಹುದೇ ಹೊರತು – ಪ್ರದರ್ಶನದಲ್ಲಿ ಅದಷ್ಟು ಸುಲಭ ಕಾರ್ಯವಲ್ಲ. ಇಲ್ಲಿ ನೆನಪಿಗೆ ಬರುವ ಒಂದು ಅಂಶವೆಂದರೆ, ಬ್ರಿಟಿಷ್ಸಿನ ಡೇವಿಡ್‌ನ ಪಾತ್ರದ ಪಾತ್ರದ ಛಾಯೆಯನ್ನು, ಕಾರ್ನಾಡರ ಟಿಪ್ಪೂನ ಹುಂಜದ ಮಾವುತನಲ್ಲಿ ಕಾಣಬಹುದೋ ಏನೋ?)

ಸತೀಶ್, ಯಾಮಿನಿ, ಡೇವಿಡ್, ಗೌತಮರ ನಡುವೆ ಉಂಟಾಗುವ ಗಂಡು ಹೆಣ್ಣುಗಳ ಸಂಬಂಧದ ಕುರಿತಾದ ಸಮಸ್ಯೆಯನ್ನು ೧೯೭೭ ರಷ್ಟು ಹಿಂದೆಯೇ ಗುರುತಿಸಿಕೊಂಡು, ಅದಕ್ಕೊಂದು ನಾಟಕರೂಪವನ್ನು ಕೊಟ್ಟ ಕಾರ್ನಾಡರ ಎದೆಗಾರಿಕೆಯನ್ನು ಮೆಚ್ಚಲೇಬೇಕು. ನಮ್ಮ ದೇಶದ ಸಾಂಸ್ಕೃತಿಕ ಹಿನ್ನೆಲೆಯಿಂದ ಪ್ರಾರಂಭವಾಗುವ ಈ ನಾಟಕ (ಋಗ್ವೇದದ ಯಮ – ಯಮಿಯರ ಸಂಭಾಷಣೆ), ಚಾರಿತ್ರಿಕ ಕಾಲದಲ್ಲಿ ಅರಮನೆಗಳಲ್ಲಿ ಬಂಧಿಗಳಾಗಿ ಬದ್ಧಿರುತ್ತಿದ್ದ ಸಾವಿರಾರು ಸ್ತ್ರೀಯರು ಆತ್ಮಹತ್ಯೆ ಮಾಡಿಕೊಳ್ಳುವ ರೀತಿಯಲ್ಲಿ ನಾಟಕದ ರಚನೆ ಸಾಗಿದೆ. ಇದು ನಾಟಕದ ವೈಶಿಷ್ಟ. ನಾಟಕದಲ್ಲಿ ಬರುವ ಗಂಡು–ಹೆಣ್ಣುಗಳೊಳಗಿನ ಸಂಬಂಧಕ್ಕೂ ಸಾಂಸ್ಕತಿಕ ಅಡಿಗಲ್ಲನ್ನು ಹಾಕಿಕೊಡಬಲ್ಲ ಶಕ್ತಿ ಇರುವುದು ಕನ್ನಡದ ಒಬ್ಬನೇ ಒಬ್ಬ ನಾಟಕಕಾರ ಗಿರೀಶ್ ಕಾರ್ನಾಡರಿಗಷ್ಟೇ.

ಈ ನಾಟಕವನ್ನು ಪ್ರದರ್ಶಿಸುವ ಬದಲು, ಕರ್ನಾಟಕದಲ್ಲಿರುವ ಕೆಲವು ಯುನಿವರ್ಸಿಟಿಗಳ ಆಡಳಿತದ ಒಳಪಡುವ ಎರಡನೆ ವರುಷದ ಡಿಗ್ರಿ ತರಗತಿಗಳಿಗೆ ಪಠ್ಯಪುಸ್ತಕವಾಗಿ (ಉಪ ಪಠ್ಯಪುಸ್ತಕವಾಗಿ ಅಲ್ಲ) ನಿಯೋಜಿಸಬಹುದು.

ಈ ಬಗೆಯ ಒಂದು ಕೃತಿಯನ್ನು ತರಗತಿಯಲ್ಲಿ ವಿವರಿಸುವ ಉಪನ್ಯಾಸಕಾರನೂ ಬೆಳೆಯುತ್ತಾನೆ; ಜೊತೆಗೆ ವಿದ್ಯಾರ್ಥಿಗಳನ್ನೂ ಬೆಳೆಸುತ್ತಾನೆ. ಕೃತಿಯ ವಿವರಣೆಯೊಡನೆ ತಾನೂ ಬೆಳೆಯುವುದು ಉಪನ್ಯಾಸಕಾರರಿಗೆ ರೋಚಕ ಅನುಭವವಾದೀತು; ವಿದ್ಯಾರ್ಥಿಗಳಿಗೆ ಮರೆಯಲಾರದ ಪಾಠವಾದೀತು.

* * *

# ಹಿಂಸ್ರ ಪಶುವಿನ ನಗೆ

**ಕುರ್ರತುಲ್ ಐನ್ ಹೈದರ್**

ಹಿಮಾಲಯ ಮತ್ತು ಶಿವಾಲಕ್‌ದ ಮಧ್ಯದ, ಬೆಟ್ಟಗಳ ನಡುವಿನ ಭೂಭಾಗ "ಡೂನ್" ಎಂದೆನ್ನಿಸಿಕೊಳ್ಳುತ್ತದೆ. (ಇವುಗಳಲ್ಲಿ ಒಂದು ಡೆಹರಾಡೂನ್) ಒಂದು ನೂರ ಇಪ್ಪತ್ತೈದು ಮೈಲುಗಳವರೆಗೆ ಹಬ್ಬಿರುವ ಕೊರಬಟ್ ನ್ಯಾಷನಲ್ ಪಾರ್ಕ್ ಕೂಡ ನೈನಿತಾಲ್ ಜಿಲ್ಲೆಯ ಒಂದು ಡೂನ್‌ದಲ್ಲಿದೆ. ರಾಮಗಂಗಾ, ಬೆಟ್ಟಗಳಿಂದ ಕೆಳಗಿಳಿದು ಕೊರಬಟ್ ನ್ಯಾಷನಲ್ ಪಾರ್ಕದಲ್ಲಿ ಪ್ರವೇಶಿಸುತ್ತದೆ. ಅದರ ಒಂದು ತಟದ ಮೇಲೆ ಸಾಲು ಸಾಲು ಬೆಟ್ಟಗಳಿವೆ. ಇನ್ನೊಂದು ಕಡೆ ನಿಬಿಡವಾದ ವನಶ್ರೀ. ದಟ್ಟವಾದ ಕಾಡಿನಲ್ಲಿ ಹುಲಿ, ಚಿರ್ಚ, ಜಿಂಕೆಗಳಿವೆ. ಆನೆಗಳು ಮತ್ತು ನೀರುಗುದುರೆಗಳ ಹಾಗೆ ಯಾವುದಾದರೂ ಜೀಪ್ ಅಡವಿಯ ದಾರಿಯಲ್ಲಿ ಹೊರಟರೆ, ಅದರ ಸಪ್ಪಳಕ್ಕೆ ಹುಲಿ, ಚಿರ್ಚ, ಸಾರಂಗ, ಅಡವಿ ಆಕಳು ನಮ್ಮ ಕಣ್ಣಿಗೆ ಕಾಣದ ಹಾಗೆ ಮಾಯವಾಗಿ ಬಿಡುತ್ತವೆ. ಆಗ ಕೇವಲ ತರಗೆಲೆಯ ಸರಕ್... ಸರಕ್... ಎನ್ನುವ ಶಬ್ದ... ಅಥವಾ ಎಲ್ಲೊ ಒಂದಿಷ್ಟು ಅವು ಕಂಡ ಹಾಗೆ, ಅವುಗಳ ಪ್ರತಿಬಿಂಬ ಗೋಚರವಾಗುತ್ತದೆ.... ಮನುಷ್ಯನ ತಲೆಯ ಒಳಗಿನ ಕಾಡಿನಲ್ಲಿ ಅಡಗಿಕೊಂಡಿರುವ ಯಾವುದೋ ಕಲ್ಪನೆ, ವಿಚಾರದ ಹಾಗೆ... ಮತ್ತು ಯಾವಾಗಾದರೊಮ್ಮೆ ರಾತ್ರಿಯ ಸಮಯ ಜೀಪಿನ ಅಥವಾ ಕಾರಿನ ಹೆಡ್ ಲೈಟ್ಸಗಳ ಬೆಳಕಿನಲ್ಲಿ ಏನನ್ನೋ ಕಾದುಕೊಂಡು ನಗುತ್ತ ಕುಳಿತಿರುವ ಹಿಂಸ್ರಪಶು ಅಥವಾ ಕರಡಿ ಕಾಣಿಸಿಕೊಳ್ಳುತ್ತವೆ... ಒಂದು ಆಕಸ್ಮಿಕ ಅಪರಿಚಿತ ಭಯ ಒಕ್ಕರಿಸಿದ ಹಾಗೆ....

ಜಿಂಕೆಗಳಿಂದ, ನಾನಾ ಬಣ್ಣದ ಪಕ್ಷಿ ಸಂಕುಲದಿಂದ, ಹಾವುಗಳಿಂದ ತುಂಬಿರುವ ದಟ್ಟಾರಣ್ಯದ ಮೇಲೆ ಹರಡಿರುವ ಕತ್ತಲೆಯ ರಾಗ... ಕಲ ಕಲರವ ಗೈಯುತ್ತ ಹರಿಯುವ ನದಿ... ನಿದ್ರಿಸುತ್ತಿರುವ ಪಶು ಪಕ್ಷಿಗಳು.. ಹಿಂಸ್ರಪಶುಗಳು... ಹಿಮಪೂರಿತ ಛಳಿ, ಕವಿದಿರುವ ಮೋಡ... ಕತ್ತಲೆಯ ನಿಶ್ಯಬ್ದತೆ... ಇವೆಲ್ಲವುಗಳ ಒಂದು ಸಿಂಫನಿ....

ಈ ವರ್ಷ ಡಿಸೆಂಬರ್ ತಿಂಗಳಲ್ಲಿ ಕಾಡಿನ ಬದಿಯಲ್ಲಿರುವ ರೆಸ್ಟ್‌ಹೌಸ್‌ದ ಕಂಪೌಂಡಿನಲ್ಲಿ ಎಂದಿನಂತೆ ನಾನಾ ರೀತಿಯ ವೇಷಭೂಷಣದ ಜನ ಇದ್ದಾರೆ... ತಮ್ಮ

ತಮ್ಮ ಕಾರುಗಳಲ್ಲಿ ಇಂಗ್ಲೆಂಡಿನಿಂದ ಬಂದಿರುವ ಓರ್ವ ರಿಟೈಯರ್ಡ್ ಸೇನಾಧಿಕಾರಿ, ಆತನ ಮೇಮ, ಕೇಂಬ್ರಿಡ್ಜ್ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು... ಹಿಮಾಲಯದಲ್ಲಿರುವ ಸಸ್ಯಗಳ ಅಧ್ಯಯನಕ್ಕೆ ಬಂದಿದ್ದಾರೆ... ಕೆಲ ಯುರೋಪದ ತರುಣರು, ಇವರೆಲ್ಲ ಟೆಂಟಿನಲ್ಲಿ ವಾಸವಾಗಿದ್ದಾರೆ. ಕೆಲ ಅಂತರದಲ್ಲಿ ಸಣ್ಣ ಸಣ್ಣ ಡೇರೆಗಳಲ್ಲಿ ವಾಸವಾಗಿರುವ ಗುತ್ತಿಗೆದಾರರು, ಕೆಲಸದವರು ಕಂಪೌಂಡಿನಲ್ಲಿ ಹೊಸ ಹೊಸ ಕಟ್ಟಡ ಕಟ್ಟುತ್ತಿದ್ದಾರೆ. ಕೊರಬೆಟ್ ನ್ಯಾಷನಲ್ ಪಾರ್ಕದಲ್ಲಿ ಪ್ರವಾಸಿಗರ ಬರುಹೋಗುವ ಸಂಖ್ಯೆ ಹೆಚ್ಚುತ್ತಲೇ ಇದೆ.

ಮುಖ್ಯ ಮಾವುತ ಡಿನರದ ನಂತರ ಎಲ್ಲ ಆನೆಗಳನ್ನು ಓಡಿದು ತರುತ್ತಾನೆ. ಅವು ಮೊಣಕಾಲೂರಿ ಪಶ್ಚಿಮದಿಂದ ಬಂದಿರುವ ಪ್ರವಾಸಿಗರಿಗೆ ವಂದನೆ ಸಲ್ಲಿಸುತ್ತವೆ. ಅವರ ಹೆಂಗಸರು ಎಲ್ಲ ಆನೆಗಳಿಗೆ ಒಂದೊಂದು ಸಿಹಿಯಾದ ದಪ್ಪಗಿನ ರೊಟ್ಟಿಯನ್ನು ತಿನ್ನಿಸುತ್ತಾರೆ. ನಂತರ ಅವರು ತಮ್ಮ ತಮ್ಮ ಕೋಣೆಯೊಳಗೆ, ಡೇರೆಯೊಳಗೆ, ಕ್ವಾರ್ಟರ್ಸ್‌ಗಳಲ್ಲಿ, ಗುಡಿಸಲುಗಳಲ್ಲಿ ಹೋಗಿ ನಿದ್ರಿಸುತ್ತಾರೆ. ಬೆಳಗ್ಗೆ ರಾಮಗಂಗಾದಲ್ಲಿ ಸೂರ್ಯ ಹಣಿಕಿಕ್ಕುತ್ತಾನೆ... ಆಗ ಇಡೀ ಕಾಡು ಎಚ್ಚರವಾಗುತ್ತದೆ... ಜೀವಂತವಾಗಿರುವ ಜಿಂಕೆ ಮತ್ತು ಆಡು, ಸತ್ತ ಎಮ್ಮೆ (ಕೆಲವೊಮ್ಮೆ ಮನುಷ್ಯನ ಹೆಣಗಳು) ಹಸಿಮಾಂಸ, ಕ್ರಿಮಿ-ಕೀಟಗಳು ಬೇಯಿಸಿದ ತತ್ತಿಗಳು ಮತ್ತು ಟೋಸ್ಟ ಜಾಮ್, ಚಹಾ, ಕಾಫಿ, ಪುರಿಭಾಜಿ, ಪರೋತಾ ಅಥವಾ ಬೀರೊಟ್ಟಿಯ ಉಪಾಹಾರ ಮುಗಿಸಿ ತಮ್ಮ ತಮ್ಮ ದಿನ ಆರಂಭಿಸುತ್ತಾರೆ.

ಆಗ ಕಳ್ಳಹೆಜ್ಜೆಯಲ್ಲಿ ಮೂರ್ಖ ಕಂಪೌಂಡಿನಲ್ಲಿ ಬರುತ್ತಾನೆ. ಅವನು ಹೊಸ ಕಟ್ಟಡದ ಕೆಳಗೆ ಹೋಗಿ ನಿಲ್ಲುತ್ತಾನೆ. ರಾಮಪುರಿ ಬೇರಾ ಕೂಗಿಕೊಳ್ಳುತ್ತಾನೆ-"ಮೂರ್ಖ ಬಂದ" ಎಂದು. ಅಲ್ಲಿ ಆತ್ತಿತ್ತ ತಿರುಗಾಡುತ್ತಿರುವ ಮಿಸೆಸ್ ಫ್ರಿಮೆಂಟಲ್ ಹೇಳುತ್ತಾಳೆ - "ಹಲೋ ಬೊಡು ......... ಗುಡ್ ಮಾರ್ನಿಂಗ್." ಬ್ರಿಗೇಡಿಯರ್ ಫ್ರಿಮೆಂಟಲ್ ಗರ್ಜಿಸುತ್ತ "ಹಲೊ ಬೊಡು... ಓಲ್ಡ್ ರಾಸ್ಕಲ್..." ಎಂದರೆ ಅಮೇರಿಕನ್ ಪ್ರವಾಸಿ ಮುಗುಳ್ನಗುತ್ತ "ಹಾಯ್... ಬೊಡು..." ಎಂದರೆ, ಇನ್ನಾವುದೋ ಅಮೇರಿಕನ್ ಹುಡುಗಿ ಕೂಗುತ್ತಾಳೆ- "ಕೀವಟ್....?"

ಬುದ್ಧು (ಮೂರ್ಖ) ದಿನಕ್ಕೆ ಎರಡು ಸಲ ಕಂಪೌಂಡಿನಲ್ಲಿ ಬರುತ್ತಾನೆ. ಬೆಳಗ್ಗೆ ಉಪಾಹಾರ ಮಾಡುತ್ತಾನೆ ಹಾಗು ಹೊರಟು ಹೋಗುತ್ತಾನೆ... ರಾತ್ರಿ ಬಂದು ಊಟಮಾಡಿ ಮತ್ತೆ ಹೊರಟು ಹೋಗುತ್ತಾನೆ...

ಸಂಜೆಯಾಯಿತು. ಆ ಮಬ್ಬುಗತ್ತಲಲ್ಲಿ ಒಂದು ಹಸಿರು ಬಣ್ಣದ ಜೀಪ್ ಸ್ಟೇಷನ್ ವ್ಯಾಗನ್ ಬಂದು ಹೊಸ ಕಟ್ಟಡದ ಎದುರಿಗೆ ನಿಂತಿತು. ಇಬ್ಬರು ಗಂಡಸರು ಮತ್ತು ಓರ್ವ ಹೆಣ್ಣುಮಗಳು ಅದರೊಳಗಿಂದ ಇಳಿದರು. ಹೊಸ ರೆಸ್ಟ್‌ಹೌಸಿನ ಆಳುಗಳು ಓಡೋಡಿ ಬಂದು ಅವರ ಸಾಮಾನು ಇಳಿಸಿದರು, ಏಕೆಂದರೆ ಅವರು ವಿಶಿಷ್ಟ ಪ್ರವಾಸಿಗಳಾಗಿದ್ದರು ಎಂದೆನಿಸುತ್ತಿತ್ತು. ಅಮೇರಿಕನ್ ಮ್ಯಾಚಿಂಗ್ ಹೂ ಹೂವಿನ ಸೂಟಕೇಸ್, ಹೋಲ್ಡಾಲ್ ಮತ್ತು ಬ್ರಾತ್.. ಭರ್ಜರಿ ಪಿಕ್‌ನಿಕ್ ಬಾಸ್ಕೇಟ್.. ಅವರು ಮೂವರು ಸ್ವಾಗತಕಕ್ಷದಲ್ಲಿ ಪ್ರವೇಶಿಸಿದರು, ಅದರ ಒಂದು ಬದಿಯಲ್ಲಿ ಸುಸಜ್ಜಿತ, ಅಲಂಕೃತ ಬಾರ್ ಇತ್ತು. ಹುಡುಗಿ

ಕಣ್ಣೆತ್ತಿ ಬೇಸರದಿಂದ ಸುತ್ತಲೂ ನೋಡಿದಳು... ಆಕೆ ನೋಡಿದ ರೀತಿ ನೋಡಿದರೆ, ಆಕೆ ಕೇವಲ ಪಂಚತಾರಾ ಹೋಟಲಿನಲ್ಲಿದ್ದವಳೆಂದು ತೋರುತ್ತಿತ್ತು.

ಬಾರ್‌ನಲ್ಲಿ ಬ್ರಿಗೇಡಯರ್ ಫ್ರೀಮೆಂಟಲ್ ಒಬ್ಬನೇ ಕುಳಿತಿದ್ದ. ಹೊಸದಾಗಿ ಬಂದವರಲ್ಲಿ ಒಬ್ಬ ಬಾರ್‌ಸತ್ತ ಬಂದ. ಜೋಧಪೂರ ಡ್ರೆಸ್‌ನಲ್ಲಿದ್ದ ಅವನು, ತಲೆಯ ಮೇಲೆ ರುಮಾಲು, ಒಂದು ಕಿವಿಯಲ್ಲಿ ತೂತು, ಚೂಪಾದ ಮೀಸೆಗಳಿದ್ದವು... ಇಂಥ ಪಾತ್ರ ರುಹೇಲ್ ಖಂಡದ ಕಥಾಸಾಹಿತ್ಯದಲ್ಲಿ ಈಗಲೂ ಸಿಗುತ್ತವೆ. ಅವನು ಬೆರಳೆತ್ತಿ ಬೆಟ್ಟದ ಹುಡುಗನಿಗೆ ಹೇಳಿದ – "ಒಂದು ಬ್ರ್ಯಾಂಡಿ ಮತ್ತು ಸೋಡಾ." ಒಂದು ಚರ್ಮದ ಸ್ಟೂಲಿನ ಮೇಲೆ ಕುಳಿತ. ಕೆಲಕ್ಷಣಗಳ ನಂತರ ಅವನು ಬ್ರಿಗೇಡಿಯರ್‌ನ ಮೇಲೆ ದೃಷ್ಟಿ ಹಾಯಿಸಿದ, ತನ್ನತ್ತ ಅವನು ನೋಡುವಂತೆ ಮಾಡಲು ಪ್ರಯತ್ನಿಸಿದ. ಆದರೆ ಬ್ರಿಗೇಡಿಯರ್ ಅದನ್ನು ಎಳ್ಳಷ್ಟೂ ಗಮನಿಸಲಿಲ್ಲ. ಬಿಳಿತೊಗಲಿನ ಪಶ್ಚಿಮದ ವ್ಯಕ್ತಿಯಿದ್ದಾಗ ಹಿಂದುಸ್ತಾನಿ ಹೆಚ್ಚಾಗಿ ಅತ್ಯಂತ ವಿನಯಿಗಳಾಗಿ, ಸೋಬರ್ ಆಗಿ ವಿಚಿತ್ರವಾದ ದನಿಯಲ್ಲಿ, ಇಂಗ್ಲೀಷ ಮಾತಾಡತೊಡಗುತ್ತಾರೆ. ಅವರೊಂದಿಗೆ ಮಾತಾಡಿದ್ದಕ್ಕೆ ಅಭಿಮಾನ ಪಡುತ್ತಾರೆ... ಇಂಥ ಹೊತ್ತಿನಲ್ಲಿ ಪಾಶ್ಚಿಮಾತ್ಯರು ಮನಸ್ಸಿನಲ್ಲಿಯೇ ಇಂಥವರ ಬಗ್ಗೆ ನಗುತ್ತಾರೆ... ಮೋಜೆಂದರೆ ಇದೇ ಹಿಂದುಸ್ತಾನಿ ತನ್ನ ದೇಶದ, ತನ್ನವರೊಂದಿಗೆ ಬಹುತೇಕ ಒರಟಾಗಿ ವರ್ತಿಸುವ ಪರಿಪಾಠ ಹೊಂದಿರುತ್ತಾರೆ.

ಎರಡನೆಯವ ತೆಳ್ಳಗಿನ, ಕುಳ್ಳಗಿನ, ಬೋಳುದಲೆಯ ಕರಡಿ ಕಣ್ಣಿನ ಗುಡ್ಡಿಗಳನ್ನು ತುಂಬ ಸರಳವಾಗಿ ಅತ್ತಿತ್ತ ತಿರುಗಿಸುವವನು, ಮೆಲ್ಲಮೆಲ್ಲಗೆ ಮಾತಾಡುತ್ತಿದ್ದ ಮತ್ತು ರೆಸ್ಟಹೌಸ್‌ನ ಮ್ಯಾನೇಜರನೊಂದಿಗೆ ಮಾತುಗಳಲ್ಲಿ ತೊಡಗಿದ್ದ. ತರುಣಿ ಇನ್ನೂ ನಿಂತೇ ಇದ್ದಳು. ಆಕೆ ಯಾವಳೋ ಸಿನಿಮಾಸ್ಟಾರ್ ಇರಬೇಕೆನಿಸುತ್ತಿತ್ತು. ಅಥವಾ ಯಶಸ್ವೀ, ದುಬಾರಿ... ಫ್ಯಾಶ್‌ನೆಬಲ್, ಮಾಡಲ್, ಸುಂದರಿ, ಹೊಳೆವ ಬಣ್ಣದ, ಆರೋಗ್ಯವಂತ ಹಾಳತ ಎತ್ತರದ, ಮಾದಕತೆಯಿಂದ ತುಂಬಿದ ಕಣ್ಣಿನವಳಾಗಿದ್ದಳಾಕೆ.. ಆಕೆ ಬಹು ಬೆಲೆಯ ವಜ್ರ, ವೈಢೂರ್ಯದ ಆಭರಣಗಳನ್ನಿಟ್ಟಿದ್ದಳು. ಕುಳ್ಳವ್ಯಕ್ತಿ ವಯಸ್ಸಿನಲ್ಲಿ ಅವಳಿಗಿಂತ ಎರಡು ಪಟ್ಟು ಹೆಚ್ಚಿಗಿರಬೇಕು. ಕೆಲಕ್ಷಣಗಳ ನಂತರ ಅವರಿಬ್ಬರೂ ಮೇಲೆ ಹೋದರು. ಕಿವಿಯಲ್ಲಿ ತೂತಿದ್ದ ಮನುಷ್ಯ ಬಾರ್‌ನಲ್ಲಿ ಬ್ರ್ಯಾಂಡಿ ಕುಡಿಯುತ್ತಲಿದ್ದ. ಹೊರಗೆ, ಕಾಡಿನಲ್ಲಿ ಹುಲಿಗಳು ಗರ್ಜಿಸುವ ಶಬ್ದ ಕೇಳಿಬಂತು...

"ಅದ್ಭುತವಾದ ಈ ಟೈಗರ್ ಕಂಟ್ರಿ ಇನ್ನುಮುಂದೆ ಕಾಲಾಗಢ ಡ್ಯಾಮಿನಲ್ಲಿ ಮುಳುಗಿ ಹೋಗುತ್ತದಲ್ಲ–ಎಂದು ಚಿಂತೆ..." ಎಂದು ಕಿವಿಯಲ್ಲಿ ತೂತಿದ್ದ ಮನುಷ್ಯ ಹೇಳಿದ.

"ನನಗೂ ಬೇಸರವೆನ್ನಿಸುತ್ತದೆ, ಈ ವಿಷಯ ಕೇಳಿ..." ಎಂದು ಬ್ರಿಗೇಡಿಯರ್ ಸಂಕ್ಷಿಪ್ತವಾಗಿ ಉತ್ತರಿಸಿದ...

"ನಾನು ದೊಡ್ಡ ದೊಡ್ಡ ಬೇಟೆಯಾಡುವ ಸ್ಥಳಕ್ಕೆ ಶಿಕಾರಿಗಳನ್ನು ಕರೆದೊಯ್ಯುತ್ತೇನೆ... ಆ ಕಾಲ ಈಗ ಹೊರಟು ಹೋಯಿತು... ತಾವು?"

"ಮೀನದ ಬೇಟೆಯಾಡಲು ಪ್ರತಿವರ್ಷ ಇಂಗ್ಲೆಂಡಿನಿಂದ ಇಲ್ಲಿಗೆ ಬರುತ್ತೇನೆ..." ಎಂದು ಬ್ರಿಗೇಡಿಯರ್ ಉತ್ತರಿಸಿದ.

"ತಮಗೆ ನನ್ನಿಂದ ಏನಾದರೂ ಸೇವೆಯ ಅವಶ್ಯಕತೆಯಿದ್ದರೆ ಹೇಳಿ. ನಾನು ಸಿದ್ಧನಿದ್ದೇನೆ" ಕಿವಿಯಲ್ಲಿ ತೂತಿದ್ದ ಮನುಷ್ಯ ಹೇಳಿದ...

"ಇಲ್ಲ... ಏನೂ ಇಲ್ಲ... ನಾನು ಉಪಕೃತ..." ಎಂದು ಬ್ರಿಗೇಡಿಯರ್ ಬೇಸರದಿಂದ ಉತ್ತರಿಸಿದ.

ಹೊರಗೆ ರಾತ್ರಿಯ ದನಿಗಳು ಹೆಚ್ಚುತ್ತಲಿದ್ದವು. ೧೫-೨೦ ನಿಮಿಷಗಳು ಕಳೆದು ಹೋದವು. ಕಿವಿಯಲ್ಲಿ ತೂತಿದ್ದ ವ್ಯಕ್ತಿ ಬ್ರಿಗೇಡಿಯರನನ್ನು ದಿಟ್ಟಿಸಿ ನೋಡುತ್ತಲಿದ್ದ... ಅವನ ಕಣ್ಣು... ಕೇವಲ ಒಂದು ಕಣ್ಣು.. ಕೆಂಪಗಾಗಿತ್ತು.

"ಸಸ್ಯಶ್ಯಾಮಲೆಯ ಈ ಭಾಗ ತುಂಬ ರೋಮ್ಯಾಂಟಿಕ್ ಭಾಗವಾಗಿದೆ..." ಎಂದು ಅವನೆಂದ... ಮತ್ತೆ -"ಒಂದು ವೇಳೆ ತಾವು ..." ಬ್ರಿಗೇಡಿಯರ್ ಯೋಚಿಸಿದ, ಸ್ಟೂಲ್ ಮೇಲಿಂದ ಎದ್ದ, ಚುರುಟ ಹಚ್ಚಿದ ಮತ್ತು ಅವನಿಗೆ "ಗುಡ್ ನೈಟ್" ಹೇಳುತ್ತ ಅಲ್ಲಿಂದ ಹೊರಟು ಹೋದ.

ಕಿವಿಯಲ್ಲಿ ತೂತಿದ್ದ ವ್ಯಕ್ತಿ ಬಾರ್ ಕೌಂಟರಿನ ಮೇಲೆ ತಬಲಾ ಬಾರಿಸಲಾರಂಭಿಸಿದ. ಅವನು ಬ್ರ್ಯಾಂಡಿ ಗ್ಲಾಸ್ ಖಾಲಿಮಾಡಿದ ಹಾಗೂ ಬಾರ್‌ಮನ್‌ನಿಗೆ ಹೇಳಿದ-"ಬಿಲ್ ಮೇಲೆ ಕಳಿಸು. ಅವರ ಕೋಣೆಯ ನಂಬರ್ ಏನಿದೆ...? ಬಿಲ್ ಸಾಹೇಬರಿಗೆ ಕಳಿಸು... ಮೇಮಸಾಬರೊಂದಿಗೆ ಬಂದಿದ್ದಾರಲ್ಲ... ಅವರಿಗೆ... ಮೇಲೆ ಹೋಗಲು ಸ್ಟೇರಕೇಸ್ ಎಲ್ಲಿದೆ...?" ಬಾರ್‌ಮೆನ್ ದಾರಿ ತೋರಿಸಿದ.

ಮೇಲೆ ಹೋಗಿ ಈ ಮನುಷ್ಯ ಒಂದು ಕೋಣೆಯ ಬಾಗಿಲು ಬಡಿದ. ಒಳಗಿನಿಂದ "ಬಾ" ಎಂದು ಬುಲಾವ್ ಬಂತು. ಬಾಗಿಲು ಒಳಗಿನಿಂದ ಹಾಕಿಕೊಂಡಿರಲಿಲ್ಲ... ದಬ್ಬಿದ ... ಒಳಗೆ ಹೋದ... ತರುಣಿ ಪಲ್ಲಂಗದ ಮೇಲೆ ಅಡ್ಡಾಗಿ ಜಿಮ್ ಕೋರಬಟ್‌ನ- "ಕುಮಾಯುದಲ್ಲಿಯ ನರಭಕ್ಷಕ" ಗ್ರಂಥದ ಪುಟ ತಿರುವುತ್ತಿದ್ದಳು... ಪ್ರವಾಸಿಕರಿಗಾಗಿ ಈ ಗ್ರಂಥವನ್ನು ಪ್ರತಿಯೊಂದು ಕೋಣೆಯಲ್ಲಿರಿಸಲಾಗಿರುತ್ತಿತ್ತು... ಕುಳ್ಳಗಿನ ವ್ಯಕ್ತಿ ಇನ್ನೊಂದು ಪಲ್ಲಂಗದ ಮೇಲೆ ಮಲಗಿ ಛತ್ ನೋಡುತ್ತಲಿದ್ದ... ಅವನು ಬಂದವನಿಗೆ "ಹೋಗು" ಎಂದು ಗದರಿಸಿದ...

"ಸರಿ. ಹೋಗುತ್ತೇನೆ... ನಾನು ರಾತ್ರೋ ರಾತ್ರಿ ಇಲ್ಲಿಂದ ಹೊರಟು ಹೋಗುತ್ತೇನೆ... ತಾವು ನನಗೆ ನಜೀಬ ಆಬಾದ..."

"ಹೋಗು" ಆ ಕುಳ್ಳ ಮನುಷ್ಯ ಅವನ ಮಾತಿನ ಮಧ್ಯದಲ್ಲಿಯೇ ಮತ್ತೊಮ್ಮೆ ಗದರಿಸಿದ...

"ಗುಡ ನೈಟ್" ಎಂದು ಹೇಳಿದ ಆ ಕಿವಿಯಲ್ಲಿ ತೂತಿದ್ದ ವ್ಯಕ್ತಿ ತರುಣಿಯನ್ನು ಕುರಿತು ಹೇಳಿದ- "ಆದಿತ್ಯವಾರ ಬೆಳಗ್ಗೆ ಬರುತ್ತೇನೆ... ಸಿದ್ಧವಾಗಿರು..."

"ಹೋಗು..." ಮತ್ತೆ ಆ ಕುಳ್ಳ ಗರ್ಜಿಸಿದ...

ಕಿವಿ ತೂತಿದ್ದ ವ್ಯಕ್ತಿ ಅವನಿಗೆ ಬಾಗಿ ಸಲಾಮ ಮಾಡಿದ ಹಾಗೂ ಅಲ್ಲಿಂದ ಹೊರಗೆ ಹೊರಟು ಹೋದ...

ಕುಳ್ಳವ್ಯಕ್ತಿ ಎದ್ದು ಒಂದು ಸೂಟ್‌ಕೇಸ್ ತೆರೆದ. ಅದರಲ್ಲಿಂದ ಚರ್ಮದ ಪಟ್ಟಿಗೆ ತೆಗೆದ ಮತ್ತು ಒಂದು ಚಾಬುಕ... ಅವನು ಅವೆರಡನ್ನೂ ತರುಣಿಯತ್ತ ಎಸೆದ ಹಾಗೂ ಬಾಗಿಲು ಒಳಗಿನಿಂದ ಹಾಕಿಕೊಂಡ...

ಬೆಳಗ್ಗೆ ಮಿಸೆಸ್ ಫ್ರೀಮೆಂಟಲ್, ಬಟ್ಟೆ ತೊಳೆದು ಹರವುತ್ತಿದ್ದಳು. ಅವಳ ಗಂಡ ಅಲ್ಲಿಯೇ ಸಮೀಪದಲ್ಲಿ ಕುರ್ಚಿಯ ಮೇಲೆ ಕುಳಿತು ಪೇಪರ್ ಓದುವುದರಲ್ಲಿ ಮಗ್ನನಾಗಿದ್ದ. ಆಕೆ ತನ್ನಲ್ಲಿಯೇ ಅಂದುಕೊಂಡಳು- "ಪುವರ್ ಗರ್ಲ್... ಪುವರ್ ಥಿಂಗ್..." ಬ್ರಿಗೇಡಿಯರ್ ಮೌನವಾಗಿಯೇ ಇದ್ದ.

"ಇಂಡಿಯನ್ ಎಳೆಯ ವಧು... ಬಡಪಾಯಿ... ನಾವು ಅವಳಿಗಾಗಿ ಏನನ್ನಾದರೂ ಮಾಡಲಾರೆವೆ ಹೆನ್ರಿ...?"

"ಏನು ಡೋರಸ್...?" ಬ್ರಿಗೇಡಿಯರ್ ಕೊಂಚ ಬೇಸರದಿಂದ ಗಾಬರಿಯಾಗಿಯೇ ಕೇಳಿದ.

"ಆ ತರುಣಿ, ಬಡಪಾಯಿ ನಿನ್ನೆ ರಾತ್ರಿ ಇಲ್ಲಿಗೆ ಬಂದಿದ್ದಾಳೆ... ಅವಳು ಬೆಳಿಗ್ಗೆ ಶಾಲು ಹೊದ್ದು ಅಲ್ಲಿ ಶತಪಥ ಮಾಡುತ್ತಿದ್ದಳು... ಸೀರೆಯ ಕೆಳಗೆ ಬೆನ್ನ ಮೇಲೆ ಚಾಬುಕದ, ಬರೆ ಎಳೆದ ಹಾಗಿನ ಗುರುತುಗಳಿದ್ದವು... ಅವಳ ಗಂಡ ಅವಳನ್ನು ಹೀಗೆ ಹೊಡೆಯುತ್ತಾನೆ... ಏನು ನಾವು..."

"ಮೈಡಿಯರ್ ಡೋರಸ್... ನಾವು ಇನ್ನೊಬ್ಬರ ವಿಷಯದಲ್ಲಿ ಈ ರೀತಿ ಮಧ್ಯ ಪ್ರವೇಶಿಸುವುದು ಸರಿಯಲ್ಲ..."

"ಆದರೆ ಹೆನ್ರಿ..."

ಬೆಳಗಿನ ಹನ್ನೊಂದು ಗಂಟೆಗೆ ತರುಣಿ ತನ್ನ ಕೋಣೆಯಲ್ಲಿ ಡ್ರೆಸ್ಸಿಂಗ್ ಟೇಬಲ್ಲಿನೆದುರು ಕುಳಿತು ಸಿಂಗಾರಗೊಳ್ಳುತ್ತಿದ್ದಳು... ಅವನು ಸಫಾರಿ ಸೂಟ್ ಹಾಕಿಕೊಂಡಿದ್ದ. ತುಂಬ ಷೋಕಿ ಮನುಷ್ಯನಾಗಿದ್ದ. ಕೂದಲುಗಳಿಗೆ ಸ್ವಿಸ್ ಪೇಂಟನ್ ಹಚ್ಚಿಕೊಳ್ಳುತ್ತ ಕುಣಿಯುತ್ತ, ಕುಪ್ಪಳಿಸುತ್ತ ಹಾಡುತ್ತಲಿದ್ದ- "ಮನಸ್ಸು ಜಂಗಲದಲ್ಲಿಯೇ ಸುಖ ಅನುಭವಿಸುತ್ತದೆ, ಇಲ್ಲಿ ಸೌಂದರ್ಯದ ಮೇಲೆ ಪ್ರೇಮ ಇಮ್ಮಡಿ ಯಾಗುತ್ತದೆ..."

ತರುಣಿ ಆಸಕ್ತಿಯಿಂದ ಆ ಹಾಡು ಕೇಳುತ್ತಿದ್ದಳು....

"ಈ ಹಾಡು, ನೀನು ಹುಟ್ಟಿರಲಿಲ್ಲ ಇನ್ನೂ, ಆ ಕಾಲದ್ದು..." ಅವನು ಕ್ಯಾಮರಾ ಮತ್ತು ದುರ್ಬಿನ್ ಎತ್ತಿಕೊಳ್ಳುತ್ತ ಅವಳಿಗೆ ಹೇಳಿದ.

ಇಬ್ಬರೂ ಹೊರಗೆ ಬಂದರು. ಬಾಗಿಲಿಗೆ ಕೀಲಿ ಹಾಕಿದರು. ಕೆಳಗೆ ಇಳಿದರು ಮತ್ತು ಆನೆ ನಿಲ್ಲುವ ಕಟ್ಟೆಯ ಹತ್ತಿರಕ್ಕೆ ಹೋದರು. ಪಾವಟಿಗೆ ಏರಿ ಪ್ಲ್ಯಾಟ್ ಫಾರ್ಮ ಮೇಲೆ ತಲುಪಿ, ಅಲ್ಲಿದ್ದ ಹೆಣ್ಣಾನೆಯ ಮೇಲೆ ಹತ್ತಿದರು. ಅದು ಪ್ಲ್ಯಾಟಫಾರ್ಮಗೆ ಹತ್ತಿ ಕಾರಿನ ಹಾಗೆ ನಿಂತಿತ್ತು.

ಅಂಬಾರಿಯಲ್ಲಿ ಕುಳಿತು ತರುಣಿ ಕಿಲ ಕಿಲ ಎಂದು ನಕ್ಕು. ನಗೆಯ ಬುಗ್ಗೆ ಚಿಮ್ಮಿಸಿದಳು. ಆಕೆ ಮಗುವಿನ ಹಾಗೆ ಸಂತೋಷ ಅನುಭವಿಸುತ್ತಿದ್ದಳು. ಆ ಎಳೆ ಬಿಸಿಲಿನಲ್ಲಿ ಆಕೆ ತೊಟ್ಟ ವಜ್ರ ಖಚಿತ ಆಭರಣಗಳು ಮಿರಿ ಮಿರಿ ಹೊಳೆಯುತ್ತಿದ್ದವು. ಹೊಲಸಾದ ಬಾಕಿಕೋಟ್ ಹಾಕಿಕೊಂಡಿದ್ದ ಮಾವುತ ಅಂಕುಶ ಹಿಡಿದು ಆನೆಯನ್ನು ಮೆಲ್ಲಗೆ ಚಪ್ಪರಿಸಿದ– "ನಡೆ... ಬೇಟಾ ರಾಮಕಲಿ... ಬಿಸ್ಮಿಲ್ಲಾಹ್.."

ರಾಮಕಲಿ ಗೇಟಿನತ್ತ ಹೊರಟಿತು.

ಕಂಪೌಂಡಿನಿಂದ ಹೊರಹೊರಟು, ಅದು ರಾಮಗಂಗಾದ ಹೆಚ್ಚು ಆಳವಲ್ಲದ ಸ್ಥಳದಿಂದ ಹೊರಟು, ಜಂಗಲಿನತ್ತ ಹೊರಟಿತು. ತರುಣಿ ತುಂಬ ಖುಷಿಯಿಂದ ದುರ್ಬಿನ್ ಹಿಡಿದು ಸುತ್ತಲೂ ನೋಡುತ್ತಲಿದ್ದಳು. ಆಕೆ ಮತ್ತೆ ಮತ್ತೆ ಆ ಕುಳ್ಳನಿಗೆ ಹೇಳುತ್ತಿದ್ದಳು–"ಅದು...ಅದು...ಅಲ್ಲಿ ನವಿಲು...ಅರೇ ಅಲ್ಲಿ ಸಾರಂಗ... ಮೈ ಗಾಡ್... ಐಷ್ಶೊ ಏನೇನೋ... ಓ! ಅದೆಷ್ಟು ದೊಡ್ಡದಾದ ಮೊಸಳೆ... ಅಲ್ನೋಡು... ಅದೇನು ಮಾವುತ...?"

"ಸಾರಂಗ...ಮೇಮ್‌ಸಾಬ...ಮಾತಾಡಬೇಡಿ...ಸಪ್ಪಳ ಕೇಳಿದರೆ ಸಾಕು, ಎಲ್ಲ ಪ್ರಾಣಿಗಳು ಮಾಯವಾಗಿ ಬಿಡುತ್ತವೆ..."

ರಾಮಕಲಿ ಜಂಗಲ್‌ದ ಒಳಗಡೆ ತಲುಪಿತು... ಅಲ್ಲಿ ಗಿಡಗಳ ಟೊಂಗೆಗಳಿಗೆ ಅಸಂಖ್ಯಾತ ಪಕ್ಷಿಗಳ ಗೂಡುಗಳು ಕಂದೀಲಿನ ಹಾಗೆ ಇಳಿಬಿದ್ದಿದ್ದವು..ದೂರದಲ್ಲಿ ಇನ್ನೆರಡು ಆನೆಗಳು ಬರುತ್ತಿರುವುದು ಆಕೆಗೆ ಕಾಣಿಸಿತು... ಅವುಗಳ ಮೇಲೆ ಕೇಂಬ್ರಿಡ್ಜ್‌ದಿಂದ ಬಂದಿದ್ದ ಇಂಗ್ಲೀಷ ವಿದ್ಯಾರ್ಥಿಗಳು ಇದ್ದರು...

ಜಂಗಲ್‌ದ ಒಂದು ಭಾಗದ ಸುತ್ತ ಸುತ್ತಿ ರಾಮಕಲಿ ಮರಳಿ ಹೊರಟಿತು... ರೆಸ್ಟ್ ಹೌಸ್ ತಲುಪಿದಾಗ ಮಾವುತನಿಗೆ ತರುಣಿ ಇಪ್ಪತ್ತು ರೂಪಾಯಿ ಭಕ್ಷಿಸ್ ಕೊಟ್ಟಳು. ಇಡೀ ಕಂಪೌಂಡಿನಲ್ಲಿ ತರುಣಿಯ ಉದಾರ ಮನಸ್ಸು ಆಗಲೇ ಪ್ರಸಿದ್ಧವಾಗಿತ್ತು. ಓರ್ವ ಬೇರಾ ಅವಳನ್ನು ಸಂತೋಷಗೊಳಿಸಲು ಮುಂದೆ ಬಂದು ಹೇಳಿದ– "ಅಲ್ನೋಡಿ... ಮೇಮಸಾಬ ಬುದ್ಧು ಬಂದ..."

"ಬುದ್ಧು...? ಅದನ್ನು ಹೋಗಲು ಬಿಡಬೇಡಿ. ನಾನು ಅದಕ್ಕೆ ನನ್ನ ಕೈಯಿಂದ ಊಟ ಮಾಡಿಸುವೆ..." ಎಂದು ಹೇಳುತ್ತ ತರುಣಿ ಡೈನಿಂಗ್‌ಹಾಲ್ ಕಡೆಗೆ ಹೋದಳು. ತರುಣಿ, ಜಂಗಲ್‌ದಲ್ಲಿ ತುಂಬ ಖುಷಿಯಿಂದ ಇದ್ದಳು. ಈಗ ಅದೇಕೊ ಬೇಸರದಿಂದ ಊಟ ಮಾಡುವಲ್ಲಿ ಮಗ್ನಳಾಗಿದ್ದಳು.

ಅಲ್ಲಿ ಆಗ ಕೇವಲ ಒಂದು ಫ್ಯಾಮಿಲಿ ಮಾತ್ರ ಇತ್ತು. ತರುಣಿ ಬೇಸರದಿಂದ ಅವರನ್ನು ನೋಡಿದಳು. ಹೆಂಡತಿಯ ತಲೆಯಲ್ಲಿ ಎಣ್ಣೆ ಜಿಗಿಯಾಗಿ ಕಟ್ಟಿದ ಜಡೆ, ಕೆಟ್ಟದ್ದಾದ ಒಂದು ನೈಲಾನ್ ಸೀರೆ. ಬಂಗಾರದ ಬಳೆಗಳು, ಬೈತಲೆಯಲ್ಲಿ ಕುಂಕುಮ, ಹಣೆಯ ಮೇಲೆ ಪ್ಲ್ಯಾಸ್ಟಿಕ್‌ದ ನೀಲಿ ಬಿಂದಿ. ಹುಡುಗರು ಪೇಟೆಯಲ್ಲಿ ಹೊಲಿದ 'ಬಾಬಾಸೂಟ' ಹಾಕಿದ್ದವು. ಗಂಡನ ಕೈಯಲ್ಲಿ 'ಧರ್ಮಯುಗ'ದ ಆ ವಾರದ ಪತ್ರಿಕೆಯಿತ್ತು. ಅವರೆಲ್ಲರೂ ಸುಸ್ತಾಗಿ, ಬೇಜಾರಾಗಿ ಕುಳಿತಿದ್ದರು.

ಬೇರಾ ಊಟ ಬಡಿಸಿದ. ಅವನು ರಾಮಪುರದಿಂದ ಬಂದವನಾಗಿದ್ದ. ಅವನು ನೋಡಲು ಅಹ್ಮದಜಾನ್ ಥಿರಕ್ವಾನ ಅಣ್ಣನಂತೆ ಕಾಣುತ್ತಿದ್ದ. ಜೀವನ ತುಂಬ ವರ್ಣಹೀನ, ಬೇಸರದ ನಾಚಿಕೆಯಿಂದ ಕೂಡಿದ್ದಾಗಿದೆ.

ಊಟದ ನಂತರ ಆಕೆ ಪ್ಲೇಟ್ ತೆಗೆದುಕೊಂಡು ಬುದ್ಧಗೆ ಊಟ ಮಾಡಿಸಲು ಹೊರಗೆ ಬಂದಳು. ಆಕೆ ಅಲ್ಲಿಂದ ಹಾಗೆಯೇ ನಡೆಯುತ್ತ ನದಿಯತ್ತ ಹೊರಟು ಹೋದಳು. ದಾರಿಯಲ್ಲಿ ಅವಳಿಗೆ ಆ ಪ್ಲ್ಯಾಸ್ಟಿಕ್ ಬಿಂದಿ ಇಟ್ಟ ಹೆಂಡತಿ ಸಿಕ್ಕಳು. ಆಕೆ, ಆಕೆಯನ್ನು ದಿಟ್ಟಿಸಿ ನೋಡಿದಳು. ಆಕೆ ಮುಗುಳ್ನಕ್ಕಳು... ಈಕೆಯೂ ನಿರುಪಾಯಳಾಗಿ ಮುಗುಳ್ನಕ್ಕಳು... ತರುಣಿ ಆಕೆಯೊಂದಿಗೆ ಮಾತಾಡತೊಡಗಿದಳು...

ಆಕೆ ಕೇಳಿದಳು–
"ಯಾವ ಜಾತಿ ನಿಮ್ಮದು?"
"ಬ್ರಾಹ್ಮಣ..." ಆಕೆ ಉತ್ತರಿಸಿದಳು...
"ಹೆಸರೇನು....?"
"ಬನದೇವಿ..." ಎಂದಳಾಕೆ.
"ಅವನು ನಿನ್ನ ಗಂಡನೇನು...?"
"ನಿಮಗೆ ಹೇಗನ್ನಿಸುತ್ತದೆ...?" ಎಂದು ತರುಣಿ ನಗುತ್ತ ಕೇಳಿದಳು.
ಅವಳು ಹುಬ್ಬೇರಿಸಿ ಮುಂದಕ್ಕೆ ಹೋದಳು....

ಕಂಪೌಂಡ್‌ದಿಂದ ಹೊರ ಹೊರಟು, ಹೊಸ ಕಟ್ಟಡ ಕಟ್ಟುವವರ ಡೇರೆಯಿದ್ದ ಕಡೆ ಹೋದಳು. ಅವರೆಲ್ಲ ಕಾಡಿನಂಚಿನಲ್ಲಿ ನಮಾಜ ಮಾಡುವಲ್ಲಿ ನಿರತರಾಗಿದ್ದರು. ಒಲೆಯ ಮೇಲೆ ಕೋಳಿ ಮಾಂಸದ ಅಡಿಗೆ ನಡೆದಿತ್ತು. ಓರ್ವ ಬಂದು ಸಲಾಮ್ ಮಾಡಿ ಕೇಳಿದ– "ಮೇಮಸಾಬ, ಹೇಳಿ, ಏನು ಬೇಕಿತ್ತು...?"

"ಏನೂ ಇಲ್ಲ.... ಹೀಗೆಯೇ ಬಂದಿದ್ದೆ...ಏನು ಅಡಿಗೆ ನಡೆದಿದೆ...?"

"ಬಿಸ್ಮಿಲ್ಲಾ ಮಾಡಿ...ಏ...ದಿಲಾವರ...ಮೇಮಸಾಬರಿಗೆ ಜರದಾ ತೆಗೆದುಕೊಂಡು ಬಾ..." ಎನ್ನುತ್ತ ಅವನು ಕುರ್ಚಿ ತಂದಿತ್ತ. "ನಾವು ಜಂಬೂರದಿಂದ ಬಂದಿದ್ದೇವೆ. ವರ್ಷದಿಂದ ಈ ಜಂಗಲಿನಲ್ಲಿದ್ದೇವೆ... ಕೆಲಸ ಮುಗಿದ ನಂತರ ಮರಳಿ ಊರಿಗೆ ಹೋಗುತ್ತೇವೆ."

"ಪ್ರಸಾದ ಬಟ್ಟಲದಲ್ಲಿದ್ದುದನ್ನು ಕೊಡಬೇಡ..." ಎಂದು ಓರ್ವ ಸುಂದರ ಹೆಂಗಸು ಹುಡುಗನಿಗೆ ಮೆಲ್ಲಗೆ ಹೇಳಿದಳು. ಆದರೂ ತರುಣಿ ಕೇಳಿಸಿಕೊಂಡಳು...

ದಿಲಾವರ ಹೂಗಳ ಚಿತ್ತಾರವಿರುವ ಚೀನಿ ಪ್ಲೇಟಿನಲ್ಲಿ ಜರದಾ ತೆಗೆದುಕೊಂಡು ಬಂದ. ತರುಣಿ ಮುಗುಳ್ನಗುತ್ತ ಕೇಳಿದಳು–

"ಯಾರ ಪ್ರಸಾದ...?"

"ದೊಡ್ಡ ಮಹಾತ್ಮರದು..." ಎಂದು ಹುಡುಗ ಉತ್ತರಿಸಿದ.

ತರುಣಿ ಜರದಾದ ರುಚಿ ನೋಡಿದಳು... ಹಾಗೂ ಇಪ್ಪತ್ತು ರೂಪಾಯಿ ನೋಟೊಂದನ್ನು ದಿಲಾವರನ ಕೈಯಲ್ಲಿರಿಸಿದಳು...

"ಆದಾಬ ಅರ್ಜ ಮೇಮಸಾಬ..." ಗುತ್ತಿಗೆದಾರ ತುಂಬ ವಿನಯದಿಂದ ಹೇಳಿದ.

"ವಾಲೆಕುಮ್ ಅಲ್‌ಸಲಾಮ್...." ಎಂದು ಉತ್ತರಿಸಿದ ಆಕೆ ಕಂಪೌಂಡಿನತ್ತ ಮರಳಿದಳು. ಬಂಜೂರಿಗಳು ಆಶ್ಚರ್ಯದಿಂದ ಪರಸ್ಪರರನ್ನು ನೋಡಿದರು.

ಮೂರನೆಯ ದಿನ ಬೆಳಿಗ್ಗೆ... ಬ್ರಿಗೇಡಿಯರ್ ಬಿಸಿಲಿನಲ್ಲಿ ಕುಳಿತು ಪೇಪರ್ ಓದುತ್ತಿದ್ದ. ಕುಳ್ಳ ವ್ಯಕ್ತಿ ಬಡಬಡ ಅವನಲ್ಲಿಗೆ ಬಂದು ಹೇಳಿದ–

"ನಾನು, ಅವಸ್ಯ ಕೆಲಸದಿಂದಾಗಿ ಪಟ್ಟಣಕ್ಕೆ ಹೋಗುತ್ತಿದ್ದೇನೆ. ರಾತ್ರಿ ಮರಳುತ್ತೇನೆ... ಅಥವಾ ನಾಳೆ ಬೆಳಿಗ್ಗೆ. ತಾವು ಮತ್ತು ತಮ್ಮ ಮಿಸೆಸ್ ನನ್ನ ಹೆಂಡತಿಯ ಬಗ್ಗೆ ಕಾಳಜಿ ವಹಿಸಿ..." ತನ್ನ ಜೀಪ ಸ್ಟೇಷನ್ ವ್ಯಾಗಿನ್‌ದಲ್ಲಿ ಕುಳಿತು ಗೇಟಿನಿಂದ ಹೊರಗೆ ಹೋದ.

ಮಿಸೆಸ್ ಫ್ರಿಮೆಂಟಲ್– "ಅಸಭ್ಯ ಮನುಷ್ಯ... ಹೂವಿನಂಥ ಹುಡುಗಿಯನ್ನು ಹೊಡೆಯುತ್ತಾನೆ... ಆ ಬಡಪಾಯಿಯ, ಬಡ ತಾಯಿ–ತಂದೆಗಳು ಹಣಕ್ಕಾಗಿ ಅವನಿಗೆ ಇವಳನ್ನು ಮಾರಿರಬೇಕೆಂದು ನನಗೆ ಖಚಿತವೆನಿಸುತ್ತದೆ... ಪೂರ್ವದೇಶದಲ್ಲಿ ಇದು ಸಾಮಾನ್ಯವಾಗಿ ನಡೆಯುತ್ತದೆ..."

ಬುದ್ಧು ಬಂದು ಕುರ್ಚಿಯ ಪಕ್ಕದಲ್ಲಿ ನಿಂತಿತು. ಮಿಸೆಸ್ ಫ್ರಿಮೆಂಟಲ್ ಪ್ರೀತಿಯಿಂದ ಅದರ ಮುಖದ ಮೇಲೆ ಕೈಯಾಡಿಸಿದಳು. ಅದೊಂದು ಅಡವಿ ಹಂದಿ ಯಾಗಿತ್ತು. ಜಂಗಲಿನೊಳಗಿಂದ ಬರುತ್ತಿತ್ತು. ಕೊಟ್ಟಿದ್ದನ್ನು ತಿಂದು ಮತ್ತೆ ಅಡವಿಯೊಳಕ್ಕೆ ಹೋಗುತ್ತಿತ್ತು ಅಲ್ಲಿ. ಕಂಪೌಂಡಿನಲ್ಲಿರುವವರು ಅದಕ್ಕೆ 'ಬುದ್ಧು' ಎಂದು ಹೆಸರಿಟ್ಟಿದ್ದರು.

ತರುಣಿ ರೆಸ್ಟ್‌ಹೌಸ್‌ನಿಂದ ಬಂದಳು– "ಗುಡ್‌ಮಾರ್ನಿಂಗ್" ಎನ್ನುತ್ತ ಕುರ್ಚಿಯ ಮೇಲೆ ಕುಳಿತಳು.

"ನೋಡು, ಜಂಗಲ್‌ದ ಒಳ್ಳೆಯ ಪಬ್ಲಿಕ್ ರಿಲೇಷನ್ಸ್ ಆಫೀಸರ್ ಆಗಿದೆ. ಅಲ್ಲಿಯ ಈ ಪ್ರತಿನಿಧಿ, ಮನುಷ್ಯರ ಜಂಗಲ್‌ನೊಂದಿಗೆ ಸಂಬಂಧವಿರಿಸುತ್ತದೆ..." ಎಂದು ಬ್ರಿಗೇಡಿಯರ್ ಹೇಳಿದ.

"ಆ ಜಂಗಲ್ ಒಳಗೆ ಹೇಗಿದೆಯೋ...?" ತರುಣಿ ಹೇಳಿದಳು.

"ನೀನು ಅದನ್ನು ಒಳಗೆ ಹೋಗಿ ನೋಡಿ ಬಂದಿರುವೆಯಲ್ಲ..."

"ಹೌದು, ಆದರೆ ಅತ್ಯಂತ ಒಳಗೆ ಹೋಗಿ ನೋಡಲಿಲ್ಲ..."

"ಅದರೊಳಗೆ ವಾಸಿಸುವವರಂತೆಯೇ ಅದೂ ಇರುತ್ತದೆ... ನಮಗೆ ಹೇಗೆ ನಮ್ಮ ಜಗತ್ತಿದೆಯೋ ಹಾಗೆ.. ನಾವು ಮತ್ತು ಜಪಾನಿ ಬರ್ಮಾದ ಜಂಗಲಿನಲ್ಲಿ ಯುದ್ಧ ಮಾಡುತ್ತಿದ್ದಾಗ ನಾವೆಲ್ಲ ಹಿಂಸ್ರ ಪ್ರಾಣಿಗಳಂತಾಗಿದ್ದೆವು..."

ಹಿಂದಿನ ಒಂದು ದಿನದಿಂದ ಈ ಸ್ನೇಹಮಯಿಯಾದ ತರುಣಿಯೊಂದಿಗೆ ಈ ದಂಪತಿಗಳ ಸಂಬಂಧ ತುಂಬ ಬೆಳೆದಿತ್ತು. ಮಿಸೆಸ್ ಫ್ರಿಮೆಂಟಲ್ ಹೊರಗೆ ಹೋದಳು...

"ನಾನು, ನಿಮ್ಮ ಊಟದ ಸಮಯದವರೆಗೂ ನಿಮ್ಮೊಂದಿಗೆ ಕೂಡಬಹುದೇ...?" ಎಂದು ತರುಣಿ ಬ್ರಿಗೇಡಿಯರ್‌ನನ್ನು ಕೇಳಿದಳು.

"ಹಾಂ! ಹಾಂ... ನಿನ್ನ ಗಂಡನೂ ನಮಗೆ ಹೇಳಿ ಹೋಗಿದ್ದಾನೆ..." ಅವಳು ನಕ್ಕಳು. "ಅವನು ನನ್ನ ಗಂಡನಲ್ಲ... ನಾನು ಕಲಕತ್ತಾದಲ್ಲಿ ರೇಸಕೋರ್ಸ್‌ದಲ್ಲಿ ಅವನನ್ನು ಭೇಟಿಯಾಗಿದ್ದೆ. ಅವನೊಬ್ಬ ಶ್ರೀಮಂತ....ಸಂಸಾರವೊಂದಿಗ...ಹೆಂಡತಿ, ಮಕ್ಕಳು ಮರಿಗಳಿವೆ...ಆದರೆ ಪರವರಟೆಡ್...ನಾನು ಆರು ತಿಂಗಳಿನಿಂದ ಅವನೊಂದಿಗಿರುವೆ. ಆದರೆ ಈಗೀಗ ತುಂಬ ಬೋರಾಗಿದೆ...ಅವನನ್ನು ಬಿಟ್ಟು ಬಿಡಬೇಕೆಂದು ಮಾಡಿರುವೆ...ಆದರೆ ಅವನು ನನ್ನನ್ನು ಬಿಡಲು ಸಿದ್ಧನಿಲ್ಲ... ಅವನಿಂದ ಹಣ, ಚಿನ್ನ ಸಾಕಷ್ಟು ಕೊಳ್ಳೆ ಹೊಡೆದಿದ್ದೇನೆ...ವರ್ಷದಲ್ಲಿ ಕೂಡ ಇಷ್ಟು ಸಂಪಾದಿಸಲು ನನಗೆ ಸಾಧ್ಯವಿರಲಿಲ್ಲ. ಈ ವಜ್ರ ನೋಡಿ... ಬ್ಲ್ಯು ಬೆಲ್ಜಿಯಂ..." ಎಂದಳು.

"ಓ! ಐ, ಸಿ..." ಎಂದು ಬ್ರಿಗೇಡಿಯರ್‌ನ ಬಾಯಿಂದ ಒಮ್ಮೆಲೇ ಹೊರಟಿತು... ಅವನಿಗೆ ಸಾಕಷ್ಟು ಲೋಕಾನುಭವವಿತ್ತು. ಜಗತ್ತನ್ನು ತುಂಬ ನೋಡಿದ್ದ. ಅದಕ್ಕೆಂದೇ ಅವನು ಹೇಳಿದ– "ಆದರೆ ಈ ವಿಷಯ ನನ್ನ ಹೆಂಡತಿಗೆ ಹೇಳಬೇಡ. ಆಕೆ ಓರ್ವ ಧರ್ಮಭೀರು, ದೇವರಲ್ಲಿ ನಂಬಿಕೆಯಿಟ್ಟಿರುವ ಇಂಗ್ಲೀಷ ಸದ್ಗೃಹಿಣಿ. ನೀನು ಇದನ್ನೆಲ್ಲ ಹೇಳಿದರೆ ಆಕೆ ನಿನ್ನೊಂದಿಗೆ ಮಾತು ಕೂಡ ಆಡುವುದಿಲ್ಲ..."

"ವೆರಿ ವೆಲ್ ಬ್ರಿಗೇಡಿಯರ್...."

"ಆದರೆ ನೀನು, ಒಳ್ಳೆಯ, ಸುಸಂಸ್ಕೃತ ಮನೆತನದ ತರುಣಿಯ ಹಾಗೆ ಕಾಣುತ್ತಿರುವೆ. ನೀನು ಈ ರೀತಿ...."

"ತಾವು ಕೂಡ, ನಿನ್ನಂಥ ಸಾಧ್ವಿಶಿರೋಮಣಿ ಇದನ್ನೇನು ಮಾಡುತ್ತಿರುವೆ... ಎಂದು ಕೇಳಲಿದ್ದೀರಾ...? ಇದರ ಉತ್ತರ ಹೀಗಿದೆ ಮಾಸ್ತರೆ... There is big money in it ಅದೂ ಅಲ್ಲದೆ ನಮ್ಮೀ ಬಿಜಿನೆಸ್ ಇಂಟರ್ ನ್ಯಾಷನಲ್ ಆಗುತ್ತ ನಡೆದಿದೆ. ನನ್ನ ಕೆಲ ಗೆಳತಿಯರು ಮಿಡ್ಲ್ ಈಸ್ಟ್ ಮತ್ತು ಪಶ್ಚಿಮ ದೇಶಗಳಿಗೆ ಹೋಗಿ ಬರುತ್ತಾರೆ. ನನ್ನ ತಾಯಿ, ತಂದೆ ಮತ್ತು ಸೋದರರಿಗೆ ನನ್ನ ಬಗ್ಗೆ ಎಲ್ಲ ಗೊತ್ತಿದೆ. ಅವರೆಲ್ಲ ದಿಲ್ಲಿಯಲ್ಲಿದ್ದಾರೆ...."

"ಆ ಭಯಂಕರ ಮನುಷ್ಯ... ನಿನ್ನೊಂದಿಗೆ ಬಂದವನು... ಅವನಾರು...?" ಬ್ರಿಗೇಡಿಯರ್ ವಿಚಾರಿಸಿದ. "ಅವನು ನನ್ನ ಪಬ್ಲಿಕ್ ರಿಲೇಷನ್ಸ್ ಆಫೀಸರ್..." ಬ್ರಿಗೇಡಿಯರ್ ಮಿದು ಮಾತಿನಲ್ಲಿ ಹೇಳಿದ -

"ಮೈ ಡಿಯರ್... ನಿನಗೆ ಹೆದರಿಕೆಯಾಗುವುದಿಲ್ಲವೆ...? ಎಂದಾದರೂ ನೀನು ಹುಚ್ಚ, ಮೂರ್ಖ, ಅರ್ಧಮರ್ಧ ಮನುಜನು... ಇಂಥವರ ಸಂಗದಲ್ಲಿ ಸಿಕ್ಕರೆ...?"

"ಈ ಮನುಷ್ಯನೂ Sadist ಇದ್ದಾನೆ. ಆದರೆ ಅವನನ್ನು ಹೇಗೆ ಹ್ಯಾಂಡಲ್ ಮಾಡಬೇಕೆನ್ನುವುದು ನನಗೆ ಗೊತ್ತಿದೆ. ಅದೂ ಅಲ್ಲದೆ Occupational hazards. ಇವೆಲ್ಲ ನಾವು ಧಂದೆಯಲ್ಲಿರುವವರು ಎದುರಿಸಲೇಬೇಕಾಗುತ್ತದೆ. ನನ್ನ ಓರ್ವ ಗೆಳತಿ, ಸ್ಕೂಲಿನಲ್ಲಿ ನನ್ನೊಂದಿಗೆ ಓದುತ್ತಿದ್ದಳು. ನರ್ಸ್ ಆಗಿ ಪಶ್ಚಿಮಜರ್ಮನಿಗೆ ಹೋದಳು. ನರ್ಸಿಂಗ್ ಬಿಟ್ಟು ಹೆಂಬರ್ಗ ಏರವೇಜ ಪ್ಯಾಲೇಸ್‌ದಲ್ಲಿ ಸೇರಿದಳು. ಕೇವಲ ಕೆಲವೇ ದಿನಗಳಲ್ಲಿ ಆಕೆ ಲಕ್ಷಾಧೀಶಳಾದಳು.ವೈಭವದಿಂದ ಕೂಡಿದ ಬಂಗ್ಲೆ, ಸ್ವಿಮಿಂಗ್ ಪೂಲ... ಬೆಲೆ ಬಾಳುವ ಕಾರು, ನನಗೂ ಅವಕಾಶ ಸಿಕ್ಕರೆ ಹೊರಗೆ ಹೋಗಿ ಇದೇ ಕೆಲಸವನ್ನೇ ಮಾಡುತ್ತೇನೆ..."

"ಯಾವ ಕೆಲಸ ಮೈ ಡಿಯರ್...?" ಮಿಸೆಸ್ ಫ್ರಿಮೆಂಟಲ್ ಹೊರಗಿನಿಂದ ಒಳಗೆ ಬರುತ್ತ ವಿಚಾರಿಸಿದಳು.

"ಇದೇ...ಸೋಶಲ್‌ವರ್ಕ್, ಸಮಾಜ ಸೇವೆ ಮಿಸೆಸ್ ಫ್ರಿಮೆಂಟಲ್..." ತರುಣಿ ತುಂಬ ಶಾಂತಿಯಿಂದ ಉತ್ತರಿಸಿದಳು.

"ಬಿಚ್..." ಬ್ರಿಗೇಡಿಯರ್, ಮನಸ್ಸಿನಲ್ಲಿಯೇ ಅಂದ... ಕೆಲ ಹೊತ್ತಿನ ನಂತರ ಆಕೆ ಲಂಚ್‌ಗಾಗಿ ಹೊರಟು ಹೋದಳು. ಅಪರಾಹ್ನ ಹೊರಗೆ ಬಂದಳು. ಒಂದು ಗಾಯಗೊಂಡ ಪಕ್ಷಿ ರೆಕ್ಕೆ ಬಡಿಯುತ್ತ... ಬಡಿಯುತ್ತ... ಪಡಸಾಲೆಯಲ್ಲಿ ಹಾರಾಡುತ್ತಿತ್ತು... ಒಂದು ಗೋಡೆಗೆ ತಾಗಿ ನೆಲಕ್ಕೆ ಬಿತ್ತು. ತರುಣಿ ಕೂಡಲೇ ಅದನ್ನು ಎತ್ತಿ ಮುದ್ದಾಡಿದಳು. ತುಂಬ ದುಃಖ, ನೋವು ಅನುಭವಿಸುತ್ತ ಅದರ ಮೈಮೇಲೆ ಕೈಯಾಡಿಸಿದಳು. ಆಕೆಗೆ ಏನೋ ಹೊಳೆಯಿತು. ಪಕ್ಷಿಯನ್ನು ಸೀರೆಯ ಸೆರಗಿನಲ್ಲಿ ಮುಚ್ಚಿಕೊಂಡು ಕೇಂಬ್ರಿಡ್ಜ್‌ದಿಂದ ಬಂದಿದ್ದ ವಿದ್ಯಾರ್ಥಿಗಳ ಡೇರೆಯತ್ತ ನಡೆದಳು...

ಒಂದು ಅಗ್ನಿಷ್ಟಿಕೆಯ ಸುತ್ತ ಆ ಐವರೂ ಕುಳಿತಿದ್ದರು. ಮೂವರು ಹುಡುಗರು, ಇಬ್ಬರು ಹುಡುಗಿಯರು. ತುಂಬ ಆರೋಗ್ಯವಂತರಾಗಿದ್ದರು, ಎತ್ತರದ... ಗಟ್ಟಿ ಮುಟ್ಟಾದ... ಸುವರ್ಣವರ್ಣದ ಕೂದಲಿನ, ಗಡ್ಡದ... ತರುಣರು... ಯುರೋಪದ ಉತ್ತರ ಭಾಗದ ಜಂಗಲ್‌ಗಳ ಸೂರ್ಯದೇವತೆಯ ಮಕ್ಕಳು... ಮತ್ತು ಹುಡುಗಿಯರು ಕೆಂಪಗಿನ, ಬಂಗಾರಗೂದಲಿನ, ಅತ್ಯಂತ ತಾಜಾ ಬನದೇವತೆಗಳು.... ಏನೆಂಥ ಭವ್ಯ ಜನರೀ ಯುರೋಪಿಯನ್‌ರು... ನಾವಿದ್ದೇವೆ... ನಿರ್ಬಲ, ದುರ್ಬಲ, ಕಪ್ಪಗಿನ, ಇಲ್ಲಾಣದ ಹಾಗೆ... ಕುಳ್ಳಗಿನ, ಒಣಗಿದ... ಕುರೂಪಿಗಳು... ಮಿಡಿಚಿಗಳ ಹಾಗೆ... ಅವಳು ಹೀಗೆಲ್ಲ ಯೋಚಿಸಿದಳು.

ಒಂದೇ ಸವನೇ ಅವರನ್ನು ದಿಟ್ಟಿಸಿ ನೋಡುತ್ತಲಿದ್ದಳು... ಮತ್ತೆ ಕೊಂಚ ಸಂಕೋಚದಿಂದಲೇ ಮುಂದೆ ಹೋದಳು.... ಆ ಐವರೂ ಏನೋ ವಿಚಾರವಿನಿಮಯದಲ್ಲಿ ಮಗ್ನರಾಗಿದ್ದರು. ಅವರ ಅಧ್ಯಯನದ ಪುಸ್ತಕಗಳು ಅವರ ಹತ್ತಿರವೇ ಬಿದ್ದಿದ್ದವು...

"ಗುಡ್ ಮಾರ್ನಿಂಗ್..." ಎಂದ ಅವಳು... ಮತ್ತೆ ನುಡಿದಳು- "ಎಕ್ಸ್‌ಕ್ಯೂಜ ಮಿ..."

"ಹಲೋ... ಗುಡ್ ಮಾರ್ನಿಂಗ್..." ಓರ್ವ ಸೂರ್ಯನ ಮಗ ಎದ್ದು ಅವಳತ್ತ ಬಂದ.

ಅವಳು ಗಾಯಗೊಂಡ ಪಕ್ಷಿಯನ್ನು ಅವನಿಗೆ ಕೊಡುತ್ತ "ನೀವೆಲ್ಲ ಅರಣ್ಯ, ಸಸ್ಯಗಳ ಅಧ್ಯಯನಕ್ಕೆ ಬಂದಿರುವುದು ನನಗೆ ತಿಳಿದದ್ದರಿಂದ ಇದರ ಬಗ್ಗೆಯೂ ನೀವು ಆಸಕ್ತಿ ವಹಿಸಬಹುದೆಂದು ತಂದೆ..." ಎಂದಳು.

"ಓ! ಹೌ... ವ್ಹೆರಿ ನೈಸ್ ಆಫ್ ಯು... ಥ್ಯಾಂಕ್ಸ್..." ತರುಣ ಪಕ್ಷಿಯನ್ನು ತುಂಬ ಕಾಳಜಿಯಿಂದ ತನ್ನ ಕೈಯಲ್ಲಿ ತೆಗೆದುಕೊಂಡ ಮತ್ತು ತನ್ನ ಸಂಗಡಿಗರ ಕಡೆಗೆ ಓಡಿದ. ಅವರೆಲ್ಲ ಪಕ್ಷಿಯ ಶುಶ್ರೂಷೆಯಲ್ಲಿ ತಲ್ಲೀನರಾದರು.

ಆಕೆ ಕೆಲಕ್ಷಣ, ಅವರು ತನ್ನೊಂದಿಗೆ ಮಾತಾಡಬಹುದೆಂಬ ಆಸೆಯಿಂದ ನಿಂತಳು. ಆದರೆ ಅವರಾರೂ ಆಕೆಯತ್ತ ನೋಡಲಿಲ್ಲ ಕೂಡ. ಆಗ ನಿರಾಶಳಾಗಿ ಮರಳಿದಳು...

ಸಂಜೆಯ ಹೊತ್ತಿನಲ್ಲಿ ಆಕೆ ಹೊರಗಡೆ ನಿಂತಿದ್ದಳು, ಆಗಲೇ ಆ ಇಂಗ್ಲಂಡ್ ಹುಡುಗ ಬಾರ್‌ಕಡೆ ಹೋಗುವುದನ್ನು ಕಂಡಳು... ಅವಳು ಆ ಕೂಡಲೇ ಒಳಗೆ ಹೋದಳು ಹಾಗೂ ಬಾರ್ ರೂಮಿನ ಸೋಫಾದಲ್ಲಿ ಕುಳಿತಳು. ಹುಡುಗ, ಬೀರ್‌ಬಾಟ್ಲ ಖರೀದಿಸಿ ಬಾಗಿಲದ ಕಡೆ ಹೊರಟ... ಹುಡುಗಿ ಕೈಯೆತ್ತಿ "ಹಲೋऽ" ಎಂದಳು... ಅವನು ತಿರುಗಿ ನೋಡಿ ಮುಗುಳ್ನಕ್ಕ... ಹಾಗೂ ಅವಳ ಹತ್ತಿರ ಬಂದು- "ಗುಡ್ ಯಿವ್ಹಿನಿಂಗ್... ಮೇಮ... ಮಿಸೆಸ್..."

"ಮಿಸೆಸ್ ಏಲ್...."

"ಹೌ ಆರ್ ಯು ಮಿಸೆಸ್ ಏಲ್....?"

"ನನ್ನ ಹೆಸರು ರಮ್..."

"ಚೇಷ್ಟೆ ಮಾಡುತ್ತಿಲ್ಲ ತಾನೇ ನೀವು...? ರಮ್ ಮತ್ತು ಏಲ್...?"

"ಎಳ್ಳಷ್ಟೂ ಇಲ್ಲ... ನಾನು ನನ್ನ ಗಂಡನಿಗೆ Ale ಎಂದು ಕರೆಯುತ್ತೇನೆ. ಆತ ಅದೇ ಹೆಸರಿನಿಂದ ಪ್ರಸಿದ್ಧನಾದ. ನನ್ನ ನಿಜವಾದ ಹೆಸರು ರಂಭಾ... ನಮ್ಮ ಹಿಂದೂ ಮೈಥಾಲಜಿಯಲ್ಲಿ ಸ್ವರ್ಗಲೋಕದ ಓರ್ವ ಅಪ್ಸರೆಯಾಗಿದ್ದಳು... ರಂಭಾ...."

"ಓ! ಎಂಥ ಅದ್ಭುತ, ರೋಮಾಂಚನಕಾರಿ..." ಎನ್ನುತ್ತ ಹುಡುಗ ತನ್ನ ಬಗ್ಗೆ ಹೇಳಿದ- "ನನ್ನ ಹೆಸರು ಕೇವಲ ಬರ್ನಾರ್ಡಕ್ರಿಗ್...."

"ಕೂತುಕೊ... ಕಾಫಿ ಕುಡಿ... ಬೇರಾ...." ತರುಣಿ ಕೂಗಿದಳು... ಅವಳು ಒಮ್ಮೆಲೇ ತುಂಬ ಸಂತಸದಲ್ಲಿದ್ದಳು, ಆರಾಮಾದಿಯಾಗಿದ್ದಳು.

"ನಿಮ್ಮ ಪಕ್ಷಿ ಹೇಗಿದೆ ಈಗ...?"

"ಶುಶ್ರೂಷೆಯ ನಂತರ ಅದು ಚಲೋ ಆಯಿತು. ಅದು ತನ್ನ ಜಂಗಲ್‌ಗೆ ಮರಳಿ ಹೊರಟು ಹೋಯಿತು" ಎಂದು ಇಂಗ್ಲಂಡಿನ ಹುಡುಗ ಉತ್ತರಿಸಿದ... ಹಾಗೂ ಕುಳಿತು ಸಂಪ್ರದಾಯದಂತೆ ಅವಳೊಂದಿಗೆ ಮಾತನಾಡತೊಡಗಿದ...

"ನಾನೂ ಯೋಚಿಸುತ್ತಿದ್ದೇನೆ... ನಮ್ಮ ನಮ್ಮ ಜಂಗಲ್‌ಗೆ ಮರಳಬೇಕೆಂದು... ನಮ್ಮ ಜಗತ್ತಿಗೆ.. ಇಲ್ಲಿ ಸಮಯ ಕಳೆಯುವುದು ತುಂಬ ಕಷ್ಟ... ಇಲ್ಲಿ ಕಾಲ ನಿಂತು ಹೋಗಿದೆ...ಆದರೆ ಕ್ಯಾಪ್ಟನ್ ಇನ್ನೂ ಕೆಲ ಸಮಯ, ಕೆಲದಿನ ಇದ್ದು ಹೋಗೋಣವೆಂದು ಹೇಳುತ್ತಾರೆ... ಬೆಟ್ಟಗಳ ಕೆಳಗೆ ರಾಮಗಂಗಾ ಉಗಮದ ಸ್ಥಾನದಲ್ಲಿ...."

"ನಾವು ಕೂಡ ಆ ಸ್ಥಳ ನೋಡಲು ಹೋಗಿದ್ದೆವು..." ಎಂದು ಸೂರ್ಯದೇವತಾ ಹೇಳಿದ. ಬಂಗಾರ ವರ್ಣದ ಕೂದಲು, ಗಡ್ಡ... ಬಾರ್ ರೂಮಿನ ಅರೆಕತ್ತಲಲ್ಲಿ ಸೂರ್ಯನ ಹಾಗೆ ಹೊಳೆಯುತ್ತಿದ್ದ, ಬೆಳಗುತ್ತಿದ್ದ... ಅವಳು ಅವನನ್ನು ತದೇಕಚಿತ್ತಳಾಗಿ ನೋಡುತ್ತಿದ್ದಳು... ಅವನು ಹೇಳುತ್ತಿದ್ದ... ಇವಳು ಕೇಳುತ್ತಿದ್ದಳು... "ನನಗೆ ಹಿಂದೂಸ್ತಾನ ತುಂಬ ಹಿಡಿಸಿದೆ... ಎಷ್ಟರ ಮಟ್ಟಿಗೆಂದರೆ... ಹಿಂದೂಸ್ತಾನಿ ಹುಡುಗಿಯರೊಂದಿಗೆ ಮದುವೆಯಾಗಿಬಿಡಲೇ ಎನ್ನುವಷ್ಟು... ಇಂಗ್ಲಂಡದಲ್ಲಿರುವ ನನ್ನ ಕೆಲವು ಮಿತ್ರರು, ಹಿಂದೂಸ್ತಾನಿ ಹುಡುಗಿಯರನ್ನು ಮದುವೆಯಾಗಿ ತುಂಬ ಸಂತೋಷವಾಗಿದ್ದಾರೆ... ನೀವು ತುಂಬ ಪ್ರಾಮಾಣಿಕರು, ಸೇವಾಸಕ್ತರು, ಪತಿವ್ರತೆಯರು-ಎಂದು ಅವರು ಹೇಳುತ್ತಾರೆ... ನಮ್ಮ ಹುಡುಗಿಯರಿಗಿಂತ ತುಂಬ ಭಿನ್ನರು ನೀವು..."

ಹುಡುಗಿಯ ಮುಖ ಕೆಂಪಗಾಯಿತು. ತುಂಬ ಸಂತೋಷದಲ್ಲಿದ್ದಳು...

ಬೇರಾ ಕಾಫಿಯ ಟ್ರೇ ತಂದಿಟ್ಟ, ಆಕೆ ಕಾಫಿ ಮಾಡಲಾರಂಭಿಸಿದಳು. ಮತ್ತೆ ಆಕೆ ಕೇಳಿದಳು- "ನೀವು ಇಲ್ಲಿ ಸಿಂಹ ನೋಡಿದಿರೇನು...?"

"ಇಲ್ಲ... ಮೊನ್ನೆ ಗಾರಬಾಂಧಾಕ್ಕೆ ಹೋಗಿದ್ದೆವು... ನಾವಲ್ಲಿ ಬಹಳ ಹೊತ್ತು ಮಂಚಿಯ ಮೇಲೆ ಕುಳಿತಿದ್ದೆವು... ಆದರೆ ಸಿಂಹ ಬರಲೇ ಇಲ್ಲ... ನಾಳೆ, ನಾಡದ್ದು ನಾವು ದಿಲ್ಲಿಗೆ ಹೋಗುತ್ತೇವೆ... ಅಲ್ಲಿಂದ ಇಂಗ್ಲಂಡಕ್ಕೆ ಹೊರಡುತ್ತೇವೆ..."

ಹುಡುಗಿ, ನಿರಾಶೆಯ ದನಿಯಲ್ಲಿ ಮೆಲ್ಲ ಮೆಲ್ಲಗೆ ಹೇಳತೊಡಗಿದಳು- "ನನ್ನ ತಂದೆ ಹಿಜ್ ಹೈನೆಸ್ ಆಫ್ ಕರನಪುರ, ತನ್ನ ಕಾಲದ ಪ್ರಸಿದ್ಧ ಶಿಕಾರಿಯಾಗಿದ್ದ, ಅವರೊಂದಿಗೆ ನಾನು ಬಹಳ ಸಲ, ಬೇಟೆಯಾಡುವ ಸ್ಥಳಗಳಿಗೆ ಹೋಗಿರುವೆ... ನನ್ನ ಅಣ್ಣ ಕೂಡ ಚಾಣಾಕ್ಷ ಬೇಟೆಗಾರನಾಗಿದ್ದಾನೆ..."

ಇಂಗ್ಲೀಷ ಹುಡುಗ ತುಂಬ ಆಸಕ್ತಿಯಿಂದ ಆಕೆಯ ಮಾತುಗಳನ್ನು ಕೇಳುತ್ತಿದ್ದ. ಅವಳು ಹೇಳುತ್ತಲಿದ್ದಳು.. ಸಂಸ್ಥಾನಗಳ ನಿರ್ಮೂಲನೆಯಾದಾಗ ನಾನು ಚಿಕ್ಕವಳಿದ್ದೆ...

ನಮ್ಮ ವೈಭವದ ಬದುಕಿನಲ್ಲಿ ಬಹಳಷ್ಟು ಏರುಪೇರುಗಳು ಬಂದವು... ನಾನು ದೊಡ್ಡವಳಾದ ನಂತರ, ಏರ್ ಹೋಸ್ಟಸ್ ಆಗಬೇಕಾಗಿ ಬಂತು... ಅವಳು ತನ್ನ ಕೈಯೆತ್ತಿ ಉಂಗುರ ತೋರಿಸಿದಳು... "ಈ ಬ್ಲ್ಯು ಬೆಲ್ಜಿಯಂ... ನಮ್ಮ ಅರಮನೆಯ ಬೊಕ್ಕಸದ ಕೊನೆಯ ಗುರುತು.... ಈ ಉಂಗುರ..."

"ಫೆಸಿನೇಟಿಂಗ್... ಹಾಗಾದರೆ ನೀವು ಫ್ಲೈಯಿಂಗ್ ಪ್ರಿನ್ಸೆಸ್ ಆಗಿದ್ದಿರಿ...."

"ವಿಮಾನ ಹಾರಾಟದ ಕಾಲದಲ್ಲಿ ತಯಾರಿಯ ಕ್ಯಾಪ್ಟನ್‌ನೊಂದಿಗೆ ಸ್ನೇಹವಾಯಿತು. ನಾವು ಮದುವೆ ಆದೆವು... ಅವನು ತುಂಬ ಕುಡಿಯುತ್ತಿದ್ದ.... ಅವನನ್ನು ಆ ನೌಕರಿಯಿಂದ ತೆಗೆಯಲಾಯಿತು... ನನಗೀಗ ಅವನನ್ನು ಸಹಿಸುವುದು ಕಷ್ಟವಾಗಿದೆ... ಅವನಿಂದ ಡೈವರ್ಸ್ ಪಡೆಯಬಯಸಿದ್ದೇನೆ..."

ಇಂಗ್ಲೀಷ ಹುಡುಗ ಸುಮ್ಮನಿದ್ದ....

"ಈ ಸ್ಥಳ ತುಂಬ ವಿಶಿಷ್ಟವಾದುದು... ಇಲ್ಲಿಗೆ ಬಂದ ಮನುಷ್ಯ ಸತ್ಯ ಹೇಳಲು ನಿರುಪಾಯನಾಗುತ್ತಾನೆ... ಅದಕ್ಕಾಗಿ ನಾನು ನಿನಗೆ ಇದನ್ನೆಲ್ಲ ಹೇಳುತ್ತಿದ್ದೇನೆ..."

"ನನ್ನ ಗೌರವವನ್ನು ಹೆಚ್ಚಿಸಿದ್ದೀರಿ ಮಿಸೆಸ್ ಏಲ್..." ಎಂದ ನಮ್ರತೆಯಿಂದ ಬರ್ನಾರ್ಡ್ ಕ್ರಿಗ್.

ಓರ್ವ ಮನುಷ್ಯ ದೊಡ್ಡದಾದ ಓವರ ಕೋಟ ತೊಟ್ಟು ಕೋಣೆಯಲ್ಲಿ ಬಂದ. ಬರ್ನಾರ್ಡ್ ಆ ಮನುಷ್ಯನನ್ನು ನೋಡಿ ಹೇಳಿದ– "ಮಿಸೆಸ್ ಏಲ, ಕೆಲ ಮನುಷ್ಯರ ಮುಖಗಳು ಪ್ರಾಣಿಗಳ ಮುಖ ಹೋಲುತ್ತವೆ, ನೀವು ಯಾವಾಗಾದರೂ ಗಮನವಿಟ್ಟು ನೋಡಿದ್ದೀರಾ? ಈ ಮನುಷ್ಯ ಹಿಮಾಲಯದ ಕರಿಕರಡಿ ಅಲ್ಲ ತಾನೇ? ನಿನ್ನೆ ನಾವು ಓರ್ವ ಗಿಡ್ಡ ಮನುಷ್ಯನನ್ನು ನೋಡಿದೆವು. ಅವನು ಥೇಟ್ Sloth bear ಕಂಡ ಹಾಗೇ ಕಾಣಿಸುತ್ತಿದ್ದ."

"ಹಾಗಾದರೆ ನಾನು ಯಾವ ಪ್ರಾಣಿಯನ್ನು ಹೋಲುತ್ತೇನೆ?" ಎಂದು ಹುಡುಗಿ ಮುಗುಳ್ನಗುತ್ತ ವಿಚಾರಿಸಿದಳು.

ಇಂಗ್ಲಂಡದ ತರುಣ ಅವಳನ್ನು ದಿಟ್ಟಿಸಿ ನೋಡುತ್ತ ಹೇಳಿದ– "ಚಿರ್ಚದ ಹಾಗೆ... ಅಥವಾ ಅಡವಿ ಬೆಕ್ಕು..."

"ಧನ್ಯವಾದಗಳು.. ಏಕೆಂದರೆ ನನ್ನ ಕಣ್ಣುಗಳು ತುಂಬ ಮಾದಕವಾಗಿವೆ ಅಲ್ಲ...? ಹಾಂ! ಮನುಷ್ಯರ ಹಾಗೂ ಪ್ರಾಣಿಗಳ ಕಣ್ಣು ಒಂದೇ ತರಹವಾಗಿರುತ್ತವೆ. ಮೀನಿನ ಶೀತಲ ಕಣ್ಣು... ಬೆಕ್ಕಿನ ಕಣ್ಣು... ಹೀಗೆಯೇ..."

"ಅಲ್ಲಿ ನೋಡಿ, ಓರ್ವ ಗುಡ್ಡಗಾಡಿನ ಆಡು ಸ್ಟೂಲಿನ ಮೇಲೆ ಹೋಗಿ ಕುಳಿತಿತು..." ಎಂದು ಹುಡುಗ ನಗುತ್ತ ಹೇಳಿದ...

ಅವಳು ಕೂಡ ನಕ್ಕಳು. "ಕೆಲವು ಜನರು ಕಪ್ಪೆಯ ಹಾಗೆ ಕಾಣುತ್ತಾರೆ... ಕೆಲವರು ಆನೆಯ ಹಾಗೆ, ಕೆಲವರು ಗೇಂಡಾ ಮೃಗದ ಹಾಗೆ. ಮಿಡಿಚಿ ಮತ್ತು ಎತ್ತಿನ ಹಾಗೆ, ಸಾರಂಗದ ಹಾಗೆ... ಕೆಲ ಹೆಂಗಸರು ಹಲ್ಲಿಯ ಹಾಗೆ ಕಾಣಿಸುತ್ತಾರೆ... ಅಥವಾ ಮೂರ್ಖ ಗುಬ್ಬಿಯ ಹಾಗೆ... ಹೀಗೆ ನಾನಾ ತರಹ...."

"ಇವೆಲ್ಲವೂ ಒಂದು ಮನೆತನ, ಒಂದು ಕುಟುಂಬ..." ಎಂದ ಬರ್ನಾರ್ಡ್ ಮತ್ತೆ ಹೇಳಿದ- "ಸರ್ವೋರ್ವ ಹಿಂದೂ ಗಳೆಯ, ಸಮಸ್ತ ಪ್ರಾಣಿಗಳೆಲ್ಲ ಎಂಬತ್ತು ಸಾವಿರ ಯೋನಿಗಳಲ್ಲಿ ಹಾದು ಬರುತ್ತವೆ" ಎಂದು ಹೇಳುತ್ತಾನೆ...

"ಹೌದೇನು...?" ಹುಡುಗಿ ಅಚ್ಚರಿಯಿಂದ ಕೇಳಿದಳು...

"ತಾವು ಹಿಂದೂ ಅಲ್ಲವೇನು?"

"ಅಲ್ಲ... ನಾನು... ನಾನು ಕ್ರೈಸ್ತಳು... ನನ್ನ ತಾಯಿ ಹರ್ ಹೈನಸ್ ಆಫ್ ಕರನ್‌ಪುರ ಕ್ರೈಸ್ತಳಾಗಿದ್ದಳು..."

"ಓ!...." ಬರ್ನಾರ್ಡ್ ಕಣ್ತುಂಬ ಅವಳನ್ನು ನೋಡಿದ.. ಕಾಫಿ ಮುಗಿಸಿ ಅವನು ಎದ್ದು ನಿಂತು ಹೇಳಿದ- "ಕಾಫಿಗಾಗಿ ಧನ್ಯವಾದಗಳು. ಗುಡ್‌ನೈಟ್... ಪ್ರಿನ್ಸೆಸ್... ನಾಳೆ ಮತ್ತೆ ಭೇಟಿ ಆಗೋಣ..."

ಅವನು ಕೊಂಚ ಶೀಘ್ರಗತಿಯಲ್ಲಿ ಹೊರ ಹೋದ ಹಾಗೂ ಮಬ್ಬುಗತ್ತಲಿನಲ್ಲಿ ಕಾಣದಾದ.

ನಾಲ್ಕನೆಯ ದಿನದ ಬೆಳಗ್ಗೆ ಇಂಗ್ಲೆಂಡದ ವಿದ್ಯಾರ್ಥಿಗಳು ಒಂದು ಮರದ ಕೆಳಗೆ ಕುಳಿತು ಚರ್ಚೆಯಲ್ಲಿ ಮುಳುಗಿದ್ದರು. ಹುಡುಗಿ ಅಡ್ಡಾಡುತ್ತ ಅವರ ಹತ್ತಿರ ಬಂದಳು. ಅವರು ಆಕೆಯನ್ನು ನೋಡಲಿಲ್ಲ... ("ನಾನು ಯಾವುದಾದರೂ ಹಿಂದೂಸ್ತಾನಿ ಹುಡುಗಿಯೊಂದಿಗೆ ಮದುವೆಯಾಗಬಯಸುತ್ತೇನೆ... ನಾನು ಹಿಂದೂಸ್ತಾನಿ ಹುಡುಗಿಯೊಂದಿಗೆ...") ಆಕೆ ಅಲ್ಲಿಂದ ವೇಗವಾಗಿ ನಡೆಯುತ್ತ ಒಂದು ಡೇರೆಯ ಹತ್ತಿರ ಹೋದಳು. ಅಲ್ಲಿ ಓರ್ವ ಹಿರಿಯ ಮುಲ್ಲಾ ಕುಳಿತಿದ್ದ....

"ಅಸ್ಸಲಾಮು ವಾಲೇಕುಮ್...." ಎಂದಳು ಅವನ ಸಮೀಪ ಹೋಗಿ.

"ವಾಲೇಕುಮ್ ಸಲಾಮ್...." ಎಂದ ಅವನು, ಅವಳನ್ನು ದಿಟ್ಟಿಸಿ ನೋಡಿದ.

ಆಕೆ ಮೆಲ್ಲಗೆ ಬೇಡಿಕೊಳ್ಳುವ ರೀತಿಯಲ್ಲಿ ಹೇಳಿದಳು- "ಹುಜೂರ... ನನಗಾಗಿ ಅಲ್ಲಾನಲ್ಲಿ ಪ್ರಾರ್ಥನೆ ಮಾಡಿ, ನನ್ನ ಯೋಗಕ್ಷೇಮಕ್ಕಾಗಿ ಪ್ರಾರ್ಥಿಸಿ... ಬೇಡಿಕೊಳ್ಳಿ.... ನನ್ನ ಜೀವನ ಸುಖಿಮಯವಾಗಲಿ... ಮಹಾತ್ಮರಲ್ಲಿ ಪ್ರಾರ್ಥನೆ ಸಲ್ಲಿಸಿ... ಏನಾದರೂ ಮಾಡಿ... ಜಲ್ದಿ... ಜಲ್ದಿ... ಇದನ್ನು ತಗೊಳ್ಳಿ...." ಎಂದು ಅವಳು ಪರ್ಸ್ ತೆಗೆದು ಎರಡು ನೂರು ರೂಪಾಯಿಯ ನೋಟುಗಳನ್ನು ಅವನ ಎದುರಿನಲ್ಲಿರಿಸಿ, ಕೂಡಲೇ ಮರಳಿ ಹೊರಟಳು. ಈ ಹಿರಿಯ ಮುಲ್ಲಾ ಅಚ್ಚರಿಯಿಂದ ಅವಳು ಹೋದತ್ತ ನೋಡುತ್ತಲೇ ಇದ್ದ.....

ಸಂಜೆ ಹೊತ್ತಿಗೆ ಆ ಗಿಡ್ಡ ವ್ಯಕ್ತಿ ಮರಳಿ ಬಂದಿದ್ದ. ಹಾಲ್‌ನಲ್ಲಿ ನಿಂತು ಜೀಪಸ್ಟೇಷನ್ ವೇಗನ್‌ದಲ್ಲಿ ಮೀನಿನ ಬೇಟೆಯ ಸಾಮಾನು ಇರಿಸುತ್ತಿದ್ದ. ಅವನು ಓರ್ವ ಬೇರಾಗೆ ಆರ್ಡರ್ ಮಾಡಿದ– "ಮೇಮ್‌ಸಾಬಳಿಗೆ ಹೇಳು... ಜಲ್ದಿ ಬರಲು...."

ಬೇರಾ ಮೇಲೆ ಹೋಗಿ, ಕೋಣೆಯ ಕದ ಬಡಿದ, ಹುಡುಗಿ ಬೂದಿ ಬಣ್ಣದ ಟ್ರೌಜರ್ ಸೂಟ್ ತೊಟ್ಟಿದ್ದಳು. ಕನ್ನಡಿಯ ಎದುರಿಗೆ ನಿಂತು ಮೇಕಪ್ ಮಾಡಿಕೊಳ್ಳುತ್ತಿದ್ದಳು... ಬಾಗಿಲು ತೆರೆದು ಆಕೆ ಹೇಳಿದಳು– "ಈಗ ಬಂದೆಯೆಂದು ಸಾಹೇಬರಿಗೆ ಹೇಳು...". ಆಕೆ ಹಿಂದಿನ ಸ್ಟೇರ್‌ಕೇಸಿನಿಂದ ಇಳಿದು ಕೇಂಬ್ರಿಡ್ಜ್ ವಿದ್ಯಾರ್ಥಿಗಳ ಕ್ಯಾಂಪಿನತ್ತ ಓಡಿದಳು...

ಬರ್ನಾರ್ಡ್ ಅರಳೆ ಮರದ ಬುಡದಲ್ಲಿದ್ದ ಕಲ್ಲುಬಂಡೆಯ ಮೇಲೆ ಕುಳಿತು ಪೈಪ್ ಸೇದುತ್ತಿದ್ದ... ಆಕೆಯನ್ನು ಕಂಡು ಅಚ್ಚರಿಯಿಂದ– "ಗುಡ್ ಇವನಿಂಗ್ ಮಿಸೆಸ್ ಏಲ್..." ಎಂದ.

"ರಮ್..." ಎಂದಳು ಹುಡುಗಿ ಮುಗುಳ್ನಗುತ್ತ....

ಅವನು ಸುಮ್ಮನಿದ್ದ. ಅವನು ಓರ್ವ ಗೃಹಿಣಿಯ ಸಂಗ ಬೆಳೆಸಿ ಯಾವುದೇ ತೊಂದರೆಯಲ್ಲಿ ಸಿಕ್ಕಿಕೊಳ್ಳಲು ಬಯಸುತ್ತಿರಲಿಲ್ಲ.

"ನಾನು ಮಿಸಸ್ ಏಲ್ ಅಲ್ಲ..." ಹುಡುಗಿ ಅತ್ಯಂತ ಶಾಂತಳಾಗಿ ಹೇಳಿದಳು. ಮತ್ತೆ "ನನಗೆ ನಿನ್ನ ದಿಲ್ಲಿಯ ವಿಳಾಸ ಕೊಟ್ಟು ಹೋಗು. ನಾನೀ ಮೋಸದ ಬದುಕಿನಿಂದ ಹೊರಬರಬೇಕೆನ್ನುತ್ತೇನೆ... ನಾನು ಇಂಗ್ಲಂಡಕ್ಕೆ ಬರಲು ಇಚ್ಛಿಸುತ್ತೇನೆ... ಏನು, ನೀನು ನನಗೆ ಸಹಾಯ ಮಾಡಬಲ್ಲೆಯಾ?" ಎಂದು ಕೇಳಿದಳು.

"ತುಂಬ ಆಶ್ಚರ್ಯ... ನನಗೆ ಸಿಕ್ಕ ಹಿಂದೂಸ್ತಾನಿ ಹುಡುಗಿಯರೆಲ್ಲ ಇದೇ ಬೇಡಿಕೆಯನ್ನು ನನ್ನ ಮುಂದಿಡುತ್ತಾರೆ..." ಎಂದು ಬರ್ನಾರ್ಡ್ ಖೇದದಿಂದ ಉತ್ತರಿಸಿದ.

"ನಿನಗೆ ನನ್ನ ಎಲ್ಲ ವಿಷಯ ಹೇಳುತ್ತೇನೆ... ಎಲ್ಲ ವಿಷಯ... ನಿನ್ನ ದಿಲ್ಲಿಯ ವಿಳಾಸ ಕೊಡು..."

"ನಾವಿನ್ನೂ ಎಲ್ಲಿಳಿದುಕೊಳ್ಳುವುದೆಂದು ನಿಶ್ಚಯ ಮಾಡಿಲ್ಲ" ಎಂದ ಹುಡುಗ.

ಜೀಪ ಸಮೀಪ ಬಂದು ನಿಂತಿತು. ಗಿಡ್ಡ ಮನುಷ್ಯ ಗಾಡಿಯ ಬಾಗಿಲು ತೆರೆದ ಹಾಗೂ ಹೇಳಿದ– "ನಡೆ..."

ಅವಳು ಹೆದರಿ ಬರ್ನಾರ್ಡ್‌ನನ್ನೊಮ್ಮೆ ನೋಡಿದಳು ಹಾಗೂ ಜೀಪಿನಲ್ಲಿ ಕುಳಿತಳು. ಗೇಟಿನ ಹತ್ತಿರ ಬಂದ ಜೀಪ ಉಸುಗಿನಲ್ಲಿ ಸಿಕ್ಕಿಕೊಂಡಿತು. ಬ್ರಿಗೇಡಿಯರ್ ಫ್ರಿಮೆಂಟಲ್ ವಾಕಿಂಗ್ ಹೋಗಿ ಬರುತ್ತಿದ್ದ. ಅವನು ಅಲ್ಲಿದ್ದ ಕೆಲ ಜನರನ್ನು ಕರೆದ. ಎಲ್ಲರೂ ಸೇರಿ ಗಾಡಿ ನುಗಿಸಿದರು. ಅದು ಗೇಟಿನಿಂದ ಹೊರಗೆ ಹೋಯಿತು. ಹುಡುಗಿ ಹೊರಳಿ ನೋಡಿದಳು. ಬ್ರಿಗೇಡಿಯರ್ ಕರವಸ್ತ್ರದಿಂದ ಕೈ ಮತ್ತು ಮುಖ ಒರಸಿಕೊಳ್ಳುತ್ತ– "ಗುಡ್ ಬೈ...." ಹೇಳಲು ಕೈ ಎತ್ತಿದ... ದೂರದಲ್ಲಿದ್ದ ಕೇಂಬ್ರಿಡ್ಜ್ ವಿದ್ಯಾರ್ಥಿಗಳ ಡೇರೆಯಲ್ಲಿ ದೀಪ ಬೆಳಗುತ್ತಿತ್ತು....

ಕಾಡಿನ ದಾರಿಯಲ್ಲಿ ಗಾಢವಾದ ಕತ್ತಲೆ... ಆಕೆ ಹೆದರಿಕೊಂಡು, ಆ ಕುಳ್ಳನನ್ನು ತಬ್ಬಿಕೊಂಡು ಹೇಳಿದಳು– "ತುಂಬ ಭಯಾನಕ ಸ್ಥಳವಾಗಿದೆ ಇದು... ನಡೆ... ಮರಳಿ ಹೋಗೋಣ...."

"ನಾಳೆ ನಿನ್ನ ಆ ಅಣ್ಣ ಬರಲಿದ್ದಾನೆ. ಅವನನ್ನು ಇದಕ್ಕಾಗಿಯೇ ಕರೆಸಿದ್ದಿಯಾ? ನೀನು ಹೇಗೆ ಹೋಗುತ್ತಿ... ನೋಡುತ್ತೇನೆ...."

ಅವಳು ಮನಸ್ಸಿನಲ್ಲಿಯೇ ಅಂದುಕೊಂಡಳು... ನಾನು ಅವನ ಜೊತೆಗೂ ಹೋಗುವುದಿಲ್ಲ... ಈ ಸಮಯದಲ್ಲಿ ಮೌಲ್ವಿ ನನಗಾಗಿ ಪ್ರಾರ್ಥನೆ ಸಲ್ಲಿಸುತ್ತಿರಬಹುದು.... ಮಿಸ್ಟರ್ ಬರನಾರ್ಡ್ ಕ್ರಿಗ್... ನಾನು ಅತ್ಯಂತ ಪ್ರಾಮಾಣಿಕ, ಸೇವಾಮನೋಭಾವದ ಹಿಂದೂಸ್ತಾನಿ ಪತ್ನಿ... ಇಲ್ಲವೇ ಜರ್ಮನಿಯ ಏರ್‌ವೇಜ ಪ್ಯಾಲೇಸ್... ಕಿವಿಯಲ್ಲಿ ತೂತಿದ್ದ ಮನುಷ್ಯನ ದನಿ... ಅವನು ಬಂದೂಕು ಹಿಡಿದು ಮಂಚಿಯ ಮೇಲೆ ಕುಳಿತಿದ್ದ. ಅವಳು ಕೆಳಗೆ ಆಹಾರದ ಹಾಗೆ ಬಂದಿಯಾಗಿದ್ದಳು.... ಮತ್ತೆ ಆ ಸುಂದರ ಮುಖದ ಮೌಲ್ವಿಯ ಚಹರೆ... ಆ ಚಹರೆಯ ಕಲ್ಪನೆಯಲ್ಲಿ... ತನ್ನನ್ನು ತಾನು ಸುರಕ್ಷಿತೆಯೆಂದು ಭಾವಿಸತೊಡಗಿದಳು. ಅವಳು ಹೇಳಿದಳು– "ಆ ಹಾಡನ್ನಾದರೂ ಹೇಳು... ದಿಲ್ ಜಂಗಲ್ ಹೀ ಮೇ...."

ಯಾರೋ ರಿಕಾರ್ಡ್ ಮೇಲೆ ಪಿನ್ ಇರಿಸಿರಬೇಕು... ಅನ್ನುವ ಹಾಗೆ ಆ ಮನುಷ್ಯ ಕೂಡಲೇ ಆಲಾಪ ಆರಂಭಿಸಿದ "ದಿಲ್ ಜಂಗಲ್ ಹೀ ಮೇ... ಬಹಲ್ತಾ ಹೈ... ಯಹಾ ಪ್ರೇಮಕಾ ಸಾಗರ ಚಲ್ತಾ ಹೈ... ಪರದೇಶಿ ಪೀರತ್ ಕ್ಯಾ ಜಾನೇ... ಹಮ್ ಐಸಾ ಗೀತ ಕಹಾ ಜಾನೆ... ಖಿಲ್ ಜಾಯ್... ಜಿಸ್‌ಸೆ ದಿಲ್ ಕಿ ಕಲಿ... ಯಹಾ ದಿಲ್ ಕಿ ಕಲಿ ತೊ ಕಭೀ ನಾ...." ಎನ್ನುತ್ತ ಆ ಮನುಷ್ಯ ದಂಡೆಯ ಮೇಲೆ ಗಾಡಿ ನಿಲ್ಲಿಸಿದ. ಅವಳು ಉಸುಗಿನ ಮೇಲೆ ಜಿಗಿದಳು. ಫಿಷಿಂಗ್ ಸಾಮಾನು ಇಳಿಸುವಲ್ಲಿ ಅವನಿಗೆ ಸಹಾಯ ಮಾಡಿದಳು.

ರಾಮಗಂಗಾ, ಕರಗಿದ ಬೆಳದಿಂಗಳ ಹಾಗೆ ಹೊಳೆ ಹೊಳೆಯುತ್ತಿತ್ತು. ಆತ ಹಿಪ್ ಪಾಕೆಟ್‌ದಲ್ಲಿದ್ದ ಬಾಟ್ಲ ತೆಗೆದ ಹಾಗೂ ಒಂದು ಗುಟುಕು ಕುಡಿದ....

"ಇಲ್ಲಿ ಇನ್ನೂ ಛಳಿಯಿದೆ..." ಎಂದಳು ಹುಡುಗಿ.

"ಡಿಸೆಂಬರದ ರಾತ್ರಿ ಅದೂ ನದಿ ತೀರದಲ್ಲಿ ಬಿಸಿ ಇರಲು ಹೇಗೆ ಸಾಧ್ಯ.....?"

ಎನ್ನುತ್ತ ಆತ ಮತ್ತೆ ಹೇಳಿದ– "ಉಸುಗಿನಲ್ಲಿ ಓಡು.. ಛಳಿ ಓಡಿ ಹೋಗುತ್ತದೆ...." ಅವಳು ಉಸುಗಿನ ಮೇಲೆ ಓಡತೊಡಗಿದಳು. ಅವನು ಅವಳ ಹಿಂದೆ ಹಿಂದೆ... ಮತ್ತೆ ತೇಕತೊಡಗಿದ... ಒಮ್ಮೆಲ್ಲೆ ಹುಡುಗಿ ನಿಂತು ಹೇಳಿದಳು... "ಏನೆಂಥ ಸುಂದರವಾಗಿದೆ ಈ ಸ್ಥಳ..." ಎನ್ನುತ್ತ ಬಗಲಲ್ಲಿದ್ದ ಕಾಫಿಯ ಫ್ಲಾಸ್ಕ ತೆಗೆದು ಉಸುಗಿನ ಮೇಲೆ ಕುಳಿತಳು.

ಎದುರಿಗೆ, ನದಿಯ ಆಚೆಯ ದಡದಲ್ಲಿ ಕಲ್ಲುಬಂಡೆ ಗೋಡೆಯ ಹಾಗೆ ಕಾಣಿಸುತ್ತಿತ್ತು... ಅದರ ಮೇಲೆ ನೀರಿನ ನೆರಳು ಹೊಯ್ದಾಡುತ್ತಲಿತ್ತು... ಇದರಿಂದಾಗಿ ಅದು... ಜಲ ಅಪ್ಸರೆಯರ ಮಹಲಿನ ಹಾಗೆ ತೋರುತ್ತಲಿತ್ತು....

ಆ ಮನುಷ್ಯ ಅವಳ ಸಮೀಪ ಬಂದು ಧಪ್ಪೆಂದು ಕುಳಿತ... ಅವನು ಹಿಪ್ ಫ್ಲಾಸ್ಕ್ ಮತ್ತೆ ಬಾಯಿಗಿರಿಸಿ ಗಟಗಟ... ಕುಡಿದು ಬಡಬಡಿಸತೊಡಗಿದ... "ತುಟಿಗಳಿದ್ದರೆ... ಹೀಗಿರಬೇಕು... ನೀರಿನ ಹಾಗೆ... ನನ್ನ ಹತ್ತಿರ ಕುಳಿತರಬೇಕು ಹೀಗೆ... ಓ! ಪ್ರಿಯತಮ... ತಗೋ ನಿನ್ನ ಕೈಯಲಿ ಈ ಜಾಮ್... ಜಾಮ... ಏ ಲೂಫ ಆಫ್ ಬ್ರೆಡ್... ಏ... ಜಗ್ ಆಫ್ ವಾಯ್ನ್... ತಗೋ ಪ್ರಿಯೆ, ಕುಡಿ..."

"ಇಲ್ಲ... ನಾನು ಕಾಫಿ ಕುಡಿಯುತ್ತೇನೆ..." ಎನ್ನುತ್ತ ಅವಳು ಮನದಲ್ಲಿಯೇ ಅಂದುಕೊಂಡಳು... ತನಗಾಗಿ ಅಲ್ಲಿ ಮೌಲ್ವಿ ಸಾಬ ಈಗ ಪ್ರಾರ್ಥನೆ ಸಲ್ಲಿಸುತ್ತಿರಬಹುದು... ನಾನು ಈ ವಾಯ್ನ್ ಹೇಗೆ ಕುಡಿಯಲು ಸಾಧ್ಯ...?

ಆ ಮನುಷ್ಯ ಗುರ್... ಗುರ್... ಎನ್ನುತ್ತಲಿದ್ದ... "ನನ್ನ ಜೊತೆಯಲ್ಲಿ ಕುಳಿತಿದ್ದಾಳೆ ಮೋಸಗಾರ್ತಿ ಸನಮ್... ಹರಾಮಿ... ಧಗಾಬಾಜ... ಬದ್ಮಾಷ್ ಸನಮ್..." ಎನ್ನುತ್ತ ಬಾಟ್ಲ ಖಾಲಿ ಮಾಡಿದ... ಅವನು ವಿಷ ಕುಡಿದ ಇಲಿಯಂತಾಗಿದ್ದ... ಅವನು ಕಣ್ಣು ಮುಚ್ಚಿ, ತಲೆಬಾಗಿ ಕುಳಿತು ಬಿಟ್ಟ...

ಹುಡುಗಿ ಬಡಬಡಿಸಿದಳು– "ಇಂಥ ಛಳಿಯಲ್ಲಿ ಯಾರಾದರೂ ಮೀನ ಹಿಡಿಯಲು ಬರುತ್ತಾರೆಯೇ? ಅದೂ ರಾತ್ರಿಯಲ್ಲಿ?... ಮರಳಿ ಹೋಗೋಣ ನಡೆ... ಇಲ್ಲದಿದ್ದರೆ ನಾನು ನ್ಯೂಮೋನಿಯಾದಿಂದ ಸತ್ತು ಹೋಗುತ್ತೇನೆ."

ಅವನಿಗೆ ಏನೊಂದೂ ಕೇಳಿಸಲಿಲ್ಲ, ಅವನು ಸುಂದಾಗಿದ್ದ.

"ನಾನು ಹೋಗಿ ಗಾಡಿಯಲ್ಲಿ ಕುಳಿತುಕೊಳ್ಳುತ್ತೇನೆ..." ಎಂದಳು.

ಅವನು ಎಳ್ಳಷ್ಟೂ ಮಿಸಗಾಡಲಿಲ್ಲ...

"ಓ! ಕಾಡು ಮನುಷ್ಯ..."

ಅವನು ತಲೆ ಎತ್ತಲಿಲ್ಲ...

"ಓ! ಕಾಡು ಮನುಷ್ಯ...."

ಅವನು ಮೊದಲಿನಂತೆಯೇ ಕುಳಿತಿದ್ದ.

"ಓ! ಜಂತು.... ಕುಳ್ಳ ಮಾಸ್ತರ್...."

ಅವನು ಸುಮ್ಮನೇ ಇದ್ದ.

"ಮುದಿ ಮಿಡಚಿ...."

ಅವನು ಒಮ್ಮೆಲೇ ಎದ್ದ. ಹುಡುಗಿಗೆ ಜೋರಾಗಿ ಒದ್ದ. ಅವಳು ನದಿಯಲ್ಲಿ ಬಿದ್ದಳು.

"ಉಳಿಸು...." ಎಂದು ಕೂಗಿಕೊಂಡಳು.... ನೀರ ಸುಳಿ ಹಾಗೂ ತೆರೆಗಳು ಅವಳನ್ನು ಮುಂದಕ್ಕೆ ತಳ್ಳಿದವು.... ಎದುರಿನ ದಡದಲ್ಲಿದ್ದ ಬಂಡೆಗಲ್ಲಿನ ಗೋಡೆಯ ಮೇಲೆ ನೀರಿನ ಪ್ರತಿಬಿಂಬದಲ್ಲಿ ಹೊಯ್ದಾಟ ಜೋರಾಯಿತು.... ಒಂದು ಮೊಸಳೆ ಕತ್ತಲೆಯಲ್ಲಿ ನಿದ್ರೆಯಿಂದ ಎಚ್ಚತ್ತಿತು.... ಬಂಡೆಯ ಮೇಲಿಂದ ಸರಿಯುತ್ತ ಸರಿಯುತ್ತ ನೀರಲ್ಲಿಳಿಯಿತು

ಹಾಗೂ ಮುಳುಗುತ್ತಿರುವ ಹುಡುಗಿಯತ್ತ ಸಾಗಿತು. ಕೈ, ಕಾಲು ಬಡಿಯುತ್ತ ಹುಡುಗಿ ಮೇಲೆದ್ದಳು.... ಅವಳು ಮೊಸಳೆ ನೋಡಿದಳು.... ಶೀತಲ ಬೆಳದಿಂಗಳಲ್ಲಿ ಹೊಳೆಯುತ್ತಿರುವ ನೀರು ಆವಳ ಸುತ್ತಲೂ ಹಬ್ಬಿತ್ತು..... ಬಾಯ್ತೆರೆದು ಮೊಸಳೆ ತಿನ್ನಲು ಧಾವಿಸುತ್ತಲಿತ್ತು....

ಮೊಸಳೆ ಹುಡುಗಿಯ ಕಾಲುಗಳನ್ನು ತನ್ನ ದವಡೆಯಲ್ಲಿರಿಸಿಕೊಂಡಿತು.... ಹುಡುಗಿ ಒಮ್ಮೆ ಜೋರಾಗಿ ಚೀರಿದಳು.... ಆ ನಂತರ ಎಲ್ಲ ಶಾಂತ.... ಸುತ್ತಲೂ ಮೌನ ಆವರಿಸಿತು.... ಮೊಸಳೆಯ ಬಾಯಲ್ಲಿ ಹೊಕ್ಕ ಕೂಡಲೇ ಅವಳು ಅಂಜಿಯೇ ಸತ್ತು ಹೋಗಿದ್ದಳು....

ಮೊಸಳೆ ಆವಳನ್ನು ಸಂಪೂರ್ಣ ಒಳಗೆ ಹಾಕಿಕೊಂಡು, ಬಂಡೆಗಲ್ಲಿನ ಮೇಲೆ ಬಂದು ಕೊಂಚ ದಣಿವಾರಿಸಿಕೊಂಡಿತು.... ಹಿಮಾಲಯದ ಈ ನದಿ ಎಂದಿನಂತೆ ಹಿಮದಿಂದ ಹೊರಟು ಹರಿಯುತ್ತಲಿತ್ತು.... ಈ ಬೆಟ್ಟ.... ಈ ಕಾಡು.... ಈ ದಿನ್ನೆ.... ಎಲ್ಲ ಹಾಗೇ ಇವೆ ಲಕ್ಷ ಲಕ್ಷ ವರ್ಷಗಳಿಂದ.... ಮೊಸಳೆ ಹುಡುಗಿಯನ್ನು ಚಪ್ಪರಿಸಿ.... ಚಪ್ಪರಿಸಿ.... ತಿನ್ನತೊಡಗಿತ್ತು.... ನದಿಯ ತೆರೆಗಳ ಮೇಲೆ ರಕ್ತದ ಕೆಲ ಗುಳ್ಳೆಗಳು ಎದ್ದವು.... ಅವಳ ಕೇಶರಾಶಿ.... ಕಟ್ಟಿದ ಜಡೆ.... ಮಾಂಸ.... ಬಟ್ಟೆಯ ತುಂಡುಗಳು.... ನೀರಿನ ಮೇಲೆ ತೇಲತೊಡಗಿದವು.... ಮೊಸಳೆ ಅತ್ಯಂತ ಸಂತೋಷದಿಂದ ತನ್ನ ಡಿನರ್ ತಿನ್ನುತ್ತಲಿತ್ತು....

ಆ ಕುಳ್ಳ, ನದಿಯ ತೀರದಿಂದ ನೋಡಿದ.... ಅವನ ಮೈ ಮೇಲಿನ ಕೂದಲು ಆ ಛಳಿಯಲ್ಲೂ ನಿಮಿರಿ ನಿಂತವು.... ಅವನ ಕರಡಿಯಂಥ ಕಣ್ಣುಗಳು ತೆರೆದಂತೆಯೇ ಇದ್ದವು.... ಅವನು ಗಾಬರಿಯಿಂದ ಜೀಪಿನತ್ತ ಓಡಿದ.... ನದಿತೀರದಲ್ಲಿ ದೂರದಲ್ಲಿದ್ದ ಒಂದು ಗಿಡದ ಬುಡದಲ್ಲಿತ್ತು.... ಜೀಪು....

ಆ ದಟ್ಟವಾದ ಮರದ ಕೆಳಗೆ, ಬುಡದಲ್ಲಿ ಹುತ್ತವಿತ್ತು.... ಮನುಷ್ಯನ ಕಾಲಿನ ಸಪ್ಪಳಕ್ಕೆ ಹುತ್ತದಿಂದ ಒಂದು ವಿಷಸರ್ಪ ಹೊರಬಂತು.... ಒಂದು ಜಿಂಕೆ ಎಚ್ಚರಗೊಂಡಿತು.... ನಡುಗುತ್ತಿದ್ದ ಕುಳ್ಳ ಹೊರಳಿ ನೋಡಿದ.... ರಾಮಗಂಗಾ ಶಾಂತವಾಗಿ ಕರಗಿದ ಬೆಳದಿಂಗಳ ಹಾಗೆ ಹರಿಯುತ್ತಲಿತ್ತು.... ಕುಳ್ಳ ಇಂಜಿನ್ ಸ್ಟಾರ್ಟ ಮಾಡಿದ.... ಅದರ ಗಡಗಡ ಸಪ್ಪಳ.... ಆ ನಿಶ್ಶಬ್ದತೆಯಲ್ಲಿ ತುಂಬ ಭಯಾನಕವಾಗಿ ತೋರಿತು.... ಅಂಧಾ.... ಧುಂಧಾ... ಗಾಡಿ ನಡೆಸಿಕೊಂಡು ಅವನು ಕಾಡಿನ ಮುಖ್ಯ ರಸ್ತೆಗೆ ಬಂದ.... ಹೆಡ್ ಲೈಟ್ಸ್‌ದ ಮುಂದೆ ಒಮ್ಮೆಲೇ ಒಂದು ಹಿಂಸ್ರ ಪಶು ಬಂದು ನಿಂತು ಜೋರಾಗಿ ಗಹಗಹಿಸಿತು....

ರಾತ್ರಿ ಕಳೆಯಿತು.... ಚಂದಿರ ಮುಳುಗಿದ.... ಸೂರ್ಯ ರಾಮಗಂಗಾದಲ್ಲಿ ಉದಯಿಸಿದ.... ಕಾಡು ಎಚ್ಚೆತ್ತಿತು.... ಬ್ರೇಕ್‌ಫಾಸ್ಟ್‌ದ ಸಮಯಕ್ಕೆ ಬುದ್ಧು ಕಾಡಿನಿಂದ ಹೊರಟು ಕಾಂಪೌಂಡಿನಲ್ಲಿ ಬಂದಿತು.... ರೆಸ್ಟ್‌ಹೌಸಿನ ಪಡಸಾಲೆಯ ಕೆಳಗೆ ತಲುಪಿತು.... ಹಾಗೂ ಹುಡುಗಿಯ ಬರುವಿನ ನಿರೀಕ್ಷೆಯಲ್ಲಿ ತಲೆಬಾಗಿಸಿ ನಿಂತಿತು.... ಅವಳು ದಿನವೂ ಅದಕ್ಕೆ ಬ್ರೆಕ್‌ಫಾಸ್ಟ ಮಾಡಿಸುತ್ತಿದ್ದಳು....

* * *

# ಕವಿ, ಪ್ರೇಮಿ
## (ಏಕಾಂಕ)

**ಡಾ. ಬಸವರಾಜ ಡೋಣೂರ**

[ಹದಿನೆಂಟು ವರ್ಷದ ತರುಣ ಒಂದು ಉದ್ಯಾನವನದ ಗೇಟಿನ ಬಳಿ ನಿಂತು ಒಳಗಡೆಯ ಹೂವಿನ ಗಿಡವನ್ನು ತದೇಕದೃಷ್ಟಿಯಿಂದ ವೀಕ್ಷಿಸುತ್ತಿದ್ದಾನೆ. ಆಕಾಶದಲ್ಲಿ ಹಾಲಿನಂಥ ಬೆಳದಿಂಗಳಿದೆ. ಆ ತರುಣನ ಮುಖದ ಮೇಲೆ ಸಂತೃಪ್ತ ಭಾವನೆ ಕಾಣುವುದು. ಹೇಗಾದರೂ ಮಾಡಿ ಗೇಟನ್ನು ತಳ್ಳಿಕೊಂಡು ಉದ್ಯಾನವನದ ಒಳಗೆ ಕಾಲಿಡಲು ಪ್ರಯತ್ನ ಪಡುತ್ತಾನೆ. ಅಷ್ಟೊತ್ತಿಗೆ ಸೆಕ್ಯೂರಿಟಿ ಗಾರ್ಡ್ ಸೀಟಿ ಹಾಕುತ್ತ ಅಲ್ಲಿಗೆ ಬರುತ್ತಾನೆ.]

**ಗಾರ್ಡ್ :** [ಕೂಗುತ್ತ] ಏ ಯಾರ್ರಿ ನೀವು. ಇಲ್ಲೇನು ಮಾಡಕ್ಹತ್ತೀರಿ?

**ಕವಿ:** ನಾನು ಕವಿ. ಈ ಉದ್ಯಾನವನದಲ್ಲಿ ಅರಳಿರುವ ಆ ಹೂವನ್ನು ಮುಟ್ಟಿ ಅನುಭವಿಸುವ ಆಸೆ.

**ಗಾರ್ಡ್ :** ನೀವು ಕವಿಯರೆ ಇರ್ರಿ, ಯಾರರೆ ಇರ್ರಿ, ಅದನ್ನು ಕಟ್ಕೊಂಡು ನಾನೇನು ಮಾಡ್ಲಿ? ಸಂಜೆ ಏಳು ಗಂಟಿಮ್ಯಾಗ ಯಾರನ್ನೂ ಒಳಗ ಬಿಡಬೇಡ ಅಂತ ನಮ್ಮ ಸಾಹೇಬರು ಹೇಳ್ಯಾರ.

**ಕವಿ :** ಏನಯ್ಯಾ,ನಾನು ಕವಿ ಅಂತ ಹೇಳಿದರೂ ನೀನು ಕೇಳುತ್ತಿಲ್ಲವಲ್ಲ!

**ಗಾರ್ಡ್ :** ಕೇಳ್ತೀನಿ ಹೇಳ್ರಿಯಪ್ಪ. ಬರ್ರಿ, ಇಲ್ಲಿ ಲೈಟ್ ಕಂಬಿನ ಹಂತ್ಯಾಕ ಕೂಡ್ರಿ. ಅದೇನು ಹೇಳ್ತಿರೋ ಹೇಳ್ರಿ,

**ಕವಿ :** ಲೈಟು ಕಂಬಿನ ಹತ್ತಿರ ನನ್ನ ಕೆಲಸವಿಲ್ಲ. ಗಿಡದಲ್ಲಿ ಅರಳಿರುವ ಹೂವುಗಳನ್ನು ನೋಡಬೇಕು, ಅಲ್ಲಿನ ಹುಲ್ಲುಗಾವಲು ಮೇಲೆ ಕುಳಿತು ಆ ಗಿಡದ ಮೇಲೆ ಚಲಿಸುವ ಚಂದ್ರನನ್ನು ನೋಡಬೇಕು, ತಿಳಿಯಿತೆ?

**ಗಾರ್ಡ್** : ತಿಳದೈತ್ರಿ. ಆದರೆ ಗೇಟನೊಳಗ ನಿಮ್ಮನ್ನು ಬಿಡೂದಕ್ಕ ಬರೂದಿಲ್ಲ. ರಾತ್ರಿ ಹೊತ್ತು ಗಾರ್ಡನ್‌ದಾಗ ಕುಂತ್ಗತೀನಿ ಅಂದ್ರ ಬಾಯಿಂದ ನಗಬೇಕೋ, ಇನ್ನೇನ?

**ಕವಿ** : ಛೀ. ಎಂಥ ಅಸಭ್ಯ ಮಾತನಾಡುವಿ? ಅನಾಗರಿಕ, ಅಸಂಸ್ಕೃತ ಮನುಷ್ಯ ನೀನು.

**ಗಾರ್ಡ್** : ನೋಡ್ರಿ. ನೀವು ಭಾಳ ದೊಡ್ಡ ಪಾರ್ಟಿ ಹಂಗ ಕಾಣ್ತಿದ್ದೀರಿ ಅಂತಾ ಮರ್ಯಾದಿ ಕೊಟ್ಟು ಹೇಳ್ತಿದ್ದೀನಿ. ರಾತ್ರಿ ಹೊತ್ತು ಗಾರ್ಡನ್‌ದಾಗ ಯಾರನ್ನೂ ಬಿಡಬ್ಯಾಡಂತ ನಮ್ಮ ಸಾಹೇಬರು ಹೇಳ್ಯಾರ.

**ಕವಿ** : ನೋಡಯ್ಯಾ, ನನ್ನ ಮಾತು ಕಿವಿಗೊಟ್ಟು ಕೇಳು.

**ಗಾರ್ಡ್** : ಕಿವಿಯಿಂದ ಕೇಳದೆ ಕುಂಡಿಯಿಂದ ಕೇಳ್ತಾರೇನ್ರಿ? ನೀವು ಭಾರೀ ಮಾತಾಡತ್ತೀರಿ.

**ಕವಿ** : ಮೂರ್ಖ, ಅಧಮ, ನಿನ್ನ ಮಾತಿನಲ್ಲಿ ನಿನ್ನ ವ್ಯಕ್ತಿತ್ವ ವ್ಯಕ್ತವಾಗ್ತಿದೆ. ನನ್ನನ್ನು ನೋಡಿದರೆ ನಿನಗೆ ಏನನ್ನಿಸುತ್ತದೆ?

**ಗಾರ್ಡ್** : ಬಿಳಿ ಪೈಜಾಮ, ನೆಹರೂ ಶರ್ಟ್, ಬಗಲಾಗ ಕಾಟನ್ ಅರಿವಿ ಚೀಲ, ಒಂದು ಕೈಯಾಗ ನೋಟಬುಕ್, ಇನ್ನೊಂದು ಕೈಯಾಗ ಪೆನ್ನು, ಮೂಗಿನಮ್ಯಾಗ ಕನ್ನಡಕ– ಇವನ್ನೆಲ್ಲ ನೋಡಿದರ ನೀವು ಒಂದು ನಮೂನಿ ವಿಚಿತ್ರ ಆಸಾಮಿ ತರ ಕಾಣ್ತೀರಿ. ಆದರ ನಿಮ್ಮ ಮಾತು ಕೇಳಿದರ ನನಗ ಭಾಳ ನಗು ಬರತೈತ್ರಿ ಸಾಹೇಬರ. ನಮ್ಮ ಹಳ್ಯಾಗ ಬ್ರಾಹ್ಮಣರು ಮಾತನಾಡಿದ್ಹಂಗ ಮಾತಾಡ್ತೀರಿ.

**ಕವಿ** : ನಾನು ಯಾರ ಹಾಗೆಯೂ ಮಾತನಾಡುತ್ತಿಲ್ಲ. ನಾನು ನನ್ನ ಹಾಗೆಯೇ ಮಾತನಾಡುತ್ತೇನೆ. ಏಕೆಂದರೆ ನಾನು ನಾನೇ.

**ಹರ್ಡ್** : ಅದು ಏನರೇ ಇರುವಲ್ಲು. ಅದನ್ನ ಕಟ್ಗೊಂಡು ನಾನೇನು ಮಾಡೂದೈತಿ? ನೀವು ರಾತ್ಯಾಗ ಇಲ್ಯಾಕ ಬಂದೀರಿ ಹೇಳ್ರಿ?

**ಕವಿ** : ಇಲ್ಲಿಗೆ ಬರಲು ಕಾರಣವಿಷ್ಟೆ. ನಾನು ಕವಿ. ಇಂದು ಹುಣ್ಣಿಮೆ. ನೋಡು ಆಕಾಶದಲ್ಲಿ ಹೇಗೆ ಚಂದ್ರ ನಗುನಗುತ್ತ ಚಲಿಸುತ್ತಿದ್ದಾನೆ. ಈ ಉದ್ಯಾನವನದಲ್ಲಿನ ಹೂವುಗಳನ್ನು ನೋಡು. ಆ ಹುಲ್ಲುಗಾವಲು ಮೇಲೆ ಕುಳಿತು, ಆ ಹೂವುಗಳ ಸುವಾಸನೆ ಸವಿಯುತ್ತ, ಆಕಾಶದಲ್ಲಿಯ ಚಂದ್ರನನ್ನು ನೋಡುತ್ತ ನನ್ನ ಮಹಾಛಂದಸ್ಸಿನ ಮಹಾಕಾವ್ಯದ ಮೊದಲ ವಾಕ್ಯ ರಚಿಸಬೇಕು ಅಂತ ಅಂದುಕೊಂಡಿದ್ದೇನೆ. ಅದಕ್ಕೆ ಆಸ್ಪದ ಮಾಡಿಕೊಡಲಾರೆಯಾ?

**ಗಾರ್ಡ್** : ನಿಮ್ಮ ಮಾತು ಕೇಳೂದಕ್ಕ ಮಜಾ ಅನಸತೈತಿ. ಇನ್ನು ಸ್ವಲ್ಪ ಹಾಂಗs ಏನರೆ ಹೇಳ್ರಲ್ಲ!

**ಕವಿ** : ನೀನು ಗೇಟು ತೆಗೆಯುವುದಾದರೆ ನಾನು ಅಂಥ ಸಾವಿರ ಮಾತುಗಳನ್ನು ಹೇಳೇನು.

**ಗಾರ್ಡ್** : (ಗಂಭೀರವಾಗಿ ಚಿಂತಿಸುವನು) ಹೇ, ಅದು ಸಾಧ್ಯ ಇಲ್ಲ ಬಿಡ್ರಿ ಮಾರಾಯರ.

ಗೇಟ್ ತಗದ್ರ ನನ್ನ ನೌಕರಿ ಯಾಕ ಉಳಿದೀತು? ಸಾಹೇಬರ ನೀವು ಭಾಳ ದೊಡ್ಡ ಸಾಹೇಬರು ಆಗಿರಬೇಕು. ಹಾಂ, ಅಂದ್ಹಂಗ ನಿಮ್ಮ ನೌಕರಿ ಯಾವುದರಿಯಪ್ಪ?

**ಕವಿ :** ಕಾವ್ಯೋದ್ಯೋಗ. ಅಂದರೆ, ಕಾವ್ಯ ಕಟ್ಟುವುದೇ ನನ್ನ ನೌಕರಿ. ನಾನು ಕವಿ, ಸದಾ ಕಾಲ ಕಾವ್ಯದ ಕುರಿತು ಚಿಂತಿಸುವುದೇ ನನ್ನ ಉದ್ಯೋಗ.

**ಗಾರ್ಡ್ :** ಅಂದರ ನಿಮಗೆ ಬ್ಯಾರೆ ಉದ್ಯೋಗ ಗೊತ್ತಿಲ್ಲೇನ್ರಿ?

**ಕವಿ :** ಮೂಢ. ಪಕ್ಷಿಗೆ ರೆಕ್ಕೆ ಬಡಿದು ಹಾರದಿರು ಎನ್ನುವಿಯಾ? ಮೀನಿಗೆ ಈಸದಿರು, ಕೋಗಿಲೆಗೆ ಹಾಡದಿರು, ನವಿಲಿಗೆ ನರ್ತಿಸದಿರು, ನದಿಗೆ ಹರಿಯದಿರು, ಸೂರ್ಯ-ಚಂದ್ರರಿಗೆ ಬೆಳಗದಿರು, ಗಾಳಿಗೆ ಬೀಸದಿರು ಎಂದು ಹೇಳುವಿಯಾ?

**ಗಾರ್ಡ್ :** ಇಲ್ಲ ಬಿಡ್ರಿ. ಅದ್ಹ್ಯಾಂಗ ಸಾಧ್ಯ ಐತಿ?

**ಕವಿ :** ಕಾವ್ಯ ಕಟ್ಟೋದು ಕೂಡ ಹಾಗೆಯೇ! ಕಾವ್ಯ ಕಟ್ಟುವ ಕೆಲಸ ನಿಂತರೆ ಜಗತ್ತಿನಲ್ಲಿ ಅಲ್ಲೋಲ ಕಲ್ಲೋಲ ಉಂಟಾಗುತ್ತದೆ. ಸುನಾಮಿ ಅಲೆಗಳು ಎದ್ದು ಎಲ್ಲರನ್ನೂ ಕೊಚ್ಚಿಕೊಂಡು ಹೋಗುತ್ತವೆ. ಆದರೆ ಅಂಥ ಸುನಾಮಿ ಅಲೆಗಳನ್ನು ತಡೆಯುವ ಶಕ್ತಿ ಕಾವ್ಯಕ್ಕಿದೆ. ಅಂಥ ಕಾವ್ಯ ರಚಿಸುವ ಶಕ್ತಿ ಈ ಕವಿಗಿದೆ. ಆದರೆ ಈ ಕವಿಗೆ ಸ್ಫೂರ್ತಿ ಈ ಹೂವುಗಳಿಂದ, ಹುಲ್ಲುಗಾವಲಿನಿಂದ, ಈ ಚಂದ್ರನಿಂದ ಬರ್ತದೆ. ಅದಕ್ಕಾಗಿ ಹೇಳುತ್ತೇನೆ ಮಿತ್ರ, ಗೇಟು ತೆಗೆದು ನನ್ನ ಒಳಗೆ ಬಿಡು ಅಂತ.

**ಗಾರ್ಡ್ :** ಇಲ್ಲ ಬಿಡ್ರಿ, ಅದು ಮಾತ್ರ ಸಾಧ್ಯವಿಲ್ಲ, ನೀವು ಏನೋ ಹೇಳಿದ್ರಲ್ಲ. ಆಂ, ನೆನಪಾತು. ಕವಿಗಳೆ ಏಳು ಗಂಟೆ ಮ್ಯಾಗ ಯಾರ ಬಂದರೂ ಗೇಟ್ ತಗಿಬ್ಯಾಡ ಅಂತ ಸಾಹೇಬರು ಹೇಳ್ಯಾರ. ನಾನು ಎಂಟು ವರ್ಷದಿಂದ ಡ್ಯೂಟಿ ಮಾಡೀನಿ. ಒಂದು ನರಪಿಳ್ಳೆ, ಹೊಗಲಿ ಒಂದು ಗುಂಗಾಡು ಸಹಿತ ಒಳಗೆ ಬಿಟ್ಟಿಲ್ಲ ನಾನು.

**ಕವಿ :** ಆದರೆ ನನ್ನ ಕಣ್ಮುಂದೆ ಹತ್ತಾರು ಗುಂಗಾಡು ಒಳಗೆ ಹೋಗಿವೆ.

**ಗಾರ್ಡ್ :** ಆದರ ಅವು ನನ್ನ ಕೇಳಿಲ್ಲ. ಅಲ್ದ ನಾ ಗೇಟು ತಗೆದಿಲ್ಲ ನೋಡ್ರಿ [ಕಿಸಿಯಿಂದ ಕೀಲಿ ತೆಗೆದು ತೋರಿಸುವನು]

**ಕವಿ :** ಅದು ಸರಿ. ಆದರೆ ಸನ್ಮಿತ್ರನೆ ನನಗೊಬ್ಬನಿಗೆ ವಿನಾಯಿತಿ ತೋರಿಸಲ್ಲ......!

**ಗಾರ್ಡ್ :** ಆಗೂದಿಲ್ಲರಿ ಸಾಹೇಬರ. ನಿಮ್ಗ ಸಿಟ್ಟು ಬಂದ್ರ ನಾಕು ಏಟು ಹೊಡೀರಿ.

**ಕವಿ :** ಛೇ!ಛೇ!! ಅದು ಪಾಪ. ಪಾಪದ ಕೆಲಸ ನಾನು ಮಾಡಲಾರೆ. ಬೇಕಾದರೆ ಕೈ ಮುಗಿದು ಕೇಳಿಕೊಳ್ಳುತ್ತೇನೆ, ಮಿತ್ರ, ನನಗೆ ಒಳಗೆ ಬಿಡು.

**ಗಾರ್ಡ್ :** ನಾ ನಿಮ್ಮ ಕಾಲಿಗಿ ಬೀಳ್ತೀನಿ. ದೀಡ ನಮಸ್ಕಾರ ಬೇಕಾದ್ರ ಹಾಕ್ತೀನಿ. ಯಪ್ಪಾ, ತಂದಿ, ಒಳಗ ಬಿಡು ಅಂತ ಮಾತ್ರ ಕೇಳಬ್ಯಾಡ.

ಕವಿ : ಹಾಗೆ ಹೇಳದಿರು ಮಿತ್ರ, ಬೇಕಾದರೆ ನನ್ನ ಕಾವ್ಯ ನಿನಗೇ ಅರ್ಪಣೆ ಮಾಡುತ್ತೇನೆ.

ಗಾರ್ಡ್ : ( ಸ್ಪಷ್ಟವಾಗದೆ) ಅರ್ಪಣೆ ಅಂದರೇನ್ರಿ ಸಾಹೇಬರ? ಅದರ ನೀವು ನನಗ ಏನು ಮಾಡಿದ್ರೂ ನಾ ಒಳಗ ಬಿಡೂದಿಲ್ಲ. [ಮೆಲುಧ್ವನಿಯಲ್ಲಿ] ಸಾಹೇಬರ ನೀವೊಬ್ಬರೆ ಬಂದೀರೋ ಏನು ಯಾರಿಗಾದರೂ ಹಿಂದಿನಿಂದ ಬರೂದಕ್ಕ ಹೇಳಿ ಬಂದೀರೊ?

ಕವಿ : ನಾನೇಕೆ ಯಾರಿಗಾದರೂ ಬರಲು ಹೇಳಲಿ? ಯಾರನ್ನಾದರೂ ಕರೆದುಕೊಂಡು ಬರುವುದಾದರೆ ಜೊತೆಯಲ್ಲೆ ಕರೆದುಕೊಂಡು ಬರುತ್ತಿದ್ದೆ.

ಗಾರ್ಡ್ : ನೀವು ಭಾರೀ ಆಸಾಮಿ ಅದಿರಿ, ಬಿಡ್ರಿ!

ಕವಿ : ಯಾಕೆ, ಯಾಕೆ ಹಾಗೆ ಕೇಳಿದೆ?

ಗಾರ್ಡ್ : ಯಾಕೂ ಇಲ್ಲ ಬಿಡ್ರಿ

ಕವಿ : ಅದೇನೋ ಬಚ್ಚಿಟ್ಟುಕೊಳ್ಳುತ್ತಿರುವಿ. ಹೇಳು, ಬಿಡಿಸಿ ಹೇಳು.

ಗಾರ್ಡ್ : ಏನಿಲ್ಲ ಬಿಡ್ರಿ. ಕೆಲವರು ರಾತ್ರಿ ಹೊತ್ತು ( ಮೂಗಿನ ಮೇಲೆ ಬೆರಳಿಟ್ಟು) ಮಾಲಿ ಹೊಡ್ಕೊಂಡು ಬಂದು, ಸಂದಿಗೊಂದಿಯಲ್ಲೋ ಅಥವಾ ಇಂಥ ಗಾರ್ಡನ್‌ದಲ್ಲೊ ಕೆಲಸ ಮುಗಿಸ್ಕೊಂಡು ಹೊಗ್ತಾರ್ರಿ. ಇಂಥ ಹೊಲ್ಸ ಕೆಲ್ಸ ನಡೀಬಾರ್ದು ಅಂತ ಸರ್ಕಾರದವರು ರಾತ್ಯಾಗ ಗಾರ್ಡನ್‌ದಾಗ ಯಾರನ್ನೂ ಬಿಡಬಾರ್ದು ಅಂತ ಕಾಯ್ದೆ ಮಾಡ್ಯಾರ.

ಕವಿ : ಅದರೆ ಇದು ಹೇಗೆ ಹೊಲಸ ಕೆಲಸವಾಗುತ್ತೆ? ನೈಸರ್ಗಿಕವಾದದ್ದು, ಸಹಜವಾದ್ದು. ವನ ಪ್ರಾಣಿಗಳು ಮೈಥುನಕ್ಕಾಗಿ ಏನು ಫೈವ್ ಸ್ಟಾರ್ ಹೋಟೇಲಿಗೆ ಹೋಗುತ್ತಾವೆಯೋ?

ಗಾರ್ಡ್ : [ಬಾಯಿಯ ಮೇಲೆ ಕೈಯಿಟ್ಟು] ನಿಮ್ಮಂಥವರು ಇಂಥ ಮಾತ ಅಂದ್ರ ಸಮಾಜದ ಗತಿ ಏನ್ರಿಯಪ್ಪ?

ಕವಿ : ಸಮಾಜಕ್ಕೇನಾಗಿದೆ? ಸಮಾಜಕ್ಕೇನೂ ಆಗುವುದಿಲ್ಲ. ಸಮಾಜಕ್ಕೇನು ಜೀವವಿದೆಯೆ? ಏನಾದರೂ ಆಗುವುದಾದರೆ ಅದು ಜೀವಿಗಳಿಗೆ ಆಗುತ್ತದೆ. ಪ್ರೇಮಿಗಳು ಸ್ವತಂತ್ರವಾಗಿರಬೇಕು.

ಗಾರ್ಡ್ : ಯಾಕ್ರಿ? ಅವರ್ಯಾಕ ಸ್ವತಂತ್ರವಾಗಿರಬೇಕು? [ಒಬ್ಬ ವ್ಯಕ್ತಿ ಕಂಪೌಂಡಿನಿಂದ ಉದ್ಯಾನವನದಲ್ಲಿ ಜಿಗಿದ ಸಪ್ಪಳ ಕೇಳಿಸುವುದು. ಇಬ್ಬರೂ ಗಾಬರಿಯಾಗಿ ಗೇಟಿನೊಳಗೆ ಮುಖ ಹಾಕಿ ಒಳಗೆ ನೋಡುವರು. ಗೇಟಿನ ಹಿಂಬದಿಯಲ್ಲಿ ಒಂದು ಆಕೃತಿ ಕತ್ತಲೆಯಲ್ಲಿ ನಿಂತಿರುವುದು ಕಾಣುವುದು] ಸಾಹೇಬರ, ಕಂಪೌಂಡಿನಿಂದ ಯಾರೋ ಒಳಗ ಜಿಗಿದ ಸಪ್ಪಳ ಕೇಳಿಸತ್ತಲ್ಲ?

ಕವಿ : ನಿಜ, ಯಾರೋ ಜಿಗಿದ ಸಪ್ಪಳ ಕೇಳಿಸಿತು.

ಗಾರ್ಡ್ : ಯಪ್ಪಾ ಅಲ್ಲಿ ನೋಡ್ರಿ, ಆ ಗಿಡದ ಹಂತ್ಯಾಕ, ಅಲ್ಲಿ ಅದರ ಕೌನೆಳ್ಳಿನಲ್ಲಿ ಯಾರೋ ನಿಂತ್ಹಂಗ ಕಾಣಿಸೂದಿಲ್ಲಾ?

**ಕವಿ :** ನಿಜ, ಅಲ್ಲಿ ಒಬ್ಬ ವ್ಯಕ್ತಿ ನಿಂತಿರುವುದು ಕಾಣಿಸುತ್ತದೆ.

**ಗಾರ್ಡ್ :** ಯಾರಿರಬೇಕು? ಕಂಪೌಂಡ್ ಹಾರಿ ಒಳಗ ಜಿಗಿದು ಬರಬೇಕಾದರ ಅವನು ಭಾರೀ ಕಿಲಾಡಿನೇ ಇರಬೇಕು.

**ಕವಿ :** ಇರಬಹುದು. ಒಳಗೆ ಹೋಗಿ ನೋಡಿಕೊಂಡು ಬಾ.

**ಗಾರ್ಡ್ :** ಒಬ್ಬನಿಗ ಹೋಗೂದಕ್ಕ ಅಂಜಿಕ ಬರ್ತದರಿ ಸಾಹೇಬರ.

**ಕವಿ :** ಯಾಕೆ ಭಯ?

**ಗಾರ್ಡ್ :** ಭಯ ಯಾಕಂದ್ರ ಗಾರ್ಡನ್‌ದ ಮೂಲ್ಯಾಗ ಒಂದು ಹಳೀಕಾಲದ ಬಾವಿ ಐತಿ. ಎಡ್ಡು ವಾರದ ಕೆಳಗ ಆ ಬಾವ್ಯಾಗ ಇಬ್ಬರು– ಒಂದು ಹುಡುಗ ಒಂದು ಹುಡುಗಿ– ಬಿದ್ದು ಸತ್ತಾರ. ಅವರು ದೆವ್ವ ಆಗ್ಯಾರ ಅಂತ ಹುಲ್ಲು ಕಟ್ ಮಾಡುವವರು ಹೇಳ್ಯಾರ.

**ಕವಿ :** ಹಾಗಾದರೆ ಈಗ ಆ ಗಿಡದ ನೆರಳಲ್ಲಿ ನಿಂತಿರುವುದು ದೆವ್ವ ಅಲ್ಲ ಅಂತೀಯಾ?

**ಗಾರ್ಡ್ :** ಹಂಗೆಲ್ಲಾ ಹೇಳಿ ನನ್ನ ಹೆದರಿಸಬ್ಯಾಡ್ರಿ. ನಾ ದೆವ್ವಿಗಿ ಗೊವ್ವಿಗಿ ಹೆದರುವ ಮನುಷ್ಯ ಅಲ್ಲ. ( ಹೆದರಿದವನಂತೆ) ಸಾಹೇಬರ ಗಿಡದ ಬುಡುಕ್ಕ ನಿಂತದ್ದು ದೆವ್ವನೇ ಅಂತಿರೇನು?

**ಕವಿ :** ನನಗೆ ಹಾಗೆ ಅನಿಸುತ್ತೆ. ಲಕ್ಷ್ಯಕೊಟ್ಟು ನೋಡು. ಅದರ ಕಾಲು ನೆಲಕ್ಕೆ ಹತ್ತಿಲ್ಲ, ಮೂತಿ ಸರಿಯಾಗಿ ಕಾಣುತ್ತಿಲ್ಲ. ಅದು ನಿಜವಾಗಿಯೂ ದೆವ್ವ ಆಗಿರಲೇಬೇಕು ಅನಸ್ತದ.

**ಗಾರ್ಡ್ :** ದೆವ್ವ ಆಗಿದ್ದರ ಇಷ್ಟೊತ್ತು ಒಂದೇ ಕಡಿಗಿ ನಿಲ್ತಿರಲಿಲ್ಲ. ಇಲ್ಲಿ ಕಂಡರ ಅಲ್ಲೂ ಕಾಣಸತ್ತೈತಿ ಅಂತ ಹಿರ‍್ಯಾರು ಹೇಳ್ಯಾರ. ಅದೇನರೆ ಇರುವಲ್ಲದ್ಕ, ಒಳಗ ಹೋಗಿ ನೋಡಿಕೊಂಡು ಬಂದರಾಯಿತು. ( ತರುಣನ ಕಡೆಗೆ ನೋಡಿ) ಯಪ್ಪಾ ಸಾಹೇಬರ, ಇಟ ನನ್ನ ಕೂಡ ಅಲ್ಲೀತನಕ ಬರ್ತಿರೇನು?

**ಕವಿ :** ಇಲ್ಲ, ಬರೂದಿಲ್ಲ. ನಾ ಯಾಕ ಬರಬೇಕು? ಕೈಮುಗಿದು ಗೇಟು ತೆಗಿ ಅಂದ್ರ, ನಾ ಯಾಕ ಅಂದಿ. ಈಗ ನೀ ಬಾ ಅಂದ್ರ ನಾ ಯಾಕ ಬರಲಿ?

**ಗಾರ್ಡ್ :** ಹಾಂಗ ಅನಬ್ಯಾಡ್ರಿ ಎಪ್ಪ. ಎಲುಬು ಇಲ್ದ ನಾಲಗಿ ಏನರೇ ಅಂತಿರ್ತದ. ಅದಕ್ಕ ಬೆಲೆ ಕೊಡ್ತಾರೇನ್ರಿಯಪ್ಪ?

**ಕವಿ :** ಅಂದರೆ ನಾಲಗಿಗೆ ಕಿಮ್ಮತ್ತು ಇಲ್ಲ ಎಂದೇನು ನಿನ್ನ ಮಾತಿನ ಅರ್ಥ! ನಾಲಗಿ ಮೇಲೆ ನಾನು ದೊಡ್ಡ ಭಾಷಣ ಮಾಡಬಲ್ಲೆ. ದುರ್ಯೋಧನನ ನಾಲಗೆ, ಕರ್ಣನ ನಾಲಗೆ, ಧರ್ಮರಾಜನ ನಾಲಗೆ, ಕುಂತಿಯ ನಾಲಗೆ, ಕೃಷ್ಣನ ನಾಲಗೆ ಇವು ಸಾಮಾನ್ಯ ನಾಲಗೆಗಳೇನು? ನಾಲಗೆಯ ಬಗ್ಗೆ ಓಲಗೆಳೆದರೆ ನಿನ್ನ ನಾಲಗೆ ಕಿತ್ತು ಹಾಕೇನು, ಹುಷಾರ್.

**ಗಾರ್ಡ್ :** (ಗಲ್ಲ ಗಲ್ಲ ಬಡೆದುಕೊಂಡು) ತಪ್ಪಾಯಿತರಿಯಪ್ಪ. ಬಡವನ ಮಾತ ಹೊಟ್ಯಾಗ ಹಾಕೊಳ್ಳರಿ.

ಕವಿ : ಸರಿ. ಅದು ದೆವ್ವ ಹೌದೋ ಅಲ್ಲೋ ಅಂತ ಪರೀಕ್ಷೆ ಮಾಡೂದರ ಅವಶ್ಯಕತೆ ಏನೈತಿ? ಅದರ ಪಾಡಿಗೆ ಅದನ್ನ ಬಿಟ್ಟು ಬಿಡು.

ಗಾರ್ಡ್ : ಅಕಸ್ಮಾತ್ ಅದು ದೆವ್ವ ಆಗಿರಲಿಲ್ಲ ಅಂದ್ರ....?

ಕವಿ : ಅದಕ್ಕೇನು ಮಾಡುದೈತಿ? ಅಲ್ಲಿ ನಿಂತದ್ದು ಮನುಷ್ಯ ಆಗಿದ್ದರ ಅವನನ್ನ ಕೊಂದು ಹಾಕಿ ದೆವ್ವ ಆಗುವ ಹಂಗ ಮಾಡುವ ಯೋಚನೆ ಇದೆಯೇನು?

ಗಾರ್ಡ್ : ಅದಲ್ಲರಿಯಪ್ಪ ಪ್ರಶ್ನೆ. ಅಂವ ಮನುಷ್ಯನೇ ಆಗಿದ್ದರ ದರ ದರ ಸತ್ತ ನಾಯಿ ಎಳ್ದಂಗ ಎಳ್ಕೊಂಡು ಬಂದು ಈ ಗೇಟಿನ ಹೊರಗ ಹಾಕ್ತೀನರಿಯಪ್ಪ.

ಕವಿ : ಅದು ದೆವ್ವನೇ ಆಗಿದ್ದರ ಅದು ನಿನ್ನ ರಟ್ಟೆ ಹಿಡಿದು ಸತ್ತ ಹಾವಿನ್ನ ಹದ್ದು ಎತ್ಕೊಂಡು ಹೋಗುವ ಹಾಗೆ ನಿನ್ನ ಎತ್ಕೊಂಡು ಒಯ್ದು ಆ ಬಾವಿಯೊಳಗ ನೂಕಿ ಬಿಡತ್ತದ.

ಗಾರ್ಡ್ : [ಗಾಬರಿಯಾಗುವನು] ಹಾಗಂದರ ಏನು ಮಾಡೋಣರಿ ಸಾಹೇಬರ? ನೀವೂ ನನ್ನ ಕೂಡ ಬಂದ್ರ ಅದೇನೂ ಮಾಡೂದಿಲ್ಲರಿ.

ಕವಿ : ಅಂದ್ರ ನನ್ನನ್ನೂ ಕಟ್ಕೊಂಡು ಬಾವಿ ಹಾರಬೇಕಂತ ಮಾಡೀಯೇನು?

ಗಾರ್ಡ್ : ಅಲ್ಲ ತಗಿರಿ ಸಾಹೇಬರ .ನೀವು ಕವಿಗಳು. ನಿಮ್ಮನ್ನ ಕಂಡರ ದೆವ್ವ ಅಂಜಬಹುದು ಅಂತ ಹೇಳ್ದೆ.

ಕವಿ : ಅಲ್ಲಯ್ಯಾ. ನೀನು ಮನುಷ್ಯ. ನೀನೇ ನನ್ನ ಮಾತು ಕೇಳ್ಲಿಲ್ಲ. ಇನ್ನ ಆ ದೆವ್ವ ಹ್ಯಾಂಗ ಕೇಳ್ತದ? ಇರಲಿ ಬಿಡು. ನೀನು ಕರೀತೀ ಅಂದ್ರ ನಾನು ಬರ್ತೇನೆ. ನಡೆ.

[ಗಾರ್ಡ್ ಗೇಟಿನ ಕೀಲಿ ತಗೆದಂತೆ ನಟಿಸುವನು. ಗೇಟಿನ ಹಿಂಬದಿಯಲ್ಲಿ ನಿಂತ ಆ ವ್ಯಕ್ತಿಯ ಮೇಲೆ ಬೆಳಕು ಚೆಲ್ಲಬೇಕು. ಆ ವ್ಯಕ್ತಿ ಒಳ್ಳೆಯ ಉಡುಪು ಧರಿಸಿರುವನು. ಇವರನ್ನು ಕಂಡು ಬೆದರಿದಂತೆ ಕಾಣುವನು. ಗಾರ್ಡ್ ಆ ವ್ಯಕ್ತಿಯ ರಟ್ಟೆ ಹಿಡಿದು ಸ್ವಲ್ಪ ಮುಂದೆ ಬರುವನು]

ಗಾರ್ಡ್ : [ತರುಣನ ಕಡೆ ನೋಡಿ] ಸಾಹೇಬರ. ನಾವು ದೆವ್ವ ಅಂತ ತಿಳಿದಿದ್ದ ದೊಡ್ಡ ದೆವ್ವ (ರಟ್ಟೆ ಹಿಡಿದೆಳೆದು) ಇಲ್ಲೈತಿ ನೋಡ್ರಿ.

ಕವಿ : ಯಾರಯ್ಯಾ ನೀನು, ಕಂಪೌಂಡು ಹಾರಿ ಗಾರ್ಡನ್‌ದೊಳಗ ಬಂದಿರುವುದು ತಪ್ಪಲ್ಲವೆ?

ಗಾರ್ಡ್ : ಅವನನ್ನೇನು ಕೇಳುದೈತ್ರಿ ಸಾಹೇಬರ, ಸೂಳೀ ಮಗನ್ನತಂದು. ಇಲ್ಲೇ ಗಾಂಧಿ ಚೌಕಿನ ಹತ್ತಿರ ಸ್ಟೇಷನ್ ಐತಿ, ಅವನನ್ನ ಮಾಮಾಗೊಳ ಕೈಯಾಗ ಕೊಟ್ಟು ಬರ್ತೀನಿ ತಾಳ್ರಿ. (ವ್ಯಕ್ತಿಯ ಕೈಹಿಡಿದು ಎಳೆಯುವನು, ಅವನು ಕೊಸರಿಕೊಳ್ಳುವನು)

**ವ್ಯಕ್ತಿ :** ಬಿಡ್ರಿ ಬಿಡ್ರಿ. ನಾ ಏನು ದೊಡ್ಡ ತಪ್ಪ ಮಾಡೀನಿ ಅಂತ ಹಾಂಗ ಹೇಳ್ತೀರಿ?

**ಗಾರ್ಡ್ :** ದೊಡ್ಡ ತಪ್ಪ ಅಂದ್ರ ಎಂಥದಪ್ಪ ಮಹಾನುಭಾವ? ಬಡ್ಡಿ ಮಗ್ನ, ನನ್ಗ ಸಿಟ್ಟು ಬಂತಂದ್ರ ನಿನ್ನ ಕುತ್ತಿಗಿ ಅಲ್ಲಿಂದ ಜಾಗ ಬಿಡ್ತದ, ಗೊತ್ತೇನು? [ಈಗ ಹಿಂಬದಿಯ ಲೈಟು ಆರಿ ಗೇಟಿನ ಮೇಲೆ ಬೆಳಕು ಚೆಲ್ಲಬೇಕು. ಹದಿನೆಂಟು ವರ್ಷದ ಯುವತಿ ಸಾವಕಾಶವಾಗಿ ಗೇಟು ತಳ್ಳಿಕೊಂಡು ಗಾರ್ಡನ್‌ನ ಒಳಗೆ ಬರುವಳು. ಗಾರ್ಡನ ಲಕ್ಷ್ಯ ಆ ಹುಡುಗಿಯ ಕಡೆಗೆ ಹೋಗುವುದು]

**ಗಾರ್ಡ್ :** ಸಾಹೇಬರ, ಅಲ್ಲಿ ನೋಡ್ರಿ, ಗೇಟನೊಳ್ಗ ಒಂದು ಹುಡುಗಿ ಬರ್ತಿರುವ್ಹಂಗ ಕಾಣ್ತದ.

**ಕವಿ :** ಬರ್ತಿರುವ ಹಾಗೆ ಅಲ್ಲೊ ಪೆದ್ದ, ಒಳಗ ಬಂದೇ ಬಿಟ್ಟಾಳ.

**ಗಾರ್ಡ್ :** ಸಾಹೇಬರ ನನ್ಗ ದಯವಿಟ್ಟು ಸಹಾಯ ಮಾಡ್ರಿ. ಇಂವ ಕಂಪೌಂಡ್ ಹಾರಿ ಬಂದ, ಅವಳು ಗೇಟು ತೆರ್‍ದು ಬಂದಳು. ಅಂದ್ರ ಇಬ್ಬರೂ ಮಾತಾಡಕೊಂಡೇ ಇಲ್ಲಿಗೆ ಬಂದಾರ. ಮೊನ್ನೆ ಇಬ್ಬರು ಸತ್ತರು ಅಂತ ಹೇಳ್ದೆನಲ್ಲ. ಅವರೂ ಹೀಂಗ ನಮ್ಮ ಕಣ್ಣು ತಪ್ಪಿಸಿ ಬಂದು ಬಾವ್ಯಾಗ ಬಿದ್ದರು. ಅವರು ಸಾಯಬೇಕಂದ್ರ ಸಾಯ್ಲಿ. ಆದರ ಸತ್ತು ನಮ್ಮ ನೌಕರಿ ಕಳೀಬಾರ್ದು, ಅಷ್ಟ. ಯಪ್ಪಾ, ನೀವ! ಇಂವನ ರಟ್ಟೆ ಹಿಡಿರಿ. ಅಂವ ಎಷ್ಟು ಕಿಸ್ತರೂ ಸರಳ ಬಿಡಬ್ಯಾಡ್ರಿ, ನಾ ಅಲ್ಲಿಗಿ ಹೋಗಿ ಆ ಬಾಯಿನ್ನ ಹಿಡ್ಕೊಂಡು ಬರ್ತೀನಿ. [ಕವಿ ತರುಣ ವ್ಯಕ್ತಿಯ ರಟ್ಟೆ ಹಿಡಿಯುವನು, ಅವನು ಕೊಸರಿಕೊಂಡಂತೆ ಮಾಡುವನು. ಗಾರ್ಡ್ ಗೇಟಿನ ಬಳಿ ಹೋಗಿ ಅಲ್ಲಿ ಕಲ್ ಬೆಂಚಿನ ಮೇಲ ಕುಳಿತಿದ್ದ ಯುವತಿಯನ್ನು ಮುಂದೆ ಹಾಕಿಕೊಂಡು ಬರುವನು. ಆ ವ್ಯಕ್ತಿ ಯುವತಿಯನ್ನು ನೋಡಿ ಮುಗುಳ್ನಗುವನು. ಅವಳೂ ಕೂಡ]

**ಗಾರ್ಡ್ :** ಸಾಹೇಬರ ನೋಡಿದರ್‍ಯಾ ಇವರ ನಾಟ್ಕಾನ. ಖರೆ ಖರೆ ಹೇಳ್ರಿ, ನೀವು ಯಾರು? ಇಲ್ಲಿಗ್ಯಾಕ ಬಂದ್ರಿ? ನಿಮ್ಮ ಉದ್ದೇಶವೇನು?

**ವ್ಯಕ್ತಿ :** [ಕವಿಯಿಂದ ಕೈ ಬಿಡಿಸಿಕೊಂಡು] ನನ್ನ ಹೆಸರು ರಾಜಕುಮಾರ, ಇವಳ ಹೆಸರು ರಾಣಿ. ನಾವಿಬ್ಬರೂ ಪ್ರೇಮಿಗಳು (ರಾಣಿ ನಾಚುವಳು). ಆದರೆ ನೀವು ತಿಳ್ದಂಗ ನಾವು ಪ್ರಾಣ ಕಳಕೊಳ್ಳಾಕ ಇಲ್ಲಿಗಿ ಬಂದಿಲ್ಲ.

**ಗಾರ್ಡ್ :** ಇನ್ನಾವ ಘನಕಾರ್ಯ ಮಾಡೂದಕ್ಕ ಇಲ್ಲಿ ಬಂದಿರ್‍ರಿ?

**ಕವಿ :** ಏನಯ್ಯಾ, ಪ್ರೇಮಿಗಳಿಗೆ ಹಾಂಗೆಲ್ಲ ಅನ್ನಕೂಡದು. ರಾಜಕುಮಾರರೆ, ನೀವು ಇಲ್ಲಿಗೆ ಬಂದದ್ದು ಯಾಕೆಂದು ಹೇಳುವಿರಾ?

**ರಾಜಕುಮಾರ :** ನಿನ್ನೆ ಸಂಜೆ ರಾಣಿ ನದಿ ಹತ್ತಿರ ಸಿಕ್ಕಿದ್ದಳು. ಅವಳಿಗೆ ಅಲ್ಲಿಗೆ ಬರೂದಕ್ಕ

ಹೇಳಿದ್ಲೆ. ಅದಕ್ಕವಳು 'ನೀ ಹೇಳಿದ್ದಂಗ ನಾನು ಕೇಳೀನಿ. ಈಗ ನಾ ಹೇಳ್ದಾಂಗ ನೀ ಕೇಳು' ಅಂದಳು. ಆಗಲಿ ಅಂದೆ. ಅದಕ್ಕವಳು ಹುಣ್ಣಿಮೆ ರಾತ್ರಿಯಲಿ ಆನಂದ ಉದ್ಯಾನವನದಲಿ ಕುಳಿತು ಚಂದ್ರನನ್ನ ನೋಡುವ ಆಸೆಯಾಗಿದೆ. ಅಲ್ಲಿಗೆ ಕರೆದುಕೊಂಡು ಹೋಗು ಅಂದಳು. ರಾತ್ರಿ ಹೊತ್ತು ಗಾರ್ಡ್‌ನಾದಾಗ ಕೂಡ್ಲಲು ಬಿಡೂದಿಲ್ಲ ಅಂತ ಗೊತ್ತಿತ್ತು. ಅದಕ್ಕಾಗಿ ಉಪಾಯ ಮಾಡ್ದೆ. ಆದರೆ ಪ್ಲ್ಯಾನ್ ಯಶಸ್ವಿ ಆಗ್ಲಿಲ್ಲ. (ಕವಿಯ ಕಡೆಗೆ ನೋಡಿ) ನೀವು ಇರದಿದ್ದರ ಚಲೋ ಆಗ್ತಿತ್ತು.

ಕವಿ : ಅದು ಹೇಗೆ?

ಕುಮಾರ : ಹ್ಯಾಂಗಂದ್ರ, ನಾನು ಕಂಪೌಂಡ್ ಹಾರಿ ಒಳಗ ಬಂದಿದ್ದು ನೋಡಿ ಇವರು ನನ್ನ ಅಟ್ಕೊಂಡು ಬರುತ್ತಿದ್ದರು. ಮೊನ್ನೆ ಸತ್ತ ಪ್ರೇಮಿಗಳು ದೆವ್ವ ಆಗ್ಯಾರ ಅಂತ ಗೊತ್ತಿದ್ದುದರಿಂದ ಇವರು ನಾ ಹೋದಲ್ಲೆಲ್ಲ ಬರ್ತಿರಲಿಲ್ಲ. ಆ ಹೊತ್ತಿನ್ಯಾಗ ರಾಣಿ ಗೇಟು ತಳ್ಕೊಂಡು ಒಳಗ ಬಂದು ಬಾವಿಯ ಹತ್ತಿರ ಕೂಡುತ್ತಿದ್ದಳು. ಗಾರ್ಡ್ ಭಯದಿಂದ ಗೇಟು ಹಾಕ್ಕೊಂಡು ಹೋಗ್ತಿದ್ದರು. ನಾವು ಬಾವಿಕಟ್ಟಿ ಮ್ಯಾಗ ಕುಳಿತು ಚಂದ್ರನ್ನ ನೋಡುತ್ತ ಹಾಯಾಗಿ ಇರಬಹುದಿತ್ತು.

ಕವಿ : ಅಲ್ಲಯ್ಯಾ, ಆ ಪ್ರೇಮಿಗಳು ಬಿದ್ದು ಸತ್ತಿರುವ ಬಾವಿ ಮ್ಯಾಗ ಕುಳಿತು ಚಂದ್ರನನ್ನ ನೋಡಬಹುದಾಗಿತ್ತು ಅಂತೀಯಲ್ಲಾ. ನಿನ್ನ ಭಯ ಆಗೂದಿಲ್ಲವೆ?

ಕುಮಾರ : ಭಯಪಟ್ಟರ ಪ್ರೀತಿ ಮಾಡಾಕ ಆಗ್ತದೇನ್ರಿ? (ರಾಣಿಯ ಕಡೆ ನೋಡುವನು)

ರಾಣಿ : ಅವನು ಹೇಳೂದು ಖರೆ ಅದ. ನನ್ಗ ಚಂದ್ರ ಅಂದ್ರ ಭಾಳ ಇಷ್ಟ. ಅದರಲ್ಲೂ ಹುಣ್ಣಿಮೆ ದಿನ ಅವನನ್ನ ನೋಡೋದು ಅಂದ್ರ ಇನ್ನೂ ಸಂತೋಷ. ಉದ್ಯಾನವನದಾಗ ಕುಂತು ನೋಡೋದು ಅಂದ್ರ ಸ್ವರ್ಗ ಸಿಕ್ಕಷ್ಟೇ ಸಂತೋಷ.

ಗಾರ್ಡ್ : ನಿಮ್ಮ ಸಂತೋಷ ಹಾಳು ಬಾವ್ಯಾಗ ಬೀಳ್ಲಿ. ನನ್ನ ನೌಕರಿ ಕಳೀಲಿಕ್ಕೆ ನೀವು ಹುಟ್ಟೀರಿ ಅಂತ ಕಾಣ್ತದ. ದೊಡ್ಡ ಕಮಾಯಿ ಮಾಡಿರಿ. ಆಯ್ತು ನಡ್ರಿ, ಹೊರಗ ಹೋಗ್ರಿ.

ರಾಜಕುಮಾರ : ಅಣ್ಣ, ಒಳಗ ಬಂದದ್ದಾಗೇದ. ಒಂದು ಹತ್ತು ನಿಮಿಷ ಕುಂತ ಬರ್ತೀವಿ, ತಡ್ಕೋರಲಾ.

ರಾಣಿ : ಹೌದಣ್ಣ. ಆಸೆ ಪಟ್ಟು ಬಂದೀವಿ. ಸ್ವಲ್ಪ ಹೊತ್ತು ಇಲ್ಲಿ ಕೂಡೂದಕ್ಕ ಬಿಡಣ್ಣ.

ಗಾರ್ಡ್ : ಹತ್ತು ನಿಮಿಷ ಬಿಟ್ಟರ ಏನಲ್ಲಾ ಮಾಡ್ಕೊಂಡು ಬಿಡ್ತೀರಿ.

ರಾಜ ಮತ್ತು ರಾಣಿ: ಇಲ್ಲ ಇಲ್ಲ. ಬೇಕಾದರ ನೀನೂ ಇಲ್ಲೇ ಇದ್ದು ಬಿಡಣ್ಣ.

ಕವಿ : ಅಯ್ಯಾ, ಯಾಕೆ ಪೇಮಿಗಳನ್ನು ಗೋಳು ಹೊಯ್ಕೊತ್ತಿಯಾ? ಪ್ರೇಮಿಗಳು ಹಕ್ಕಿಗಳ ಹಾಗೆ ಹಾರಾಡಿಕೊಂಡಿರಬೇಕು. ಈ ಉದ್ಯಾನವನಕ್ಕೆ ಹಕ್ಕಿಗಳು ಬರದಂಗ ತಡಿಯಲು

ಬರ್ತದೇನು? ನಾನು ಕವಿ. ನನ್ನ ಕಾವ್ಯದಲ್ಲಿ ಪ್ರೇಮಿಗಳಿಗೆ ಅನ್ಯಾಯ ಆಗದ ಹಾಗೆ, ಅವರಿಗೆ ಯಾರಿಂದಲೂ ತೊಂದರೆ ಆಗದ ಹಾಗೆ ನೋಡ್ಕೊಂಡಿದ್ದೀನಿ. ಈಗ, ನಿಜ ಜೀವನದಲ್ಲಿ ಪ್ರೇಮಿಗಳು ಕಷ್ಟದಲ್ಲಿ ಸಿಕ್ಕಿಹಾಕಿಕೊಳ್ಳುದುಕ್ಕ ನಾನು ಬಿಟ್ಟೇನೆಯೆ?

**ಗಾರ್ಡ್**: ಸಾಹೇಬರ ನೀವು ಹೀಂಗ ಹೇಳಿದ್ರ ನನ್ನ ನೌಕರಿ ಹೋದಂಗs ಅವರನ್ನ ಇಲ್ಲಿ ಕೂಡಾಕ ಬಿಡಲು ಸಾಧ್ಯವಿಲ್ಲ.

**ಕವಿ** : ಪ್ರೇಮಿಗಳು ಪಕ್ಷಿಗಳಂತೆ ಸ್ವತಂತ್ರವಾಗಿರಬೇಕಯ್ಯಾ. ನಿಮ್ಮ ಸರ್ಕಾರಕ್ಕೆ ಅಷ್ಟೂ ಬುದ್ಧಿಯಿಲ್ಲವೆ? ಪಕ್ಷಿಧಾಮ, ಪ್ರಾಣಿ ಸಂಗ್ರಹಾಲಯ ಅಂತ ನಿರ್ಮಿಸುತ್ತಾರಲ್ಲ ಹಾಗೆ ಪ್ರೇಮಿಗಳ ಧಾಮ ಅಥವಾ ಪ್ರೇಮಿಗಳ ತಂಗುದೋಟ ಅಂತದ್ದೊಂದು ನಿರ್ಮಾಣ ಮಾಡಿದರ ನಿಮ್ಮ ಸರ್ಕಾರದ ಗಂಟೇನು ಹೋಗ್ತದ?

**ಗಾರ್ಡ್** : ನೀವು ತಿಳ್ದವರು, ಕವಿಗಳು ನೀವ ಹಿಂಗ ಮಾತಾಡಿದರ ಸಮಾಜದ ಗತಿಯೇನ್ರಿ ಸಾಹೇಬರ. ಧರ್ಮ ಅಧೋಗತಿಗೆ ಇಳೀತದ.

**ಕವಿ** : ಮಾತೆತ್ತಿದರೆ ಸಮಾಜ, ಧರ್ಮ ಅಂತ ಶುರು ಮಾಡ್ತೀಯಾ. ಹೇಳು, ನಿನ್ನ ಸಮಾಜ, ಧರ್ಮ ಏನು ಹೇಳುತ್ತದೆ? ನೋಡಯ್ಯಾ ಈ ಪ್ರೀತಿ, ಪ್ರೇಮ ಅಂತಾದ್ದೊಂದು ಇರದಿದ್ದರ ನಿನ್ನ ಸಮಾಜ, ಧರ್ಮ ಅಸ್ತಿತ್ವದಲ್ಲೇ ಇರುತ್ತಿರಲಿಲ್ಲ.

**ಗಾರ್ಡ್** : [ಬಾಯಿಯ ಮೇಲೆ ಕೈಯಿಟ್ಟು] ಹಾಂಗಂದ್ರ ಹ್ಯಾಂಗ್ರಿ ಸಾಹೇಬರ. ಮನುಷ್ಯ ಮತ್ತು ಪ್ರಾಣಿಗಳ ನಡುವ ಅಂತರ ಇಲ್ಲಾ ಅಂತಿರೇನು?

**ಕವಿ** : ಇದೆ. ಆದರೆ ಅದು ಇರಕೂಡದು ಅಂತಾ ನಾ ಹೇಳ್ತೇನೆ. ಮನುಷ್ಯನೂ ಕೂಡ ಒಂದು ಪ್ರಾಣಿ ಅಲ್ಲವೆ? ಈ ಪ್ರಾಣಿ ಬೇರೆ ಪ್ರಾಣಿಗಳಿಗಿಂತ ಭಿನ್ನವಾಗಿಲ್ಲ. ಬೇರೆ ಪ್ರಾಣಿಗಳು ಮಾಡುವುದನ್ನೇ ಈತನೂ ಮಾಡ್ತಾನೆ. ನೋಡಯ್ಯಾ, ನೀನು ಏನೇ ಹೇಳು, ಪ್ರೇಮಿಗಳಿಗೆ ಸ್ವಾತಂತ್ರ್ಯ ಕೊಡಬೇಕು.

**ಗಾರ್ಡ್** : ಕೊಡಿಸರಿಯಪ್ಪಾ, ನಾಯಾಕ ಬ್ಯಾಡ ಅನ್ನಲಿ?

**ಕವಿ** : ನಾನೇನಾದರೂ ಈ ದೇಶದ ಪ್ರಧಾನಮಂತ್ರಿ ಆದರ ನಾನು ಮೊದಲು ಮಾಡುವ ಕೆಲಸ ಇದೇ. ಪ್ರೇಮಿಗಳಿಗಾಗಿ ಪ್ರತಿಯೊಂದು ಊರಲ್ಲಿ ಒಂದು ಪ್ರೇಮ ಧಾಮ ನಿರ್ಮಾಣ ಮಾಡ್ತೀನಿ. ಇದರ ಗೇಟು ೨೪ ತಾಸೂ ತೆರೆದಿರುತ್ತದೆ. ಅಲ್ಲೊಬ್ಬ ನಿನ್ನಂಥ ಕಾವಲುಗಾರನನ್ನ ಇಡ್ತೇನೆ, ಪ್ರೇಮಿಗಳಲ್ಲದವರನ್ನು ಹೊರಹಾಕಲು.

**ಗಾರ್ಡ್** : ನೀವು ದೊಡ್ಡ ಕ್ರಾಂತಿ ಮಾಡುವರು ಅದೀರಿ ಅಂತ ಕಾಣ್ತದ.

**ಕವಿ** : ಹೌದಯ್ಯ, ಪ್ರೇಮಕ್ರಾಂತಿ ಮಾಡುತ್ತೇನೆ. ಪ್ರೇಮಿಗಳಿಗಾಗಿ ಒಂದು ವಿಶೇಷ ಪ್ಯಾಕೇಜ್ ಕೊಡುತ್ತೇನೆ. ಒಂದು ಪಂಚವಾರ್ಷಿಕ ಯೋಜನೆಯಲ್ಲಿ ಇದನ್ನು ಸೇರಿಸುತ್ತೇನೆ.

**ಗಾರ್ಡ್** : ಹೌದು, ನೀವೇನು ಮಾಡ್ತೀರಿ?

ಕವಿ : ನಾನು ಪ್ರೇಮಕಾವ್ಯ ರಚಿಸುತ್ತೇನೆ. ಕಾಳಿದಾಸ ಕಾವ್ಯ ಮೀರಿಸುವಂಥ ಇನ್ನೊಂದು ಶಕುಂತಲ ರಚಿಸುತ್ತೇನೆ.

ಗಾರ್ಡ್ : ಹಾಗಾದರೆ ಈ ದೇಶ ಉದ್ಧಾರವಾದ್ಹಂಗೆ !

ಕವಿ : ಕೇಳ್ತಿಯೇನಯ್ಯಾ. ದೇಶದ ಉದ್ಧಾರ ಅಂದರ್ರೇನಂತ ತಿಳಿದಿ? ಯುದ್ಧ ಮಾಡಿದ್ರ ದೇಶ ಉದ್ಧಾರ ಆಗ್ತದೇನು? ಜಾತಿ, ಧರ್ಮದ ಹೆಸರಿನ ಮೇಲೆ ರಾಜಕೀಯ ಮಾಡಿದರ ದೇಶ ಉದ್ಧಾರ ಆಗ್ತದೇನು? ನನಗೆ ದೇಶ ಉದ್ಧಾರವಾಗೋದು ಬೇಕಿಲ್ಲ. ಜೀವಿ, ಈ ಮಾನವ ಜೀವಿ ಉದ್ಧಾರವಾಗಬೇಕು.

ಗಾರ್ಡ್ : ಹ್ಯಾಂಗ ಅಂತೀರಿ ಸಾಹೇಬರ?

ಕವಿ : ಹೇಗಂದರೆ, ಮನುಷ್ಯ ಮೊದಲು ಏನಾಗಿದ್ದನೋ ಅದೇ ಸ್ಥಿತಿಗೆ ಪುನಃ ಹೋಗಬೇಕು. ಅವನು ಮೊದಲು ಸಾಮಾನ್ಯ ಪ್ರಾಣಿಯಾಗಿದ್ದ. ಆದರೆ ಬಹಳ ಖುಷಿಯಿಂದ ಇದ್ದ. ಬದುಕಿರುವಷ್ಟು ಕಾಲ ತಿಂದುಂಡು, ಸುಖವಾಗಿ ಮಲಗಿ, ಪ್ರೀತಿ ಮಾಡಿ ಸತ್ತು ಹೋಗ್ತಿದ್ದ. ಈಗ ನೋಡು, ಚಿಂತಿ ಮಾಡಿ ಮಾಡಿ, ಟೆನ್ಷನ್ ಮಾಡಿಕೊಂಡು ಎಂತೆಂಥ ರೋಗಗಳನ್ನು ತಂದುಕೊಂಡು ಎದುರಿಗೆ ಮೃಷ್ಟಾನ್ನ ಭೋಜನವಿದ್ದರೂ ಮುಟ್ಟಲಾರದ, ಪಕ್ಕದಲ್ಲಿ ತ್ರಿಲೋಕ ಸುಂದರಿಯಿದ್ದರೂ ಪ್ರೀತಿಸಲಾಗದ ಸ್ಥಿತಿ ತಲುಪಿದ್ದಾನೆ. ಹೇಳು ಇದು ಅವನಿಗ ಬೇಕಾಗಿತ್ತ? ಥೂ ಮಾನವ ಜನ್ಮ. ಅದಕ್ಕಾಗಿಯೇ ಹೇಳುತ್ತೇನೆ. ಸ್ನೇಹಿತ, ಪ್ರೇಮಿಗಳನ್ನು ಬಂಧನದಲ್ಲಿ ಇಡಕೂಡದು ಅಂತ.

ಗಾರ್ಡ್ : ಆದ್ರೂ ಸಮಾಜದ ಸ್ವಾಸ್ಥ್ಯ ಕೆಡಬಾರದಲ್ಲಾ, ಸಾಹೇಬರೆ.

ಕವಿ : ಹಾಳಾಗಿ ಹೋಗಯ್ಯಾ. ಈಗ ಈ ಉದ್ಯಾನವನದ ಗೇಟು ತೆಗೀತಿಯೋ ಇಲ್ಲೋ, ಹೇಳಿ ಬಿಡು. ಕೊನೆಗೆ ನಾನು ಈ ಪಟ್ಟಣದ ಹೊರಗೆ ಬಟಾ ಬಯಲಿನಲ್ಲಿ ಮೈ ಮೇಲಿನ ಬಟ್ಟೆ ಕಳೆದು, ಕುಳಿತು ಆಕಾಶದಲ್ಲಿನ ಚಂದ್ರನನ್ನು ನೋಡುತ್ತೇನೆ.

ಗಾರ್ಡ್ : ಅಷ್ಟು ಮಾಡ್ರಿ ಸಾಹೇಬರ. ಆದರ ......

ಕವಿ: ನನ್ನ ಮಾತು ಕೇಳಯ್ಯ, ಪ್ರೇಮಿಗಳಿಗೆ ತೊಂದರೆ ಕೊಡಬೇಡ.

ಗಾರ್ಡ್ : ಕವಿಗಳೆ, ನಿಮ್ಗ ಇದೆಲ್ಲ ಗೊತ್ತಾಗುವುದಿಲ್ಲ.

ಕವಿ : ಅಂದ್ರೆ?

ರಾಣಿ : ಓ ನೀವು ಕವಿಗಳೇನು? ಹಾಗಿದ್ದರೆ ನಮ್ಮ ಸುದೈವ ಅಂದ್ಕೊಳ್ತೀವಿ. ನೀವು ಎಂಥ ಕಾವ್ಯ ಬರಿದಿದ್ದೀರಿ ಕವಿಗಳೆ?

ಕವಿ : ನಾನು ಪ್ರೇಮ ಕವಿ. ಪ್ರೀತಿಯ ಕವಿ. ನಾನು ಬರೀ ಪ್ರೇಮಕಾವ್ಯಗಳನ್ನೇ ಬರೆದಿರುವುದು.

ಗಾರ್ಡ್ : ನೀವು ಏನಾದರೂ ಬರೀರಿ. ಆದರ ಈಗ ಎಲ್ಲರೂ ಇಲ್ಲಿಂದ ಜಾಗ ಖಾಲಿ ಮಾಡಿರಿ.

**ರಾಜ :** ಮತ್ತೆ ಅದೇ ಮಾತು ಹೇಳ್ತಿಯಲ್ಲಣ್ಣ.

**ರಾಣಿ :** ನಮ್ಮ ಕಷ್ಟ ಅರ್ಥ ಮಾಡಿಕೊಳ್ಳಣ್ಣ.

**ಗಾರ್ಡ್ :** ಏನು ಅಣ್ಣ ಅಣ್ಣ ಅಂತ ಹಚ್ಚೀರಿ. ನಾನು ನಿಮ್ಮಂಥ ತಮ್ಮ, ತಂಗ್ಯಾರನ ಭಾಳ ಮಂದಿ ನೋಡೀನಿ. ಸುಮ್ಮನ ಜಾಗ ಖಾಲಿ ಮಾಡ್ರಿ.

**ಕವಿ :** ಅವರಿಗ್ಯಾಕ ಕಷ್ಟ ಕೊಡ್ತಿಯಪ್ಪ ನೀನು. ಸ್ವಲ್ಪ ಹೊತ್ತು ಅವರು ಅಲ್ಲಿ ಕೂಡಲಿ ಬಿಡು. ನಾನೂ ಇಲ್ಲೇ ಸ್ವಲ್ಪ ಹೊತ್ತು ಕೂತು ಚಂದ್ರನನ್ನ ನೋಡ್ತೀನಿ. ನೀನು ಗೇಟಿನ ಹತ್ತಿರ ಹೋಗಿ ಕೀಲಿ ಹಾಕಿ ಅಲ್ಲೇ ನಿಂತಿರು.

**ರಾಜ ರಾಣಿ :** ಅಷ್ಟು ಮಾಡಣ್ಣ [ಕೈಮುಗಿಯುವರು] (ಗಾರ್ಡ್ ಗೇಟಿನ ಕಡೆಗೆ ಹೋಗುವನು. ಸ್ಟೇಜಿನ ಒಂದು ಬದಿಗೆ ಕವಿ, ಇನ್ನೊಂದು ಬದಿಗೆ ರಾಜ, ರಾಣಿ ನಿಂತು ಚಂದ್ರನನ್ನು ನೋಡತೊಡಗುತ್ತಾರೆ. ಗೇಟಿನ ಹತ್ತಿರ ಗಾರ್ಡ್ ಹೋದಾಗ ಅಲ್ಲಿಗೆ ಪೊಲೀಸ್ ಬರುತ್ತಾನೆ. ಈಗ ಬೆಳಕು ಗಾರ್ಡ್ ಮತ್ತು ಪೊಲೀಸನ ಮೇಲೆ ಬೀಳಬೇಕು)

**ಪೊಲೀಸ್ :** (ಗಾರ್ಡ್‌ನನ್ನು ಉದ್ದೇಶಿಸಿ) ಅಲ್ಲಿ ಬಾವಿ ಹತ್ತಿರ ನಿಂತ್ಕೊಂಡು ಏನು ಮಾಡ್ತಿದ್ದಿ?

**ಗಾರ್ಡ್ :** ಸಾಹೇಬರ ಆ ಕಡೆ ಒಂದು ರೌಂಡ್ ಹಾಕಿ ಬರೂದಕ್ಕ ಹೋಗಿದ್ದೆ.

**ಪೊಲೀಸ್ :** ಮೊನ್ನೆ ಪ್ರೇಮಿಗಳು ಸತ್ತಾಗಿನಿಂದ ನಮ್ಮ ಸಾಹೇಬ ನನ್ನ ತಲಿ ತಿನ್ನಾಕ ಹತ್ಯಾನ. ನಾಲ್ಕು ಸರ್ತೆ ರೌಂಡ್ ಹಾಕಾಕ ಹೇಳ್ಯಾನ.

**ಗಾರ್ಡ್ :** ಹೌದರಿ ಸಾಹೇಬರ. ನಮ್ಗೂ ನಮ್ಮ ಸಾಹೇಬರ ಹಿಂಗಽ ಹೇಳ್ಯಾರ. ಕಣ್ಣಾಗ ಎಣ್ಣಿ ಹಾಕ್ಕೊಂಡು ಕೆಲಸ ಮಾಡು ಅಂತ ಅಂದಾರ.

**ಪೊಲೀಸ್ :** ( ಉದ್ಯಾನವನದಲ್ಲಿನ ಬಾವಿಯ ಕಡೆ ನೋಡುವನು) ಬಾವಿ ಹಂತ್ಯಾಕ ಸ್ವಲ್ಪ ಹೋಗಿ ಬರ್ತೀನಿ. ನೀನು ಇಲ್ಲೆ ನಿಂತಿರು.

**ಗಾರ್ಡ್ :** ಯಾಕ್ರಿ ಸಾಹೇಬರ, ನೀವ್ಯಾಕ ಅಲ್ಲಿ ಹೊಗ್ತೀರಿ?

**ಪೊಲೀಸ್ :** ನಾನು ಪೊಲೀಸ್. ನಾನು ಎಲ್ಲಿ ಬೇಕಾದರೂ ಹೋಗಬಹುದು. ಆ ಬಾವಿ ಹಂತ್ಯಾಕ ಯಾರೋ ಕುಂತಂಗ ಕಾಣ್ತದ. ಅಲ್ಲಿ ಯಾರೋ ನಿಂತಂಗ ಕಾಣ್ತದ.

**ಗಾರ್ಡ್ :** ಯಾರೂ ಇಲ್ಲರಿ ಸಾಹೇಬರ. ಬೆಳದಿಂಗಳದಾಗ ಗಿಡಗಳ ನೆರಳು ಹಂಗ ಕಾಣ್ತಾದ.

**ಪೊಲೀಸ್ :** ನನ್ನ ಕಣ್ಣಿಗೆ ಸಂಶಯ ಬರುಷ್ಟಂಗ ಮಾಡ್ತೀಯಲ್ಲಾ. ಗಿಡಾನರೇ ಇರವಲ್ಲದ್ಯಾಕ, ದೆವ್ವರೇ ಇರುವಲ್ಲದ್ಯಾಕ. ಅಲ್ಲಿಗಿ ಹೋಗಿ ಬಂದರಽ ನನ್ನ ಜೀವ ಸಮಾಧಾನ ಆಗೋದು.

**ಗಾರ್ಡ್ :** ಯಾಕ ಹೈರಾಣ ಆಗ್ತೀರಿ ಸಾಹೇಬರ. ನೀವು ಕೀಲಿ ತಗಿ ಅಂದ್ರ ನಾನಽ ತಗೀತಿನ್ರಿ.

**ಪೋಲೀಸ್** : ತಗದ ಬಿಡು. ಕಿರಿ ಕಿರಿ ಕಡ್ಡು ಹೋಗ್ಲಿ. ಮೊನ್ನೆ ಆ ಹಾಳಾದ ಪ್ರೇಮಿಗಳು ಸತ್ತ ಮ್ಯಾಗ ನನ್ಗ ಇಲ್ಲಿ ಡ್ಯೂಟಿ ಹಾಕ್ಯಾರ. ಯಾ ಸೂಳೆ ಮಗ ಮಾಡ್ಯಾನೋ ಈ ಪ್ರೀತಿನ ಯಾರಿಗೆ ಗೊತ್ತು. (ಗಾರ್ಡ್ ಕೀಲಿ ತೆಗೆಯುವಂತೆ ನಟಿಸುವನು. ಈಗ ಬೆಳಕು ಅವರ ಮೇಲೆ ಬೀಳುವುದು. ರಾಜ ಹಾಗೂ ರಾಣಿ ಕವಿಯ ಕಡೆಗೆ ಧಾವಿಸಿ ಬರುವರು.)

**ರಾಜ** : ಕವಿವರ್ಯರೆ. ಈಗ ನೀವೇ ನಮ್ಮನ್ನು ಕಾಪಾಡಬೇಕು.

**ರಾಣಿ** : ನಮ್ಮ ಮಾನ, ಪ್ರಾಣ ನಿಮ್ಮ ಕೈಯಲ್ಲೇ ಐತಿ.

**ಕವಿ** : ಆದರೆ ನನ್ನ ಕೈಯಲ್ಲಿ, ಪೆನ್ನು ಹಾಳೆ ಮಾತ್ರ ಇದೆಯಲ್ಲ!

**ರಾಜ** : ಗೇಟನೊಳಗ ಪೋಲೀಸ್ ಬಂದಾನ. ಈಗ ಅಂವ ನಮ್ಮನ್ನ ಸ್ಟೇಷನಕ್ಕ ಎಳಕೊಂಡು ಹೋಗ್ತಾನ.

**ರಾಣಿ** : ಹೌದು ಕವಿಗಳೆ.

**ಕವಿ** : ಹೇಗೂ ಕಂಪೌಂಡ್ ಹಾರಿ ಒಳಗ ಬಂದೀಯಲ್ಲಾ. ಈಗ ಹಾಗೇ ಜಿಗಿದು ಹೊರಗ ಹೋಗಿಬಿಡು.

**ರಾಜ** : ನಾನು ಜಿಗಿದು ಹೋಗಬಹುದು. ಆದರ ಈಕೆ

**ಕವಿ** : ಅದಕ್ಕ ನನಗೇನು ಮಾಡು ಅಂತೀರಿ?

**ರಾಜ** : ಏನಿಲ್ಲ, ಒಂದು ಸಣ್ಣ ನಾಟ್ಕಾ ಮಾಡ್ರಿ. ನಾ ಕಂಪೌಂಡ್‌ನಿಂದ ಜಿಗಿದು ಹೋಗ್ತೀನಿ. ನೀವು ಈಕೆಯ ಪ್ರೇಮಿ ಅಂತಾ ಹೇಳ್ರಿ, ಆಗ ಪೋಲೀಸ್ ಅವಳಿಗೆ ಬೆದರಿಸಿ ಕಳಿಸಿ, ನಿಮ್ಮನ್ನು ಸ್ವಲ್ಪ ಸ್ಟೇಷನ್‌ದವರೆಗೆ ಕರಕೊಂಡು ಹೋಗಿ ಬಿಡ್ತಾನ.

**ಕವಿ** : ಈ ಕೆಲ್ಸ ನೀನೇ ಮಾಡಬಹುದಲ್ಲ. ( ಅಷ್ಟರಲ್ಲಿ ಪೋಲೀಸ್ ಸಮೀಪ ಬರುವನು. ರಾಜ ಕಂಪೌಂಡ್ ಹಾರಿ ಓಡುವನು. ಕವಿ ಮತ್ತು ರಾಣಿ ಪೋಲೀಸನ ಕೈಗೆ ಸಿಕ್ಕಿ ಹಾಕಿಕೊಳ್ಳುವರು)

**ಪೋಲೀಸ್** : (ಕಿತ್ತು ತಿನ್ನುವಂತೆ ನೋಡಿ) ನನ್ಮುಂದ ನಿಮ್ಮ ಆಟ ನಡೆಯೋದಿಲ್ಲ. ನನ್ಗ ಏನೂ ಹೇಳಬ್ಯಾಡ್ರಿ, ನಾ ನಿಮ್ಗ ಏನೂ ಕೇಳೂದಿಲ್ಲ. ಸುಮ್ನೆ ನನ್ನ ಕೂಡ ಸ್ಟೇಷನ್ನಿಗೆ ಬರ್ರಿ, ಏನಪ್ಪ ಗಾರ್ಡ್, ಎಷ್ಟು ರೊಕ್ಕ ಇಸ್ಕೊಂಡು ಈ ಮಕ್ಕಳನ್ನು ಒಳಗ ಬಿಟ್ಟಿ?

**ಕವಿ** : ನೋಡಿ ನನ್ನ ಮಾತು ಕೇಳಿ. ನಾನು ಪ್ರೇಮಿಯಲ್ಲ ಕವಿ, ನಾನು.....

**ಪೋಲೀಸ್** : ಪ್ರೇಮಿ ಅಲ್ಲ, ಕವಿ ಅಂತೀಯಾ? ಹಾಂಗಂದ್ರ ನಾ ಒಪ್ಕೋತೀನಿ ಅಂತ ತಿಳಿದಿಯೇನು? ನನ್ನನ್ನ ದಡ್ಡ ಅಂತ ತಿಳೀಬ್ಯಾಡ. ನಾ ಸಾಕಷ್ಟು ಹಿಂದೀ ಸಿನಿಮಾ ನೋಡೀನಿ. ಪ್ರೇಮಿ ಮತ್ತು ಕವಿ ಬ್ಯಾರೆ ಬ್ಯಾರೆ ಅಲ್ಲ ಅಂತ ನನ್ಗ ಭಾಳ ಚೆನ್ನಾಗಿ ಗೊತ್ತು.

**ಕವಿ :** ನನ್ಮಾತು ಕೇಳಿ ಅಧಿಕಾರಿಗಳೆ, ನಾನು ಖರೆ ಖರೆ ಕವಿ. ಪ್ರೇಮಿಯೂ ಇಲ್ಲೇ ಇದ್ದ. ನೀವು ಬರುತ್ತಿದ್ದುದು ನೋಡಿ ಪರಾರಿಯಾದ.

**ಪೋಲೀಸ್ :** ಭೇಷ್ ಭೇಷ್. ಅಂದ್ರ ಪ್ರೇಮಿ ಮಾಯವಾಗಿ ಹೋಗಿ ಕವಿ ಹುಟ್ಕೊಂಡ ಅಂತ ಹೇಳ್ತೀಯಾ. ನೀನೇನಾದ್ರೂ ಅಂದ್ಕೊ. ನೀನು ಕವಿ ಅಂದ್ರೂ ಸೈ, ಪ್ರೇಮಿ ಅಂದ್ರೂ ಸೈ, ಮತ್ತು ಯೋಗಿ ಅಂದ್ರುನೂ ಸೈ. ಆದರ ನಿನ್ನ ಕೈಗೆ ಬೇಡಿ ಹಾಕಿ ಸ್ಟೇಷನ್ನಿಗೆ ಒಯ್ಯದೆ ಬಿಡೋಲ್ಲ.

**ರಾಣಿ :** ಸಾಹೇಬರ, ನನ್ನ ಮಾತಷ್ಟು ಕೇಳ್ರಲ್ಲಾ.

**ಪೋಲೀಸ್ :** ಎಂದೂ ಸಾಧ್ಯವಿಲ್ಲ. ಒಮ್ಮೆ ಹುಡುಗಿಯ ಮಾತು ಕೇಳೇ ಸಸ್ಪೆಂಡ್ ಆಗೀನಿ. ಈಗ ಮತ್ತ ಅಂಥದ್ದೆ ತಪ್ಪು ಮಾಡಿದರ ನಾನು ಡಿಸ್‌ಮಿಸ್ ಆಗೂದು ಗ್ಯಾರಂಟಿ.

**ಗಾರ್ಡ್ :** ಸಾಹೇಬರ, ನನ್ನ ಮಾತರೇ ಕೇಳ್ರಿ, ನಾನೂ ನಿಮ್ಮಂಗ ನೌಕರಿ ಮಾಡ್ತೀನಿ.

**ಪೋಲೀಸ್ :** ನೀನು ನೌಕರಿ ಮಾಡುವುದರ ಜತೆ ಚಾಕರೀನೂ ಮಾಡ್ತಿ.

**ಕವಿ :** ಅಲ್ರಿ, ನನ್ನ ಮಾತರೇ ಕೇಳ್ರಿ, ನಾನು ನಿಜವಾಗಿಯೂ ಕವಿ. ನನ್ನ ಕೈಯಲ್ಲಿನ ಪೆನ್ನು ಬುಕ್ಕರೇ ನೋಡ್ರಿ.

**ಪೋಲೀಸ್ :** ನಾ ಏನೂ ನೋಡೂದಿಲ್ಲ. ನೋಡಬೇಕಾದದ್ದು ನೋಡೀನಿ, ಈಗ ಮಾಡಬೇಕಾದದ್ದು ಮಾಡಬೇಕಷ್ಟೆ. ಇಬ್ಬರೂ ನಡಿರಿ ಸ್ಟೇಷನ್ನಿಗೆ.

**ರಾಣಿ :** ಸಾಹೇಬರ ನನ್ನ ಮ್ಯಾಗ ಕರುಣೆ ತೋರಿಸಿರಿ.

**ಪೋಲೀಸ್ :** (ವಿಚಾರಿಸಿ) ಸರಿ. ಒಂದು ಕೆಲ್ಸ ಮಾಡಿರಿ. ಈಗ ಇಬ್ಬರೂ ನನ್ನ ಕೂಡ ಸ್ಟೇಷನ್ನಿಗೆ ನಡಿರಿ. (ರಾಣಿಗೆ) ನೀ ಬೇಕಾದರ ಸಾಹೇಬರಿಗೆ ಮುಖ ತೋರಿಸಿ ಹೋಗು. ಆದರ ಈ ಕವಿ, ಪ್ರೇಮಿ, ಯೋಗಿ ನಮ್ಮ ಕೂಡ ನಾಕು ದಿನ ಇದ್ದು ಹೋಗಲಿ. ಏನಂತೀರಿ ಕವಿಗಳಾ?

**ಕವಿ :** ಏನು ಹೇಳ್ಲಿ, ಹೇಗೆ ಹೇಳ್ಲಿ? ನಾನು ಕವಿ, ಪ್ರೇಮಿ ಅಲ್ಲ ಅಂತ. ಇವಳು ಪ್ರಿಯತಮೆ ನಿಜ. ಆದರ ಅವಳ ಪ್ರೇಮಿ ಕಂಪೌಂಡ್ ಜಿಗಿದು ಹೋಗಿದ್ದಾನೆ. ಸಾಹೇಬರೆ, ನನ್ನ ನಂಬಿರಿ. ನಾನು ಕಾವ್ಯ ಬರೀತಾ ಜೀವನ ನಡೆಸುವವ. ಹುಣ್ಣಿಮೆ ಚಂದ್ರನನ್ನ ಈ ಉದ್ಯಾನವನದಾಗ ಕುಳಿತು ನೋಡಿದರ ಸ್ಫೂರ್ತಿ ಸಿಗ್ತದಂತ ಇಲ್ಲಿ ಬಂದೀನಿ. ನನ್ನ ಜೈಲಿಗೆ ಹಾಕಬ್ಯಾಡ್ರಿ, ನನ್ನ ಬಿಟ್ಬುಬಿಡ್ರಿ.

**ಪೋಲೀಸ್ :** ಭಾಳ ಚಂದ ಕತಿ ಕಟ್ಟಿ ಹೇಳ್ತಿ ನೋಡು. ಖರೆ ಅಂದ್ರ ನೀ ಕವಿನೇ ಆಗಬೇಕಿತ್ತು. ಹೀಂಗ ಹುಡುಗಿನ ಹಾರಿಸಿಕೊಂಡು ಬಂದು ಪುಕ್ಕಟೆ ಎಲ್ಲಾ ಕೆಲ್ಸ ಮುಗಿಸಿ ಹೋಗುವ ಖದೀಮ ನನ್ನ ಮಗ ಆಗಬಾರದಿತ್ತು. ಬಾಯಿ ಮುಚ್ಚಕೊಂಡು ಬರ್ತೀಯೋ, ಮುಕಳಿ ಮ್ಯಾಗ ನಾಕ ಬಾರಿಸಲೋ. (ಹೊಡೆಯಲು ಹೋಗುವನು)

**ಕವಿ :** ಇನ್ನೇನು ಹೇಳಲಿ ನಾನು?

**ಪೊಲೀಸ್ :** (ರಾಣಿಗೆ) ನಿಮ್ಮ ಹೆಸರೇನು?

**ರಾಣಿ :** ರಾಣಿ

**ಪೊಲೀಸ್ :** ಯಾವೂರ ರಾಣಿ?

**ರಾಣಿ :** ಇದೇ ಊರಿನ ರಾಣಿ.

**ಪೊಲೀಸ್ :** ನಿಮ್ಮ ಅರಮನೆ ಎಲ್ಲಿ?

**ರಾಣಿ :** ರೇಲ್ವೆ ಸ್ಟೇಷನ್ ಹತ್ತಿರ.

**ಪೊಲೀಸ್ :** ನಡಿರಿ, ನಡಿರಿ ರೇಲ್ವೆಸ್ಟೇಷನ್, ಪೋಲೀಸ್ ಸ್ಟೇಷನ್ ನಡುವ ಭಾಳ ಅಂತರ ಇಲ್ಲ.

**ರಾಣಿ :** ಸಾಹೇಬರ ಸ್ಟೇಷನಕ್ಕ ಬ್ಯಾಡ್ರಿ

**ಪೊಲೀಸ್ :** ಮತ್ತೆಲ್ಲಿ?

**ರಾಣಿ :** ಇಲ್ಲೇ ಮುಗಿಸಿ ಬಿಡ್ರಿ.

**ಪೊಲೀಸ್ :** ಈಗ ಬಂತ ನೋಡು ಲೌಡಿ ಬಣ್ಣ ಬಯಲಿಗೆ (ಕವಿಯನ್ನು ತೋರಿಸಿ) ಈ ರಾಜ ಎಲ್ಲಿ ಸಿಕ್ಕ?

**ಕವಿ :** ನಾನು ಅವಳ ರಾಜ ಅಲ್ಲ , ನಾನು ಕವಿ.

**ಪೊಲೀಸ್ :** ಕೊಳ್ಳಾಗಿನ ಸರ ಬಿಚ್ಚು. ಹೌದು, ಇಂವ ನಿನ್ನ ರಾಜ ಅಲ್ಲಾ ಅಂತಾನ. ನಿನ್ನ ಖರೆ ಖರೆ ರಾಜ ಎಲ್ಲಿದಾನ?

**ಕವಿ :** ಕಂಪೌಂಡ್ ಜಿಗಿದು ಹೋಗ್ಯಾನ.

**ಪೊಲೀಸ್ :** ಕಂಪೌಂಡ್ ಜಿಗಿದು ಹೋಗ್ಯಾನ, ಕಂಪೌಂಡ್ ಜಿಗಿದು ಹೋಗಾಕ ದಾರಿ ಎಲ್ಲದ? ಇಲ್ಲೇ ಎಲ್ಲೇರ ಅಡುಗಿ ಕುಳಿತಿರಬೇಕು (ರಾಜಕುಮಾರ ಕುಳಿತ ಕಂಪೌಂಡಿನಾಚೆ ನಮ್ನ ಎಳೆದುಕೊಂಡು ಪೊಲೀಸ್ ಬರುವನು)

**ಪೊಲೀಸ್ :** (ರಾಣಿಗೆ) ಇವನೇ ಏನು ನಿನ್ನ ರಾಜ?

**ರಾಣಿ :** (ಹೂಂ ಎಂದು ಗೋಣು ಹಾಕುವಳು)

**ಪೊಲೀಸ್ :** ಸಾಹೇಬರ ನಿಮ್ಮ ಹೆಸರೇನು?

**ರಾಜಕುಮಾರ :** ರಾಜಕುಮಾರ

**ಪೊಲೀಸ್ :** ರಾಜಕುಮಾರ, ರಾಣಿ ಮತ್ತು ಕವಿ.

**ಕವಿ :** ನಾನು ಬ್ಯಾರೆ. ಅವರ ಜತೆ ನನ್ನ ಸೇರಿಸಬ್ಯಾಡ್ರಿ.

**ಪೋಲೀಸ್ :** ನೇರವಾಗಿ ಬಿಸಿನೆಸ್ಸಿಗೆ ಬರ್ರಿ. ಈಗ ಸ್ಟೇಷನ್ನಿಗೆ ಬರ್ತೀರೊ ಏನ್ ವ್ಯವಹಾರ ಇಲ್ಲೇ ಬಗಿಹರಿಸಿಕೊಳ್ತೀರೋ?

**ರಾಜ-ರಾಣಿ :** ಇಲ್ಲೇ ಬಗೆಹರಿಸಿ ಸಾಹೇಬರೆ.

**ಪೋಲೀಸ್ :** ಸರಿ.

(ರಾಜಕುಮಾರ ವಾಚು, ಚೈನು ಪರ್ಸ್ ಕೊಡುವನು. ರಾಣಿ ಚಿನ್ನದ ಸರ, ಬಂಗಾರದ ಬಳೆ ಕೊಡುವಳು)

**ಪೋಲೀಸ್ :** (ಗಾರ್ಡ್‌ನ ಕಡೆ ನೋಡಿ) ನೀವೆಷ್ಟು ಹೊಡೆದಿರಿ?

**ಗಾರ್ಡ್ :** ಇಲ್ಲರಿ ಸಾಹೇಬರೆ. ನನಗೇನು ಭಾಳ ಕೊಟ್ಟಿಲ್ಲ (ಎದೆಯ ಮೇಲಿನ ಕಿಸೆಯ ಮೇಲೆ ಕೈಯಿಟ್ಟುಕೊಳ್ಳುವನು)

**ಪೋಲೀಸ್ :** ಮಾಲು ತಗೀತಿಯೊ? ಸ್ಟೇಷನ್ನಿಗೆ ಬರ್ತೀಯೊ?

**ಗಾರ್ಡ್ :** (ಕಿಸೆಯಿಂದ ನೋಟು ತೆಗೆದು) ಹಿಡಿರಿ ಸಾಹೇಬರ. ಎಲ್ಲಾ ಕೊಟ್ಟೀನಿ ನೋಡ್ರಿ.

**ಕವಿ :** ಸಾಹೇಬರ, ಈಗ ಗೊತ್ತಾಯಿತಲ್ಲ, ನಾನು ಕವಿ ಹೌದು ಅಂತ.

**ಪೋಲೀಸ್ :** (ರಾಜ-ರಾಣಿಗೆ) ನೀವು ನಡಿರಿ (ಅವರು ಹೋಗುವರು) (ಗಾರ್ಡ್‌ನಿಗೆ) ಗೇಟ್ ತಗಿ ನಡಿ [ಮೂರು ಜನ ಗೇಟಿನ ಹತ್ತಿರ ಬರುವರು] (ಕವಿಗೆ) ಹಾಂ, ನೀವು ಕವಿಗಳು ಹೌದಂತ ಗೊತ್ತಾಯ್ತು. ಆದರ......

**ಕವಿ :** (ಗಾಬರಿಯಿಂದ) ಆದರ ಏನ್ರಿ ಸಾಹೇಬರ?

**ಪೋಲೀಸ್ :** ಏನಿಲ್ಲ. ನಮ್ಮ ಸಾಹೇಬರು ಹೇಳ್ಯಾರ 'ಖಾಲಿ ಕೈಯಿಂದ ಬಂದರ ಮಗನ ನಿನ್ನ ಸಸ್ಪೆಂಡ್ ಮಾಡ್ತೀನಿ' ಅಂತ. ಆ ರಾಜಕುಮಾರನ ಅಥವಾ ರಾಣಿನ ಹಿಡಕೊಂಡು ಹೋಗಬೇಕಂದರ ಅವರು ನನ್ನ ಕೈ ಬೆಚ್ಚಗ ಮಾಡಿದರು. ಈಗ ಉಳಿದವರು ಅಂದ್ರ ನೀವೊಬ್ಬರೆ.

**ಕವಿ :** [ಭಯದಿಂದ] ನಿಮ್ಮ ಮಾತಿನ ಅರ್ಥ ಏನ್ರಿ? ನನ್ನ ಜೈಲಿಗೆ ಹಾಕಬೇಕಂತ ಮಾಡೀರೇನು?

**ಪೋಲೀಸ್ :** ನೀವೇನು ಕವಿಗಳು. ಎಲ್ಲಿದ್ದರೂ ಕಾವ್ಯ ಬರೀತೀರಿ. ಜೈಲಿನ ಅನುಭವ ಸಿಕ್ಕರ ನಿಮ್ಗ ಹೆಚ್ಚಿನ ಖುಷಿ ಸಿಗ್ತದ. ನಾಕು ದಿನ ಇಟ್ಕೊಂಡು ಬಿಟ್ಟು ಬಿಡ್ತಾರ. ಅಂಜುವ ಕಾರಣವಿಲ್ಲ.

**ಕವಿ :** ಖರೇನ ಜೈಲಿಗೆ ಹಾಕ್ತೀರಿ ಏನ್ರಿ?

**ಪೊಲೀಸ್** : [ಕವಿಯ ಕೈ ಹಿಡಿದು] ಬಾಯಿ ಮುಚ್ಕೊಂಡು ನಡಿ.

**ಕವಿ** : ಇದೆಂಥ ನ್ಯಾಯ? ಇದೆಂಥ ದೇಶ? ಕೈ ಬೆಚ್ಚಗ ಮಾಡದವರ ಮೈ ಬೆಚ್ಚಗ ಮಾಡ್ತಾರ. ಮೈ ಕೊಟ್ಟವರನ ಮೈ ಪಡ್ಕೊಂಡವರನ ಬಿಟ್ಟು ಅಮಾಯಕರ ಕೊರಳಿಗೆ ಉರ್ಲ ಹಾಕ್ತಾರ. ಈಗ ನಾ ಕವಿನೂ ಅಲ್ಲ, ಪ್ರೇಮಿಯೂ ಅಲ್ಲ, ನಾನು ಖೈದಿ.....

**ಪೊಲೀಸ್** : ನೀವು ಏನಾದರೂ ಅಂದ್ಕೊಳ್ಳರಿ. ಈಗ ನನ್ನ ಕೂಡ ಸ್ಟೇಷನ್ನಿಗೆ ಬರ್ರಿ.

***

# ಕಸದ ಬುಟ್ಟಿ

ಫ್ರೆಂಚ್ ಮೂಲ : ಮೊಪಾಸಾ ಕನ್ನಡಕ್ಕೆ : ಬಸು ಬೇವಿನಗಿಡದ

ಸಮಾಜಕ್ಕೆ ಏನನ್ನಾದರೂ ಒಳ್ಳೆಯದನ್ನು ಮಾಡಬೇಕೆಂಬ ಹಂಬಲ ಹೊಂದಿ ಆಗಾಗ ಸೇರುತ್ತಿದ್ದ ಸಮಾನ ಮನಸ್ಕರ ಸಭೆಯೊಂದರಲ್ಲಿ ಆಕೆ ಭೆಟ್ಟಿಯಾಗಿದ್ದಳು. ಅವಳ ಆಕರ್ಷಕ ರೂಪ, ಅರಳು ಹುರಿದಂತಹ ಅವಳ ಮಾತು ನಿಮಿಷದಲ್ಲಿ ಅವನ ಮೇಲೆ ಮೋಡಿ ಮಾಡಿದವು. ಆಕೆ ತನ್ನ ಹೆಂಡತಿಯಾಗಿ ಸಿಕ್ಕರೆ ಅದಕ್ಕಿಂತ ದೊಡ್ಡ ಐಶ್ವರ್ಯ ಜಗತ್ತಿನಲ್ಲಿ ಬೇರಾವುದೂ ಇರಲಿಲ್ಲವೆಂದು ಅವನು ಯೋಚಿಸಿದ. ಅವಳ ಸರಳತೆ, ತುಟಿಯ ಮೇಲೆ ಕಂಡೂ ಕಾಣದಿರುವ ಮುಗುಳ್ನಗು, ಮತ್ತೊಬ್ಬರ ಮಾತನ್ನು ಗಮನದಿಂದ ಆಲಿಸುವ ಅವಳ ಆಸಕ್ತಿ ಎಲ್ಲರಿಗೂ ಇಷ್ಟವಾಗುತ್ತಿದ್ದವು. ಅವಳ ಎದೆಯ ಬಾಗಿಲು ತೆರೆಯುವ ಅದೃಷ್ಟ ತಮ್ಮದಾಗಬೇಕೆಂದು ಪ್ರತಿಯೊಬ್ಬರೂ ಕೈಮೀರಿ ಪ್ರಯತ್ನಿಸುತ್ತಿದ್ದರು. ಸಭೆ ಸಮಾರಂಭಗಳಲ್ಲಿ ಔತಣಕೂಟಗಳಲ್ಲಿ, ಪಾರ್ಟಿಯಲ್ಲಿ ಅವಳು ಇಲ್ಲದಿದ್ದರೆ ಜನರಿಗೆ ಏನೋ ಕಳೆದುಕೊಂಡಂತಾಗುತ್ತಿತ್ತು.

ಯಾರ ಜೊತೆಗೂ ಹೆಚ್ಚು ಬೆರೆಯದೆ, ಅಲ್ಲಿ –ಇಲ್ಲಿ ಸುಖಾಸುಮ್ಮನೆ ಓಡಾಡದೆ, ಹೆಸರು ಕೆಡಸಿಕೊಳ್ಳದೆ ಸಕಲರ ಕಣ್ಮಣಿಯಾಗಿದ್ದ ಆಕೆ ಅವನನ್ನು ಹಗಲಿರುಳು ಕಾಡತೊಡಗಿದಳು. ಕಷ್ಟಕ್ಕೆ ಬಾಗದೆ, ಸುಕಕ್ಕೆ ಸೆಟೆಯದೆ, ಮತ್ತೊಬ್ಬರ ಶ್ರೀಮಂತಿಕೆಗೆ ಅಸೂಯೆ ಪಡದೆ ಪ್ರಾಮಾಣಿಕವಾಗಿದ್ದ ಅವಳು ಅವನಿಗೆ ಸದ್ಗುಣಗಳ ತವರುಮನೆಯಂತೆ ಕಂಡಳು. ಅವನು ಅವಳ ಪೂರ್ವಾಪರವನ್ನೆಲ್ಲ ವಿಚಾರಿಸಿದ ನಂತರ ತಿಳಿದದ್ದೇನೆಂದರೆ ಹಳ್ಳಿಯ ಜೀವನವನ್ನು ಇಷ್ಟಪಡುತ್ತಿದ್ದ ಆಕೆ ಶಹರಕ್ಕೆ ಸಮೀಪದ ಗ್ರಾಮವೊಂದರಲ್ಲಿ ನೆಲೆಸಿದ್ದಳು. ಡಾಕ್ಟರ್‌ನಾಗಿದ್ದ ಆಕೆಯ ಅಪ್ಪ ಸತ್ತನಂತರ ಅವಳು ಇತ್ತೀಚಿಗೆ ತನ್ನ ತಾಯಿಯೊಡನೆ ಸಿಟಿಗೆ ಬಂದು ನೆಲೆಸಿದ್ದಳು. ಅಪ್ಪಟ ಗುಣವಂತನೊಬ್ಬ ಸಿಕ್ಕರೆ ಸಾಕು, ಮಗಳ ಮದುವೆ ಮಾಡಿ ಆರಾಮದೊಂದಿರುತ್ತೇನೆ ಎನ್ನುತ್ತಿದ್ದಳು ತಾಯಿ. ಅವನು ಒಬ್ಬ ಸಾಧಾರಣ ನೌಕರನಾಗಿದ್ದುದರಿಂದ ಆಕೆ ತನಗೆ ನಿಲುಕದ ನಕ್ಷತ್ರವೆಂದೆ ಅವನು ಭಾವಿಸಿದ್ದ. ಆದರೂ ಅವನ ಎದೆಯೊಳಗಿನ ಅದಮ್ಯ ಆಸೆ ಚೆಂಡಿನಂತೆ ಪುಟಿದೇಳುತ್ತಿತ್ತು. ತನ್ನ ಬಯಕೆಯನ್ನು ಹತ್ತಿಕ್ಕಲಾರದೇ ದೇವರು ಅಂದುಕೊಂಡದ್ದಾಗಲಿ ಎಂದು ಅವಳೆದುರಿಗೆ

ತನ್ನ ಇಂಗಿತವನ್ನು ಅಂಜುತ್ತಲೇ ತೋಡಿಕೊಂಡ. ದುಶ್ಚಟಗಳಿಲ್ಲದ, ದುಡ್ಡನ್ನು ದುರ್ವ್ಯಯ ಮಾಡದ ಲವಲವಿಕೆಯಿಂದ ತುಂಬಿತುಳುಕುತ್ತಿದ್ದ ಯುವಕನ ಮದುವೆಯ ಪ್ರಸ್ತಾಪವನ್ನು ಅವಳು ತಿರಸ್ಕರಿಸಲಿಲ್ಲ. ಮರುಮಾತಿಲ್ಲದೆ ಒಪ್ಪಿಕೊಂಡಳು. ಆಕೆಯ ತಾಯಿ ಕೂಡ ಜೀವನದಲ್ಲಿ ದುಡ್ಡು, ಅಂತಸ್ತು, ಮುಖ್ಯವಲ್ಲ. ಒಳ್ಳೆಯ ಹುಡುಗ ಮುಖ್ಯವೆಂದು ಇವರ ವಿವಾಹಕ್ಕೆ ಒಪ್ಪಿಗೆ ಸೂಚಿಸಿದಳು.

ಅವನ ಸಂತೋಷ ಮುಗಿಲು ಮುಟ್ಟಿತು. ಮನದೊಳಗೆ ಹರುಷದ ಹೊಳೆ ಹರಿಯಿತು. ಅವರದು ಅಪರೂಪದ ಸಂಸಾರವೆಂಬಂತೆ ಜನ ಮಾತಾಡಿಕೊಂಡರು. ಒಬ್ಬರಿಗೊಬ್ಬರು ಪ್ರೀತಿ ಕೊಡಕೊಳ್ಳುವುದರಲ್ಲಿ ಅವರು ಹಿಂದೆ-ಮುಂದೆ ನೋಡಲಿಲ್ಲ. ಆಕೆ ಅವನನ್ನು ಮಗುವಿನಂತೆ ಮುದ್ದಿಸಿದಳು. ಹೊತ್ತು ಹೊತ್ತಿಗೆ ಊಟ ಬಡಿಸಿ ಪಾಲಿಸಿದಳು. ಅವನ ಮೇಲೆ ಬಿದ್ದು ಮುತ್ತಿನ ಮಳೆಗರೆಯುತ್ತಿದ್ದಳು. ಪ್ರೀತಿಯಿಂದ ಬಾಚಿ ತಬ್ಬುತ್ತಿದ್ದ ಅವಳ ತೋಳುಗಳ ಸುಖದಲ್ಲಿ ಆಫೀಸಿನ ಎಂತಹ ಬೇಸರವನ್ನಾದರೂ ಅವನು ಮರೆತುಬಿಡುತ್ತಿದ್ದ. ಪಗಾರವನ್ನು ಹೆಂಡತಿಯ ಕೈಗೆ ತಂದುಕೊಟ್ಟರೆ ಅವನ ಕೆಲಸ ಮುಗಿಯಿತು. ಸಣ್ಣ ಸಂಬಳದಲ್ಲಿಯೂ ತುಂಬ ಅಚ್ಚುಕಟ್ಟಾಗಿ ಮನೆ ನಿಭಾಯಿಸಿಕೊಂಡು ಬರತೊಡಗಿದಳು. ದಿನಂಪ್ರತಿ ಬೆಳೆಯುತ್ತಿದ್ದ ಅವರ ಪ್ರೀತಿಗೆ ಕಾಲದ ಹಂಗಿರಲಿಲ್ಲ. ಹಾಗಾಗಿ ಮದುವೆಯಾದ ಆರೇಳು ವರ್ಷಗಳ ನಂತರವೂ ಅವರು ಇನ್ನೂ ಮಧುಚಂದ್ರದ ಮತ್ತಿನಲ್ಲಿದ್ದರು.

ಗಂಡಹೆಂಡಿರೆಂದ ಮೇಲೆ ಸಣ್ಣ-ಪುಟ್ಟ ಜಗಳ ಇರುವುದು ಸರ್ವಸಾಮಾನ್ಯ. ಅವರಲ್ಲಿಯೂ ಅಲ್ಪಸ್ವಲ್ಪ ವ್ಯತ್ಯಾಸಗಳಿದ್ದವು. ಒಮ್ಮೊಮ್ಮೆ ಅವಳಿಗೆ ಹಿಡಿಸಿದ್ದು ಅವನಿಗೆ ಹಿಡಿಸುತ್ತಿರಲಿಲ್ಲ. ಅವನ ಆಯ್ಕೆ ಅವಳಿಗೆ ಇಷ್ಟವಾಗುತ್ತಿರಲಿಲ್ಲ. ತನ್ನ ಹೆಂಡತಿ ತನಗೆ ಎಲ್ಲದರಲ್ಲೂ ಅನುರೂಪವಾಗಿದ್ದಾಳೆಂದು ಎನಿಸಿದರೂ ಕೂಡ ಅವಳ ಎರಡು ಹವ್ಯಾಸಗಳು ಮಾತ್ರ ಅವನಿಗೆ ಬೇಸರ ತರಿಸಿದ್ದವು.

ಮೊದಲಿನಿಂದಲೂ ನಾಟಕವೆಂದರೆ ಅವಳಿಗೆ ಪ್ರೀತಿ. ಆಗೀಗ ಥೇಟರ್‌ಗೆ ಹೋಗಿ ಮನಸ್ಸು ಹಗುರ ಮಾಡಿಕೊಳ್ಳಬೇಕೆಂದು ಆಕೆ ಇಚ್ಛಪಡುತ್ತಿದ್ದಳು. ಆದರೆ ಗಂಡನಿಗದು ಸುತಾರಾಂ ಇಷ್ಟವಿಲ್ಲ. "ಮೊದಲೇ ಆಫೀಸಿನಿಂದ ದಣಿದು ಬರುತ್ತೇನೆ. ಮನೆಗೆ ಬಂದು ಆರಾಮವಾಗಿ ಇರೋಣವೆಂದರೆ ನಿನಗೆ ನಾಟಕ ನೋಡುವ ಹುಚ್ಚು' ಎಂದು ಬೇಸರ ಮಾಡಿಕೊಳ್ಳುತ್ತಿದ್ದ. ದೊಡ್ಡ ದೊಡ್ಡ ಅಧಿಕಾರಿಗಳ ಪತ್ನಿಯರ ಜೊತೆ ಆಕೆಗೆ ಗೆಳೆತನವಿದ್ದುದರಿಂದ ಹೊಸ ಸಿನಿಮಾ, ನಾಟಕಗಳ ವಿಶೇಷ ಪ್ರದರ್ಶನಗಳಲ್ಲಿ ವಿಶೇಷ ಅತಿಥಿಯಾಗಿ ಅವನಿಗೆ ಆಹ್ವಾನವಿರುತ್ತಿತ್ತು. ಗಂಡನನ್ನು ಪುಸಲಾಯಿಸಿ, "ನಾನು ಕರೆದರೆ ಒಲ್ಲೆ ಅನ್ನುತ್ತೀಯಾ?" ಎಂದು ಆಸೆಗಣ್ಣಿನಿಂದ ಕೆರಳಿಸುತ್ತಿದ್ದಳು. ಕೊನೆಗೆ ತನ್ನ ಹೆಂಡತಿಯಿಂದ ತಪ್ಪಿಸಿಕೊಳ್ಳಲು ಅವನಿಗೆ ಒಂದು ಉಪಾಯ ಹೊಳೆಯಿತು.

"ನಿನ್ನ ಗೆಳತಿಯರು ಯಾರಾದರೂ ಇದ್ದರೆ ಕರೆದುಕೊಂಡು ಹೋಗಬಾರದಾ? ನನ್ನನ್ಯಾಕೆ ಗೋಳು ಹೊಯ್ದುಕೊಳ್ಳುತ್ತೀ?

ಅವನ ಮಾತನ್ನು ಆಕೆ ಒಪ್ಪಲೇ ಇಲ್ಲ. ತನ್ನ ಗಂಡನನ್ನು ಬಿಟ್ಟು ಹಾಳು ಗೆಳತಿಯರ ಜೊತೆ ಸಮಯ ವ್ಯರ್ಥ ಮಾಡಲು ಇಷ್ಟವಿಲ್ಲವೆಂದಳು. ಕಟ್ಟಕಡೆಗೆ ಅವನು ಅವಳ ಕಾಲು ಮುಗಿಯುವುದಷ್ಟೇ ಬಾಕಿಯಿತ್ತು. ಅವನ ಕಳಕಳಿಗೆ, ವಿನಂತಿಗೆ ಮನಸೋತು ಅಂದಳು.

"ಆಯ್ತು, ನೀನು ಇಷ್ಟು ಹೇಳುತ್ತಿಯೆಂದ ಮೇಲೆ ಗೆಳತಿಯ ಜೊತೆಗೆ ಹೋಗುತ್ತೇನೆ." ನಾಟಕದ ಚಕ್ರವ್ಯೂಹದಿಂದ ಪಾರಾದದ್ದಕ್ಕೆ ಗಂಡನಿಗೆ ಖುಷಿಯಾಗಿ ಅವನು ಹೊಟ್ಟೆ ತುಂಬ ಹಾಲು ಕುಡಿದ.

ಇನ್ನೊಂದು ಅವನನ್ನು ಆಗೀಗ ಬಾಧಿಸುತ್ತಿದ್ದ ವಿಷಯವೆಂದರೆ ತನ್ನ ಸುಂದರ ಹೆಂಡತಿಗಿದ್ದ ನಕಲಿ ಬಂಗಾರದ ಹುಚ್ಚು ನಾಟಕ ನೋಡುವ ಹವ್ಯಾಸ ಸುರುವಾಯಿತು. ಹೋಗಲಿ. ಅದೊಂದು ಇದ್ದರೆ ಪರವಾಗಿಲ್ಲ ಎಂದುಕೊಂಡವನಿಗೆ ಅವಳ ಎರಡನೇ ಅಭಿರುಚಿಯಿಂದ ಅವನು ಸ್ವಲ್ಪ ಖಿನ್ನವಾದ. ನಾಟಕದ ಜೊತೆಗೆ ಅಲಂಕಾರದ ಹುಚ್ಚೂ ಹಿಡಿಯಿತು. ಹೊಸ ಡ್ರೆಸ್ಸುಗಳ ಬಗ್ಗೆ ಅವಳು ಅಷ್ಟು ತಲೆಕಡಿಸಿಕೊಳ್ಳುತ್ತಿರಲಿಲ್ಲ. ಮೊದಲಿಂದ ತನಗೆ ಒಪ್ಪುವ ಮೈತುಂಬ ಬಟ್ಟೆ ಬರೆ ಹಾಕಿಕೊಂಡು ಸದ್ಗೃಹಿಣಿಯಾಗಿದ್ದಳು. ಮೊಲೆ ತೋರಿಸುವ ಬ್ಲೌಜನ್ನು, ತೊಳು-ಬೆನ್ನು ತೋರಿಸುವ ಡ್ರೆಸ್ಸನ್ನು ಆಕೆ ಎಂದೂ ಎಷ್ಟಪಡುತ್ತಿರಲಿಲ್ಲ. ಗಂಡನ ಕಣ್ಣಿಗೆ ಚಂದ ಕಂಡರೆ ಸಾಕು ಎನ್ನುತ್ತಿದ್ದಳು. ಅಂತಹುದರಲ್ಲಿ ಒಡವೆ ಹಾಕಿಕೊಳ್ಳಬೇಕೆನ್ನುವ ಬಯಕೆ ಅವಳಲ್ಲಿ ಹೇಗೆ ಹುಟ್ಟಿತೋ ದೇವರೇ ಬಲ್ಲ. ಕಿವಿಗೆ ವಜ್ರದ ಬೆಂಡೋಲೆ, ನೀಳ ಕೊರಳಿಗೆ ಮುತ್ತಿನ ಸರ, ಕೈಯಿಗೆ ಬಂಗಾರದ ಬಳೆ ಇಟ್ಟುಕೊಂಡು ಮತ್ತಷ್ಟು ಹೊಳೆಯತೊಡಗಿದಳು. ಆ ಒಡವೆಗಳೆಲ್ಲ ನಕಲಿಯೆಂದು ಒಮ್ಮೆಲೆ ಗೊತ್ತಾಗುತ್ತಿರಲಿಲ್ಲ. ಹೊಳೆಯುವುದೆಲ್ಲ ಬಂಗಾರವಲ್ಲ ಎಂದು ಗೊತ್ತಿದ್ದೂ ಗೊತ್ತಿದ್ದೂ ಜನ ಎಷ್ಟು ಬೇಗ ಮೂರ್ಖರಾಗುತ್ತಾರೆ ಎನಿಸುತ್ತಿತ್ತು ಅವನಿಗೆ. ಗಂಡ ಹೆಂಡತಿಗೆ ಬುದ್ಧಿವಾದ ಹೇಳಿದ. 'ಪ್ರಿಯೆ, ನನ್ನ ಅಲ್ಪ ಸಂಬಳದಲ್ಲಿ ನಿನಗೆ ಬಂಗಾರ ಕೊಡುಸುವುದು ನನ್ನ ಕೈಯಿಂದ ಆಗದ ಮಾತು. ಅದು ನಿನಗೂ ಚೆನ್ನಾಗಿ ಗೊತ್ತು. ಹೆಣ್ಣಿಗೆ ನಯ, ವಿನಯಗಳೇ ಅಮೂಲ್ಯ ಆಭರಣಗಳೆನ್ನುತ್ತಾರೆ. ನೀನು ಸಹಜವಾಗಿಯೇ ಸುಂದರಿಯಾಗಿದ್ದೀ. ಈ ಕೃತಕ ಒಡವೆ ಯಾಕೆ ಬೇಕು? ನೀನೇ ಒಂದು ಅತ್ಯಮೂಲ್ಯ ವಜ್ರ.'

"ನನಗೆ ಗೊತ್ತು ಪತಿದೇವ, ಆದರೆ ಏನು ಮಾಡಲಿ? ಹಾಳಾದ ಮನಸ್ಸು ಕೇಳುವುದಿಲ್ಲ. ಬಂಗಾರವೆಂದರೆ ನನಗೆ ಮೊದಲಿನಿಂದಲೂ ಹುಚ್ಚು. ಒಡವೆಗಳನ್ನು ಬಿಟ್ಟಿರಲಾರೆ. ನಕಲಿ ಆದರಾಗಲಿ. ಇದರಲ್ಲಿಯೇ ನನ್ನ ಜೀವವಿದೆ. ನೋಡು ಈ ಒಡವೆಗಳ ಕುಸುರಿ ಕೆಲಸ ಎಷ್ಟೊಂದು ಸುಂದರವಾಗಿದೆ. ನಕಲಿ ಎಂದು ಅನ್ನಿಸುವುದೇ ಇಲ್ಲ."

'ಆದರೆ ನನಗೆ ಅದು ವಿಚಿತ್ರ ಅನ್ನಿಸುತ್ತದೆ.'

"ನಿಜವಾದ ವಜ್ರವನ್ನು ನನ್ನಿಂದ ಕೊಡಿಸಲು ಆಗುವುದಿಲ್ಲ. ಇವನ್ನಾದರೂ ಹಾಕಿಕೊಳ್ಳಲು ಬಿಡು"

'ನಿನ್ನಿಷ್ಟ'

ಸಂಜೆಯ ಹೊತ್ತಿನಲ್ಲಿ ಚಹಾ ಹೀರುತ್ತ ಅವರು ಅದು-ಇದು ಮಾತಾಡುತ್ತಿರಬೇಕಾದರೆ ಅವಳ ಒಡವೆಗಳ ಪೆಟ್ಟಿಗೆ ಟೀಪಾಯ್ ಮೇಲೆಯೇ ಇರುತ್ತಿತ್ತು. ಗಂಡ ಅವಳ ಕೃತಕ ಆಭರಣಗಳ ಪೆಟ್ಟಿಗೆಗೆ ಕಸದ ಬುಟ್ಟಿ ಎಂದು ಹೆಸರಿಟ್ಟಿದ್ದ. ಆದರೆ ಅವಳು ಮಾತ್ರ ಅದರ ಜೊತೆ ಒಂದು ರೀತಿಯ ಅನುರಾಗ ಬೆಳೆಸಿಕೊಂಡಿದ್ದಳು. ಗಂಡನಿಗಿಂತಲೂ ಹೆಚ್ಚಾಗಿ ಆ ಪೆಟ್ಟಿಗೆಯ ಮೈಯನ್ನು ಪ್ರೀತಿಯಿಂದ ಸವರುತ್ತಿದ್ದಳು. ಅದಕ್ಕೆ ಮುತ್ತು ಕೊಡುತ್ತಿದ್ದಳು. ಮೋಹ-ಪ್ರೀತಿಯಿಂದ ಆಭರಣಗಳನ್ನು ಬಾಕ್ಸಿನೊಳಗೆ ತೆಗೆದು-ಹಾಕಿ ಮಾಡುತ್ತಿದ್ದಳು. ಒಂದೊಂದು ಸಲ ನೆಕ್ಲೇಸ್‌ನ್ನು ಗಂಡನ ಕೊರಳಿಗೆ ಕಟ್ಟಿ ಅನ್ನುತ್ತಿದ್ದಳು.

"ನೀನು ಹೇಗೆ ಕಾಣಿಸುತ್ತಿಯಾ ಗೊತ್ತಾ?"

'ಹೇಗೆ?' ಅವನೋ ಅವಳ ಮೆಚ್ಚಿಕೆಯ ಮಾತಿಗೆ ಬಾಯಿ ತೆರೆಯುತ್ತಿದ್ದ.

"ಒಳ್ಳೆಯ ವಿದೂಷಕ ಕಂಡ ಹಾಗೆ!" ಜೋರಾಗಿ ನಕ್ಕು ಅವನ ಕೊರಳಿಗೆ ಜಿದ್ದು, ತುಟಿಗೆ ತುಟಿ ಬೆಸೆದು ತನ್ನ ಪ್ರೀತಿ ಉಣಿಸುತ್ತಿದ್ದಳು.

* * *

ಒಂದು ಸಂಜೆ ಆಕೆ ರಮ್ಯ ನಾಟಕವೊಂದನ್ನು ನೋಡಿ ಮನೆಗೆ ಮರಳುವಾಗ ಮಳೆಗೆ ಸಿಕ್ಕು ನೆನೆದಳು. ಮೈಗೆ ಹತ್ತಿದ ಥಂಡಿ ಮೂಳೆಗೂ ಹಿಡಿಯಿತು. ಮರುದಿನ ಜ್ವರ-ಕೆಮ್ಮು ಶುರುವಾಯಿತು. ಹಾಸಿಗೆ ಹಿಡಿದ ಅವಳು ಶ್ವಾಸಕೋಶದ ಉರಿಯಿಂದಾಗಿ ಎಂಟೇ ದಿನದಲ್ಲಿ ಸತ್ತುಹೋದಳು.

ಹೆಂಡತಿಯ ಅಚಾನಕ್ ಸಾವಿನಿಂದ ಗಂಡ ಎಷ್ಟು ಕಂಗೆಟ್ಟನೆಂದರೆ ಒಂದು ತಿಂಗಳಲ್ಲಿ ಅವನ ತಲೆಗೂದಲು ಪೂರ್ತಿ ಬೆಳ್ಳಗಾಯಿತು. ನಿದ್ದೆಯೆನ್ನುವುದು ದೂರದ ಕನಸಾಯಿತು. ಊಟ-ತಿಂಡಿಯಂತೂ ಬೇಡವೇ ಬೇಡವಾಯಿತು. ಅವಳ ನೆನಪು ಬಂತೆಂದರೆ ಸಾಕು ಅವನ ಹೃದಯ ನಿಂತಂತಾಗುತ್ತಿತ್ತು. ಅವಳ ಮೋಹಕ ನಗು, ಇಂಪಾದ ಧ್ವನಿ, ಹಾವ-ಭಾವ ಯಾವುದನ್ನೂ ಅವನಿಂದ ಮರೆಯಲಾಗಲಿಲ್ಲ. ದಿನರಾತ್ರಿಗಳನ್ನು ಅವಳ ನೆನಪಿಗೆ ಅರ್ಪಣೆ ಮಾಡುತ್ತ ಕುಳಿತ. ಅವನ ಎದೆಯಲ್ಲಿ ದುಃಖದ ಝರಿ ಹರಿಯತೊಡಗಿತು. ಕಾಲ ಎಲ್ಲವನ್ನೂ ಮರೆಸುತ್ತದೆಯೆನ್ನುತ್ತಾರೆ. ಆದರೆ ಅವನ ವಿಷಯದಲ್ಲಿ ಮಾತ್ರ ಅದು ಕ್ರೂರವಾಗಿತ್ತು. ಅವಳಿರದ ಜೀವನ ಜೀವನವಲ್ಲ ಎಂಬ ಭಾವನೆ ಬರತೊಡಗಿತು. ಆಫೀಸಿನಲ್ಲಿ ಸಹೋದ್ಯೋಗಿಗಳು ದೈನಂದಿನ ವಿಷಯ ಚರ್ಚಿಸಿದರೆ ಅವನು ಮಾತ್ರ ಅದೇ ಗತ ಹೆಂಡತಿಯ ನೆನೆಪ ಕಡಲಿನಲ್ಲಿ ಮುಳುಗಿ ಹೋಗಿರುತ್ತಿದ್ದ. ಗೆಳೆಯರೆದುರು ಬಿಕ್ಕಿ ಬಿಕ್ಕಿ ಅಳುತ್ತಿದ್ದ. ಅವಳ ರೂಮಿನಲ್ಲಿ ಹೋಗಿ ಕೂತುಬಿಡುತ್ತಿದ್ದ. ಅವಳ ಭಾವಚಿತ್ರದೊಡನೆ ಮಾತಾಡುತ್ತಿದ್ದ. ಆ ಕೋಣೆ ಅವಳು ಇದ್ದಾಗ ಹೇಗಿತ್ತೋ ಈಗಲೂ ಅದೇ ರೀತಿ ಇತ್ತು. ಒಂದು ಸಾಮಾನವೂ ಕದಲಿರಲಿಲ್ಲ. ಜೀವನದಲ್ಲಿ ತನಗೆ ಇನ್ನೇನೂ ಬೇಡ. ಅವಳು ಜೀವಿಸಿದ್ದ ಈ ಕೋಣೆ, ಅವಳು ಬಿಟ್ಟು ಹೋಗಿರುವ ನೆನಪು ಸಾಕೆಂದು ಇರತೊಡಗಿದ.

ಆದರೆ ಬದುಕಿನ ಹೋರಾಟದಲ್ಲಿ ಬರೀ ನೆನಪುಗಳನ್ನು ತಿಂದು ಜೀವಿಸಲಿಕ್ಕೆ ಆಗುವುದಿಲ್ಲ. ಬರಬರುತ್ತ ಅವನಿಗೆ ಜೀವನ ಕಷ್ಟದಾಯಕ ಎನಿಸತೊಡಗಿತು. ಅವನ ತಿಂಗಳ ಸಂಬಳ ಯಾವುದಕ್ಕೂ ಸಲಾದಾಯಿತು. ಒಬ್ಬನಿಗೆ ದುಡ್ಡು ಸಾಲುತ್ತಿಲ್ಲ; ತನ್ನ ಹೆಂಡತಿ ಅದೆಷ್ಟು ಜಾಣ್ಮೆಯಿಂದ ಮನೆ ನಿಭಾಯಿಸಿಕೊಂಡು ಹೋಗಿರಬೇಕೆಂದು ಆಶ್ಚರ್ಯಪಟ್ಟ, ಅವಳಿಗೆ ಮನಸ್ಸಿನಲ್ಲಿ ವಂದನೆ ಹೇಳಿದ.

ಜೀವನ ನಿರ್ವಹಣೆಗೆಂದು ಅವನು ಅವರಿವರ ಹತ್ತಿರ ಸ್ವಲ್ಪ ಸಾಲ ಮಾಡಿದ. ಆದರೆ ಸ್ವಲ್ಪ ಸಾಲವಿದ್ದದ್ದು ಬಹಳವಾಗಲು ಬಹಳ ದಿನಗಳೇನೂ ಬೇಕಾಗಲಿಲ್ಲ. ನಿರಾಶೆ, ನಿರುತ್ಸಾಹಗಳ ಮಧ್ಯೆ ಆಫೀಸಿಗೂ ಸರಿಯಾಗಿ ಹೋಗಲಿಲ್ಲ. ಅವನು ಸಂಪೂರ್ಣ ಹಾಳಾಗಿ ಹೋಗುವ ಸ್ಥಿತಿಗೆ ಬಂದುಬಿಟ್ಟ, ಒಂದು ದಿನ ಹೀಗಾಯ್ತಲ್ಲ, ಮನೆಯಲ್ಲಿಯೇ ಬಿದ್ದುಕೊಂಡಿದ್ದ. ಕಿಸೆಯಲ್ಲಿ ನಯಾಪೈಸೆಯೂ ಇಲ್ಲ. ಇತ್ತೀಚಿಗೆ ಯಾರೂ ಸಾಲ ಕೊಡ ಕೊಡುತ್ತಿಲ್ಲ. ಏನು ಮಾಡುವುದು? ಅವನಿಗೆ ಎಲ್ಲ ಕಗ್ಗಂಟಾಯಿತು. ಚಿಂತಿಸಿ ಬಸವಳಿದ. ಏನಾದರೂ ಮಾರಿದರೆ ಹೇಗೆ? ಆದರೆ ಮಾರಲಿಕ್ಕೆ ಹತ್ತಿರ ಏನೂ ಇಲ್ಲ. ಯಾವುದೇ ಆಸ್ತಿಯಿಲ್ಲ, ಮನೆಯಿಲ್ಲ, ಒಡವೆಗಳಿಲ್ಲ, ಬೆಳ್ಳಿ-ಬಂಗಾರವಿಲ್ಲ. ಬೆಳ್ಳಿ-ಬಂಗಾರದ ವಿಚಾರ ಬಂದೊಡನೆ ಗಾಢ ಕತ್ತಲಲ್ಲಿ ಮಿಂಚು ಹೊಳೆದಂತಾಯಿತು. ಅವನು ಏಕಾಏಕಿ ಎದ್ದು ಕುಳಿತ. ಹೆಂಡತಿಯ ನಕಲಿ ಒಡವೆಗಳು ನೆನಪಾದವು. ಅವನು ಪ್ರೀತಿಯಿಂದ ಕರೆಯುತ್ತಿದ್ದ ಆ 'ಕಸದ ಬುಟ್ಟಿ' ಅಲ್ಲಿಯೇ ಬಿದ್ದಿತ್ತು.

"ಈ ಕದಸ ಬುಟ್ಟಿ ನಮ್ಮ ಮನೆಗೆ ಅಪಶಕುನ ಇದ್ದಹಾಗೆ ಒಗೆದು ಬಿಡಬಾರದೆ?" ಎಂದು ಅನೇಕ ಸಾರಿ ಅವನು ಹೇಳಿದ್ದ. ನಕಲಿ ಬಂಗಾರದೊಂದಿಗಿನ ತನ್ನ ಹಗೆತನವನ್ನು ಈ ರೀತಿಯಿಂದಲಾದರೂ ತೀರಿಸಿಕೊಳ್ಳಬಹುದೆಂದು ಅವನು ಆಲೋಚಿಸಿದ. ಐವತ್ತು ರೂಪಾಯಿ ಬಂದರೆ ಸಾಕು. ಒಂದು ದಿನ ನಡೆಯುತ್ತದೆ. ಮುಂದಿನದು ದೇವರ ಚಿತ್ತ ಎಂದು ಖುಶಿಯಾಯಿತು. ಒಡವೆಗಳ ಪಟೆಗೆ ತುಂಬಿತ್ತು. ಆಕೆ ಆಗಿಂದಗ್ಗೆ ಒಡವೆ ಖರೀದಿಸಿ ಅದನ್ನು ತುಂಬಿಸಿದ್ದಳು. ಹೆಂಗಸರಿಗೆ ಈ ಬಂಗಾರದ ಮೇಲೆ ಅದೇನು ಮೋಹವೋ? ಆಸಲಿಯಾಗಲಿ, ನಕಲಿಯಾಗಲಿ ಒಟ್ಟಿನಲ್ಲಿ ಹೆಂಗಸರು ಪ್ರದರ್ಶನ ಪ್ರಿಯರು ಅಂದುಕೊಂಡ. ಅಂಗಡಿಯವನ ಹತ್ತಿರ ಎಲ್ಲವನ್ನೂ ತೆಗೆದುಕೊಂಡು ಹೋಗುವುದು ಅವಮಾನವೆಂದುಕೊಂಡು ಆಗಿಂದಾಗ ಆಕೆ ಅವನ ಕೊರಳಿಗೆ ಹಾಕಿ ವಿದೂಷಕ ಎಂದು ಗೇಲಿ ಮಾಡುತ್ತಿದ್ದ ಆ ನೆಕ್ಲೇಸ್ ಒಂದನ್ನೇ ಕಿಸೆಯಲ್ಲಿಟ್ಟುಕೊಂಡು ಹೊರಗೆ ಬಂದ.

ಜ್ಯುವೆಲರ್ಸ್ ಅಂಗಡಿಯೊಂದರ ಒಳಗೆ ಕಾಲಿಡುತ್ತಿದ್ದಂತೆ ತನ್ನ ಕಡುಬಡತನವನ್ನು ತೋರಿಸುವ ಪ್ರಸಂಗ ಒದಗಿ ಬಂದದ್ದಕ್ಕೆ ದುಃಖವೆನಿಸಿತು. ಅಲ್ಲದೆ ಕಿಮ್ಮತ್ತಿಲ್ಲದ ಇಂತಹ ವಸ್ತುವನ್ನು ಹೇಗೆ ತೋರಿಸುವುದೆಂದು ಮುಜುಗರವಾಯಿತು. ಆದರೂ ಅನಿವಾರ್ಯವಾಗಿತ್ತು.

"ಸರ್, ಇದಕ್ಕೆ ತಾವು ಏನು ಕೊಡಬಹುದು?"

ಅಂಗಡಿಯವ ಅದನ್ನು ತೆಗೆದುಕೊಂಡು ಪರೀಕ್ಷಿಸಿದ, ನಂತರ ಕೆಲಸದವನನ್ನು ಕರೆದು ಕಿವಿಯಲ್ಲಿ ಏನೋ ಹೇಳಿದ. ಹಿಂದೆ-ಮುಂದೆ ಮಾಡಿ, ಅಲ್ಲಿಟ್ಟು-ಇಲ್ಲಿಟ್ಟು,

ತೂರಿ ಒಗೆದು ಮತ್ತೆ ಹಿಡಿದು ಹೀಗೆ ನೂರಾಎಂಟು ಅಂಗಡಿಯವನ ಸರ್ಕಸ್‌ಗಳನ್ನು ಕಂಡು ಇವನ ತಾಳ್ಮೆ ಕೆಟ್ಟಿತು.

"ಅದು ಅಸಲಿ ಅಲ್ಲವೆಂದು ನನಗೂ ಗೊತ್ತುರೀ. ಯಾಕೆ ಸುಮ್ಮಸುಮ್ಮನೆ ನನ್ನ ತಲೆ ತಿನ್ನುತ್ತಿದ್ದೀರಿ? ನೀವು ಎಷ್ಟು ರೂಪಾಯಿ ಕೊಡುತ್ತೀರಿ ಹೇಳಬಾರದಾ?" ಎಂದು ಸಿಟ್ಟಿಂದ ಅವನು ಹೇಳಬೇಕೆಂದ ಮಾತು ಇನ್ನೇನು ತುಟಿ ದಾಟಿ ಹೊರಗೆ ಬರಬೇಕು. ಆಗ ಅಂಗಡಿಯವ ಹೇಳಿದ. 'ಅದಕ್ಕೆ ಹೆಚ್ಚೆಂದರೆ ಹತ್ತು-ಹನ್ನೆರಡು ಸಾವಿರ ರೂಪಾಯಿ ಕೊಡಬಹುದು. ಆದರೆ ಅದು ಹೇಗೆ ನಿಮ್ಮ ಕಡೆ ಬಂದಿತೆಂದು ನಮಗೆ ತಿಳಿಯಬೇಕು.'

ಹೆಂಡತಿಯನ್ನು ಕಳೆದುಕೊಂಡಿರುವ ಗಂಡ ಈಗ ಬಾಯಿ ಬಿಡತೊಡಗಿದ. ಅಂಗಡಿಯವನು ಏನೆಂದನೆಂಬುದೇ ತಿಳಿಯಲಾರದಂತಾಯಿತು.

'ನೀವು ಬೇಕಾದಲ್ಲಿ ಹೋಗಿ ಕೇಳಿಬರಬಹುದು. ಅದಕ್ಕೂ ಹೆಚ್ಚೆಂದರೆ ಹದಿನೈದು ಸಾವಿರ ರೂಪಾಯಿ ಕೊಡುತ್ತೇನೆ.'

ಈಗ ಅವನು ನಕ್ಲೇಸನ್ನು ಮರಳಿ ಕಿಸೆಯಲ್ಲಿಟ್ಟುಕೊಂಡು ಹೊರಗೆ ಬಂದ. ದೀರ್ಘ ಉಸಿರು ತೆಗೆದುಕೊಂಡು ಏನು ನಡೆಯಿತೆಂದು ಪುನವರಾಲೋಕಿಸಿದ. ಮೂರ್ಖ! ವ್ಯಾಪಾರ ಮಾಡುತ್ತಾನೆ. ಅಸಲಿ-ನಕಲಿ ನಡುವಿನ ವ್ಯತ್ಯಾಸ ಗೊತ್ತಿಲ್ಲ!

ಸ್ವಲ್ಪ ಹೊತ್ತು ಬಿಟ್ಟು ಮತ್ತೊಂದು ಅಂಗಡಿಗೆ ಬಂದ. ಈ ಅಂಗಡಿಯವ ಅದನ್ನು ನೋಡಿದ ತಕ್ಷಣ, 'ಓಹೋ! ಇದಾ! ಇದನ್ನು ಇಲ್ಲೇ ಖರೀದಿಸಿದ್ದು.' ಕೊಂಡ ಅಂಗಡಿಯಲ್ಲಿ ಮರಳಿ ಮಾರುವಾಗ ಕೊಂಡವರ ಬಡತನ ಮತ್ತಷ್ಟು ಬಯಲಿಗೆ ಬರುತ್ತದೆ!

"ಇದರ ಬೆಲೆ ಎಷ್ಟಾಗಬಹುದು?" ಅವನ ಹೃದಯ ಅಳುಕುತ್ತಿತ್ತು.

'ಅದನ್ನು ಇಪ್ಪತ್ತು ಸಾವಿರಕ್ಕೆ ಮಾರಿದ್ದೆ. ಹದಿನೆಂಟು ಸಾವಿರಕ್ಕೆ ಮರಳಿ ತೆಗೆದುಕೊಳ್ಳಬಹುದು. ಆದರೆ ಇದು ನಿಮ್ಮ ಕಡೆ...'

"ನಾನು ಇದನ್ನು ನಕಲಿಯೆಂದು ತಿಳಿದಿದ್ದೆ." ಮುಂದೆ ಅವನಿಗೆ ಮಾತೇ ಹೊರಡದಾಯಿತು. ಅಂಗಡಿಯ ಮಾಲಿಕ ಅವನನ್ನು ಸೂಕ್ಷ್ಮವಾಗಿ ಪರಿಶೀಲಿಸತೊಡಗಿದ. ಬಂದವನು ಕಳ್ಳನಿರಬೇಕು ಎಂಬ ಗುಮಾನಿ ಹುಟ್ಟಿತು. ಅದಕ್ಕಾಗಿ ಮಾಲಿಕ ಇವನ ಇತಿಹಾಸ ಅಗೆಯತೊಡಗಿದ. ಇವನು ತನ್ನ ಹೆಸರು, ಮನೆ ವಿಳಾಸ, ಕೆಲಸ ಮಾಡುತ್ತಿರುವ ಆಫೀಸಿನ ವಿಳಾಸ, ಉದ್ಯೋಗದ ಮಾಹಿತಿ ಎಲ್ಲವನ್ನೂ ಕೊಟ್ಟ. ಕೆಲಸಗಾರರು ಮೂರ್‍ನಾಲ್ಕು ಪುಸ್ತಕ ಹುಡುಕಾಡಿ ನೆಕ್ಲೇಸ್ ಖರೀದಿಸಿದ್ದ ದಾಖಲೆ ತೆಗೆದರು. ಹೌದು. ಎಲ್ಲ ಸರಿಯಾಗಿದೆ. ನೆಕ್ಲೇಸ್‌ನ್ನು ಅವನ ಹೆಂಡತಿಯ ಮನೆ ವಿಳಾಸಕ್ಕೆ ಕಳಿಸಲಾಗಿತ್ತು. ಬಂದವನು ಕಳ್ಳನೇ, ಗಂಡನೇ ಎಂದು ವಿಚಾರ ಮಾಡಿ ಪೋಲಿಸರಿಗೆ ಮಾಹಿತಿ ಕೊಟ್ಟು ದುಡ್ಡು ಕೊಡುವುದು ಉತ್ತಮವೆಂದು ತಿಳಿದ ಮಾಲಿಕ, 'ಸರ್ ಇದನ್ನು ಒಂದು ದಿನ ನಮ್ಮಲ್ಲಿಯೇ ಬಿಟ್ಟು ಹೋಗಬೇಕಾಗುತ್ತದೆ. ರಶೀತಿ ಕೊಡುತ್ತೇವೆ.'

ಅವನಿಗೆ ಹೊರಬಿದ್ದರೆ ಸಾಕಿತ್ತು. ಆಯಿತು ಎಂದು ರಸೀತಿಯನ್ನು ಕಿಸೆಯಲ್ಲಿ ಮುದ್ದೆ ಮಾಡಿ ತುರುಕಿಕೊಳ್ಳುತ್ತ ಸರಸರ ಮೆಟ್ಟಿಲಿಳಿದ. ದಿಕ್ಕು ತಪ್ಪಿದ ಹಡಗಿನಂತೆ ಅವನು ಅಲೆದಾಡಿದ. ಮನಸ್ಸು ಸ್ತಿಮಿತದಲ್ಲಿರಲಿಲ್ಲ. ಭಯಂಕರ ಗೊಂದಲವೇರ್ಪಟ್ಟಿತ್ತು. ಅವನು ಏನೇ ಕಾರಣ ಹುಡುಕಿದರೂ ಒಡವೆಯ ಖರೀದಿಗೆ ಹೊಂದಿಕೆಯಾಗಲಿಲ್ಲ. ಅಷ್ಟು ದುಡ್ಡು ಕೊಟ್ಟು ಖರದಿಸಲು ತನ್ನ ಜೀವಮಾನದಲ್ಲಿ ಸಾಧ್ಯವಿಲ್ಲ. ಹೆಂಡತಿಗೂ ಸಾಧ್ಯವಿರಲಿಲ್ಲ. ಹಾಗಿದ್ದರೂ ಹೇಗೆ ಬಂದವು? ಎಲ್ಲ ಕಾರಣಗಳನ್ನು ಕಳೆದು ಉಳಿದ ಒಂದೇ ಒಂದು ಕಾರಣವೆಂದರೆ ಒಡವೆಗಳು ಕಾಣಿಕೆಯಾಗಿ ಬರುವದು. ತನ್ನ ಹೆಂಡತಿಗೆ ಕಾಣಿಕೆ ! ಯಾರು ಕೊಟ್ಟರು? ಯಾಕೆ ಕೊಟ್ಟರು? ರಸ್ತೆಯ ಮಧ್ಯೆ ನಿಂತು ಯೋಚಿಸುತ್ತಿದ್ದ. ಹಾಗಿದ್ದರೆ ಮನೆಯೊಳಗಿನ ಎಲ್ಲ ಒಡವೆಗಳೂ ಅಸಲಿ! ಯಾರು ಕೊಟ್ಟರು? ಯಾಕೆ ಕೊಟ್ಟರು? ರಸ್ತೆಯ ಮಧ್ಯೆ ನಿಂತು ಯೋಚಿಸುತ್ತಿದ್ದ. ಹಾಗಿದ್ದರೆ ಮನೆಯೊಳಗಿನ ಎಲ್ಲ ಒಡವೆಗಳೂ ಅಸಲಿ! ಅತ್ಯಂತ ಭಯಾನಕವಾದ ಸಂಶಯವೊಂದು ಅವನ ಎದೆಯೊಳಗಿಂದ ಎದ್ದು ಕೂತಿತು. ಹಾಗಿದ್ದರೆ ತನ್ನ ಹೆಂಡತಿ.... ಅವನು ಮುಂದೆ ಯೋಚಿಸಲಾರದವನಾದ. ಅವನು ನಿಂತ ನೆಲ ನಡುಗಿತು. ಮುಗಿಲು ತಿರುಗಿತು. ಎಚ್ಚರ ತಪ್ಪಿ ಬಿದ್ದು ಬಿಟ್ಟ.

ಅವನಿಗೆ ಪ್ರಜ್ಞೆ ಬಂದಾಗ ಯಾವುದೋ ಆಸ್ಪತ್ರೆಯಲ್ಲಿದ್ದ. ದಾರಿಹೋಕರು ನೆರವಿಗೆ ಬಂದು ಸೇರಿಸಿದ್ದರು. ಮನೆಗೆ ಬಂದ ಮೇಲೆ ಗಳಗಳನೇ ಅತ್ತ. ಸಾಮಾನುಗಳನ್ನು ಅತ್ತ-ಇತ್ತ ಚೆಲ್ಲಾಡಿದ. ಅತ್ತು ಅತ್ತು ಕಣ್ಣೀರು ಬರಿದಾದ ಮೇಲೆ ಸುಮ್ಮನಾದ. ಇಡೀ ರಾತ್ರಿ ನಿದ್ರೆಯಿಲ್ಲದೆ ಕಳೆದ. ಮನಸ್ಸು ಉದ್ವಿಗ್ನಗೊಂಡಿತ್ತು. ಮರುದಿನ ಆಫೀಸಿಗೂ ಹೋಗಲಿಲ್ಲ. ರಜೆ ಬರೆದು ಕಳಿಸಿದ. ಮತ್ತೆ ಪೇಟೆಗೆ ಬಂದ. ಮನಸ್ಸಿನ ಚಿಂತಗೆ ಎಲ್ಲಿಯಾದರೂ ದೂರ ಹೋಗಬೇಕೆಂದುಕೊಂಡ. ದುಡ್ಡಿನ ವಿಚಾರ ಹೊಕ್ಕಿತ್ತು. ಹೊಟ್ಟೆ ಹಸಿದಿತ್ತು. ಕಿಸೆಯೊಳಗೆ ಕೈ ಹಾಕಿದ, ಅಂಗಡಿಯವನ ರಸೀತಿ ಸಿಕ್ಕಿತು. ಅಲ್ಲಿಗೆ ಹೋಗಲು, ತನ್ನ ಹೆಸರು ಹೇಳಲು, ಅಂಥವಳ ಗಂಡನೆಂದು ಹೇಳಿಕೊಳ್ಳಲು ನಾಚಿಕೆಯಾಗುತ್ತಿತ್ತು. ಆದರೆ ಹದಿನೆಂಟು ಸಾವಿರ ರೂಪಾಯಿ ಯಾರು ಕೊಡುತ್ತಾರೆ?

ಮನಸ್ಸು ಬೇಡವೆಂದರೂ ಕಾಲು ತಂತಾನೇ ಅಂಗಡಿಯತ್ತ ನಡೆದವು. ಅಂಗಡಿಯ ಮೆಟ್ಟಿಲು ಹತ್ತಿ ಮತ್ತೆ ಕೆಳಗಿಳಿದ. ಕನಿಷ್ಟ ನೂರು ಸಲವಾದರೂ ಅವನು ಹಾಗೆ ಒಳಗೆ ಹೆಜ್ಜೆಯಿಡುವುದೂ ನಂತರ ಹಿಂತೆಗೆಯುವುದೂ ಮಾಡುತ್ತಿದ್ದ. ಎಂತಹ ಗಂಡ ತಾನು! ನಾಚಿಕೆ ಇಲ್ಲವೆ ಒಳಗೆ ಹೋಗಿ ದುಡ್ಡು ಎಣಿಸಲು! ಆದರೆ ಹೊಟ್ಟೆಯ ಹಸಿವನ್ನು ತಡೆಯಲಾರದಾದ. ಸಾವಕಾಶ ಹೆಜ್ಜೆ ಹಾಕಿದರೆ ಅಧೈರ್ಯ ಉಂಟಾಗುತ್ತದೆಯೆಂದು ಈ ಸಲ ಓಡುತ್ತ ಅಂಗಡಿಯ ಒಳಹೊಕ್ಕ. ಮಾಲಿಕ ಪರಿಚಯದ ನಗೆ ಬೀರಿದ. ಕೆಲಸದಾಳುಗಳು ಅವನನ್ನು ನೋಡಿ ನಕ್ಕರು.

ಮಾಲಿಕ ಅಂದ, 'ಹೂಂ. ನಾನು ವಿಚಾರಿಸಿದೆ. ನೀವು ಅವರ ಗಂಡ ಎಂದು ತಿಳಿಯಿತು. ನಾನು ನಿನ್ನೆ ಹೇಳಿದೆನಲ್ಲ. ಅದೇ ಬೆಲೆ.'

"ಆಯ್ತು"

ಅವನಲ್ಲಿ ಬೇರೆ ಮಾತಿರಲಿಲ್ಲ. ಮಾತಾಡುವ ಮನಸ್ಸು ಇರಲಿಲ್ಲ.

ಅಂಗಡಿಯವನು ಸರಸರ ದುಡ್ಡು ಎಣಿಸಿಕೊಟ್ಟ. ಅವನು ನಡುಗುವ ಕೈಗಳಿಂದ ಸಹಿ ಮಾಡಿ ಹಣವನ್ನು ಕಿಸೆಗೆ ತುರುಕಿದ. ಬರುವ ಮುನ್ನ ಏನೋ ನೆನಪಾದವರಂತೆ ಮಾಲಿಕನ ಕಿವಿಯಲ್ಲಿ ಹೇಳಿದ. "ನನ್ನ ಹತ್ತಿರ ಇನ್ನೂ ಸ್ವಲ್ಪ ಒಡವೆಗಳಿವೆ."

'ತೆಗೆದುಕೊಂಡು ಬನ್ನಿ.'

ಮತ್ತೊಂದು ತಾಸು ಬಿಟ್ಟು ಅವನು ತನ್ನ 'ಕಸದ ಬುಟ್ಟಿ'ಯನ್ನೇ ಅಂಗಡಿಗೆ ತೆಗೆದುಕೊಂಡು ಬಂದ. ವಜ್ರದ ಬೆಂಡೋಲೆ, ಝುಮುಕಿಗೆ ನಲವತ್ತು ಸಾವಿರ, ಉಂಗುರಕ್ಕೆ ಹದಿನಾರು, ಮುತ್ತು, ರತ್ನ, ಪಚ್ಚೆಗೆ ಇಪ್ಪತ್ತನಾಲ್ಕು, ಪದಕದ ಕೊರಳ ಚೈನಿಗೆ ನಲವತ್ತು ಒಟ್ಟು ಎಲ್ಲ ಸೇರಿ ಹತ್ತಿರ ಹತ್ತಿರ ಎರಡು ಲಕ್ಷ ರೂಪಾಯಿ ಆಯಿತು.

'ನಿಮ್ಮ ಹೆಂಡತಿ ತಮ್ಮ ಅಮೂಲ್ಯವಾದ ಸಂಪಾದನೆಯನ್ನು ಅಮೂಲ್ಯವಾದ ಬಂಗಾರದಲ್ಲಿಯೇ ಉಳಿಸಿದ್ದಾರೆ ಪಾಪ!' ಮಾಲಿಕ ವ್ಯಂಗ್ಯವಾಗಿ ಅಂದ.

ಗಂಡನೆನಿಸಿಕೊಂಡವನ ಬಳಿಯಲ್ಲಿ ಶಬ್ದವಿರಲಿಲ್ಲ. ಆದರೂ ಅಂದ. "ಸಂಪತ್ತಿನ ವ್ಯಯ-ವೃದ್ಧಿ ಎಂಬುದು ಅವರವರಿಗೆ ಬಿಟ್ಟ ವಿಚಾರ."

ಅಂಗಡಿಯಿಂದ ಹೊರಗೆ ಬಂದು ಅವನು ಈಗ ಸ್ವತಂತ್ರ ಹಕ್ಕಿಯಾದ. ಅವನನ್ನು ಹಿಡಿಯುವವರು ಯಾರೂ ಇರಲಿಲ್ಲ. ಟ್ಯಾಕ್ಸಿಯಲ್ಲಿ ಹೋಗಿ ನೌಕರಿಗೆ ರಾಜೀನಾಮೆ ಎಸೆದು ಬಂದ. ಐಷಾರಾಮಿ ಹೊಟೇಲಿಗೆ ಹೋಗಿ ಊಟ ಮಾಡಿದ. ಎದುರಿನ ಅಪರಿಚಿತನ ಬಳಿ 'ನನ್ನ ಹತ್ತಿರ ನಾಲ್ಕು ಲಕ್ಷ ದುಡ್ಡಿದೆ' ಎಂದು ಕೊಚ್ಚಿಕೊಂಡ. ನಾಟಕ, ಸಿನಿಮಾ ಅಂತ ತಿರುಗಾಡಲು ಅವನಿಗೆ ಈಗ ಕೊಂಚವೂ ಬೇಸರವೆನಿಸಲಿಲ್ಲ. ಹೀಗೆಯೇ ಆರು ತಿಂಗಳು ಕಳೆದ ಮೇಲೆ ಮತ್ತೆ ಮದುವೆಯಾಗಬೇಕೆಂಬ ಆಸೆ ಹೊಕ್ಕಿತು. ಧೂಮ್ ಧೂಮ್ ಅಂದು ಖರ್ಚು ಮಾಡಿ ಸುಂದರ ಹೆಂಡತಿಯೊಬ್ಬಳನ್ನು ಕಟ್ಟಿಕೊಂಡ. ಅವನ ಎರಡನೇ ಹೆಂಡತಿ ಅಪರಂಜಿ ಚೆನ್ನವಾಗಿದ್ದರೂ ಕೂಡ ಅವನನ್ನು ಬಾಚಿ ತಬ್ಬುತ್ತಿರಲಿಲ್ಲ. ಸದ್ಗುಣಿಯಾಗಿದ್ದರೂ ಕೂಡ ಕಾಲು ಕೆದರಿ ಜಗಳ ಮಾಡುವ ಅವಕಾಶ ಬಿಟ್ಟುಕೊಡುತ್ತಿರಲಿಲ್ಲ. ಸುಶೀಲೆಯಾಗಿದ್ದರೂ ಸುಹಾಸಿನಿಯಾಗಿರಲಿಲ್ಲ. ಹೀಗಾಗಿ ನರಕಕ್ಕೆ ಬಿದ್ದ ಅವನು ಈಗ 'ಕಸದ ಬುಟ್ಟಿ'ಯ ನೆನಪಿನಲ್ಲಿ ಕಣ್ಣೀರು ಸುರಿಸತೊಡಗಿದ.

* * *

# ದುಬಾರಿ ವಾಯು ವಿಹಾರ

ಮೂಲ : ಗೈದ ಮೊಪಾಸಾ ಕನ್ನಡಕ್ಕೆ : ವಿ. ಶ್ರೀನಿವಾಸ

ಹೆಕ್ಟರ್‌ದ ಗ್ರಿಬೆಲಿನ್ ಹಳೆಯ ಪ್ರಾಂತೀಯ ಮನೆತನವೊಂದರಲ್ಲಿ ಹುಟ್ಟಿದವ. ಆತ ತನ್ನ ಕುಟುಂಬವು ಶ್ರೀಮಂತ ಕುಟುಂಬವೇನೂ ಅಲ್ಲದಿದ್ದರೂ, ಡೌಲು, ಡಂಭಾಚಾರದಲ್ಲಿ ಎತ್ತಿದ ಕೈ. ಆತ ತನ್ನ ಇಪ್ಪತ್ತನೆಯ ವಯಸ್ಸಿನಲ್ಲಿ ನೌಕಾಪಡೆಯ ಆಡಳಿತ ಕಛೇರಿಯಲ್ಲಿ ಒಂದು ನೌಕರಿಯನ್ನು ಗಿಟ್ಟಿಸಿಕೊಂಡ. ಆತನಿಗೆ ವರ್ಷಕ್ಕೆ 1500 ಫ್ರಾಂಕಗಳ ಸಂಬಳ ಬರುತ್ತಿತ್ತು. ಬಹುತೇಕ ಮಂದಿ ನೌಕರರಂತೆ, ಆತ ಹೊಗಳು ಸಿದ್ಧನಿರಲಿಲ್ಲವಾದ್ದರಿಂದ ಆತನ ಮೊದಲ ಮೂರು ವರ್ಷಗಳ ಸೇವಾವಧಿಯಲ್ಲಿ ಜೀವನ ಸಾಗಿಸುವುದು ತುಂಬ ಕಠಿಣವಾಗಿತ್ತು.

ತನ್ನ ಕುಟುಂಬದ ಕೆಲವು ಹಳೆಯ ಮಿತ್ರರ – ಅವರೂ ತನ್ನಂತೆಯೇ ಬಡವರು – ಪರಿಚಯವನ್ನು ಕುದುರಿಸಿಕೊಂಡು, ನಿರ್ಜನ ಪ್ರದೇಶವಾದ ಫಾಬೊರ್ಗ್ ಸೆಯಿಂಟ್ ಜರ್ಮೆಯ್ನ್‌ನಲ್ಲಿ ವಾಸಿಸುತ್ತ, ತನ್ನ ಗೌರವ-ಅಂತಸ್ತುಗಳನ್ನು ಜನರ ಮುಂದೆ ಮರೆಸಲು ತನ್ನ ಸರ್ವಸ್ವವನ್ನು ತ್ಯಾಗ ಮಾಡಿ, ತೋರಿಕೆಯ, ಡಂಭಾಚಾರದ ಜೀವನವನ್ನು ನಡೆಸುತ್ತಿದ್ದ.

ಇಲ್ಲಿಯೇ ಆತ ಬಿರುದಾಂಕಿತ ಆದರೆ ಬರಿಗೈ ಕುಟುಂಬವೊಂದರ ತರುಣಿಯೊಬ್ಬಳನ್ನು ಭೇಟಿಯಾಗಿ ವಿವಾಹವಾದದ್ದು. ಅವರಿಗೆ ಇಬ್ಬರು ಮಕ್ಕಳಾದರು. ಹೆಕ್ಟರ್ ಮತ್ತು ಆತನ ಪತ್ನಿ ಕುಟುಂಬ ನಿರ್ವಹಣೆಗಾಗಿ ತುಂಬ ಹೆಣಗಾಡುತ್ತಿದ್ದರು, ಕಷ್ಟಪಡುತ್ತಿದ್ದರು. ಕಳೆದ ನಾಲ್ಕು ವರ್ಷಗಳಲ್ಲಿ ವಾರಕ್ಕೊಮ್ಮೆ, ಭಾನುವಾರ, ಛಾಂಪ್ಸ್ ಎಲಿಸಿಗೆ ನಡೆದುಕೊಂಡು ಹೋಗಿ ಬರುವುದು; ಸ್ನೇಹಿತನೊಬ್ಬ ಕೊಟ್ಟ ಟಿಕೆಟ್‌ಗಳನ್ನು ತೆಗೆದುಕೊಂಡು ಹೋಗಿ ನಾಟಕ ಮಂದಿರದಲ್ಲಿ ಕೆಲವು ರಾತ್ರಿಗಳನ್ನು ಕಳೆಯುವುದು – ಇವೆರಡನ್ನು ಬಿಟ್ಟರೆ ಮತ್ತಾವ ಮನರಂಜನೆಯೂ ಇರಲಿಲ್ಲ, ಈ ಕುಟುಂಬಕ್ಕೆ.

ಕಛೇರಿಯ ಮುಖ್ಯಸ್ಥ ಆತನಿಗೆ ಹೆಚ್ಚುವರಿ ಕೆಲಸ ವಹಿಸಿ, ಅದಕ್ಕಾಗಿ 300

ಫ್ರಾಂಕ್‌ಗಳ ಹೆಚ್ಚುವರಿ ವೇತನವನ್ನು ನೀಡಿದ. ಅಂದು ಸಂಜೆ ಮನೆಗೆ ಬಂದೊಡನೆಯೇ ಆತ ತನ್ನ ಪತ್ನಿಗೆ ಹೇಳಿದ :

"ಪ್ರಿಯೆ, ಹೆನ್ರಿಯೆಟ್, ಈಗ ಕೈಗೆ ಬಂದಿರುವ ಹಣದಿಂದ ನಾವು ಏನನ್ನಾದರೂ ಮಾಡಬೇಕು. ಮಕ್ಕಳನ್ನು ಕರೆದುಕೊಂಡು ಒಂದು ಸಂತಸದ ವಾಯುವಿಹಾರಕ್ಕೆ ನಾವು ಏಕೆ ಹೊರಡಬಾರದು?"

ಈ ದಂಪತಿಗಳು ಈ ವಿಷಯದ ಬಗ್ಗೆ ಸುದೀರ್ಘ ಚರ್ಚೆ ನಡೆಸಿ, ವನಭೋಜನಕ್ಕೆ ಹೊರಡುವುದೆಂದು ತೀರ್ಮಾನಿಸಿದರು.

ಹೆಕ್ಟರ್ ಹೇಳಿದ : "ನಾವು ವಾಯು ವಿಹಾರಕ್ಕೆ ಹೋದದ್ದೆ ಅಪರೂಪ. ಆದ್ದರಿಂದ ನಾವು ಈ ಬಾರಿ ಕಾರ್ಯಕ್ರಮವನ್ನು ಸರಿಯಾಗಿ ರೂಪಿಸುವುದು ಉಚಿತ. ನಿನಗೂ ಮಕ್ಕಳಿಗೂ ಒಂದು ವಾಹನ, ನನಗೊಂದು ಕುದುರೆ ಬಾಡಿಗೆಗೆ ತೆಗೆದುಕೊಳ್ಳೋಣ, ಕುದುರೆ ಸವಾರಿ ನನಗೆ ಒಳ್ಳೆಯದು."

ಆ ವಾರವೆಲ್ಲ ಮನೆಯಲ್ಲಿ ವಾಯು ವಿಹಾರದ ಮಾತುಕತೆ ಬಿಟ್ಟರೆ ಬೇರೆ ಮಾತೇ ಇಲ್ಲ. ಪ್ರತಿ ರಾತ್ರಿ ಆತ ತನ್ನ ದೊಡ್ಡ ಮಗನನ್ನು ತನ್ನ ಕಾಲ ಮೇಲೆ ನಿಲ್ಲಿಸಿಕೊಂಡು, ಕೆಳಕ್ಕೆ ಮೇಲಕ್ಕೆ ಕುಣಿಸುತ್ತ ಹೇಳುತ್ತಿದ್ದ :

"ಮುಂದಿನ ವಾರ ಅಪ್ಪ ಕುದುರೆ ಸವಾರಿ ಮಾಡುವುದು ಹೀಗೆಯೇ." ಆ ಹುಡುಗ ದಿನವೆಲ್ಲ ಕುರ್ಚಿಗಳ ಮೇಲೆ 'ಕುದುರೆ ಸವಾರಿ' ಮಾಡಿದ್ದೇ ಮಾಡಿದ್ದು – "ಕುದುರೆಯ ಮೇಲೆ ಅಪ್ಪ" ಎಂದು ಕಿರಿಚುತ್ತ.

ಮನೆಗೆ ಬಂದೊಡನೆಯೇ ಹೆಕ್ಟರ್ ತನ್ನ ಕದುರೆ ಸವಾರಿಯ ಸಾಹಸಗಳನ್ನು ವರ್ಣಿಸುತ್ತ, ತಾನು ವಾಹನದ ಪಕ್ಕದಲ್ಲಿ ಕುದುರೆ ಸಾವರಿ ಮಾಡುವುದಾಗಿ ಬೀಗುತ್ತಿದ್ದ. ಇದನ್ನು ಕೇಳಿ, ಕೇಳಿ, ಮನೆಯಲ್ಲಿ ಕೆಲಸ ಮಾಡುತ್ತಿದ್ದ ಸೇವಕರಿಗೆ ಕೂಡ ಕುಚೋದ್ಯವೆನಿಸಿತು.

ಆತ ಹೇಳುತ್ತಿದ್ದ : "ಒಮ್ಮೆ ನಾನು ಕದುರೆಯನ್ನೇರಿದೆನಂದರೆ, ನಾನು ಯಾವುದಕ್ಕೂ ಅಂಜುವವನಲ್ಲ. ನೆಗೆಯುವ ಕುದುರೆ ದೊರೆತರಂತೂ ನನಗೆ ಇನ್ನು ಹೆಚ್ಚು ಸಂತೋಷವೇ. ನಾನು ಹೇಗೆ ಕುದುರೆ ಸವಾರಿ ಮಾಡುತ್ತೇನೆ – ನೋಡುತ್ತೀರಿ. ನೀವು ಇಷ್ಟಪಡುವುದಾದರೆ, ಎಲ್ಲರೂ ಮನೆಗೆ ಮರಳಿ ಬರುವಾಗ ಛಾಂಪ್ಸ್ ಎಲಿಸಿಯ ಮಾರ್ಗವಾಗಿಯೇ ಮರಳಿ ಬರಬಹುದು. ಅದರಿಂದ ನಾವೂ ಗಣ್ಯವ್ಯಕ್ತಿಗಳೆನಿಸಿಕೊಳ್ಳುತ್ತೇವೆ. ನಮ್ಮ ಕಛೇರಿಯವರು ಯಾರನ್ನಾದರೂ ಕಂಡು ಮಾತನಾಡಲು ನನಗೇನೂ ಚಿಂತೆಯಾಗದು, ಸಂಕೋಚವಾಗದು. ನಮ್ಮ ಬಗ್ಗೆ ಜನರಲ್ಲಿ ಗೌರವ ಮೂಡಿಸಲು ಅದಕ್ಕಿಂತಲೂ ಮಿಗಿಲಾದ ಅವಕಾಶ ಮತ್ತೊಂದಿಲ್ಲ."

ಕಡೆಗೆ, ಭಾನುವಾರ ಬಂತು. ವಾಹನ ಮತ್ತು ಕುದುರೆ ಮನೆಯ ಮುಂದೆ ಬಂದು ನಿಂತವು. ಕೂಡಲೆ, ಹೆಕ್ಟರ ಹೊಸ ಕುದುರೆ ಸವಾರಿ ಚಾಟಿಯೊಂದನ್ನು

ಹಿಡಿದುಕೊಂಡು, ಕುದುರೆಯನ್ನು ಪರೀಕ್ಷಿಸಲು ಹೊರಗೆ ಬಂದ. ಆತ ಕುದುರೆಯನ್ನು ಅಡಿಯಿಂದ ಮುಡಿಯವರೆಗೆ ಪರೀಕ್ಷಿಸಿದ; ಅದರ ಬಾಯಿ ತೆರೆದು, ಅದರ ವಯಸ್ಸನ್ನು ಹೇಳಿದ. ಮನೆಯವರು ಗಾಡಿಯನ್ನೇರಲು ಹೊರಕ್ಕೆ ಬರುತ್ತಿದ್ದಂತೆ, ಆತ ಅಶ್ವಜಾತಿಯ ಬಗ್ಗೆ ವಿಶೇಷವಾಗಿ ಈ ಕುದುರೆಯ ಬಗ್ಗೆ ಒಂದು ಭಾಷಣವನ್ನೇ ಬಿಗಿದ. ಅದೊಂದು ಸೊಗಸಾದ ಕುದುರೆಯೆಂದು ಘೋಷಿಸಿದ.

ಎಲ್ಲರೂ ಗಾಡಿಯಲ್ಲಿ ಆರಾಮವಾಗಿ ಕುಳಿತ ನಂತರ, ಹೆಕ್ಟರ್ ತಡಿಯನ್ನು ಪರೀಕ್ಷಿಸಿ, ಕದುರೆಯ ಬೆನ್ನ ಮೇಲೆ ನೆಗೆದು ಕುಕ್ಕರಿಸಿದ. ಆತ ಕುದುರೆಯ ಬೆನ್ನ ಮೇಲೆ ಕುಕ್ಕರಿಸಿದ ರಭಸಕ್ಕೆ ಕುದುರೆ ಕುಣಿಯುಲಾರಂಭಿಸಿತು; ಸವಾರನೇ ಬಿದ್ದುಹೋಗುವುದರಲ್ಲಿದ್ದ. ಹೆಕ್ಟರ್ ಗಡಿಬಿಡಿಕೊಂಡು, ಕುದುರೆಯನ್ನು ಶಾಂತಗೊಳಿಸಲು ಪ್ರಯತ್ನಿಸಿ, "ಬಾ. ಹಳೆಯ ಮಿತ್ರನೇ, ಶಾಂತನಾಗು" ಎಂದ. ಅದನ್ನು ಸ್ವಲ್ಪ ಮಟ್ಟಿಗೆ ಶಾಂತಗೊಳಿಸಿ "ಎಲ್ಲರೂ ಹೊರಡಲು ಸಿದ್ಧ ತಾನೇ?" ಎಂದು ಕೇಳಿದ.

ಪ್ರತಿಯೊಬ್ಬರೂ ಹೊರಡಲು ಸಿದ್ಧರಾಗಿರುವುದಾಗಿ ತಿಳಿಸಿದ ನಂತರ, ತಂಡವು ಹೊರಟಿತು. ಎಲ್ಲರ ದೃಷ್ಟಿಯೂ ಹೆಕ್ಟರ್‌ನ ಮೇಲೆಯೇ ನೆಟ್ಟಿತ್ತು. ಆಂಗ್ಲ ಕುದುರೆ ಸವಾರನಂತೆ ನಟಿಸುತ್ತ, ಆತ ತಡಿಯಿಂದ ಮೇಲಕ್ಕೂ ಕೆಳಕ್ಕೂ ನಗೆಯಗೊಡಗಿದ. ಆತನ ನೆಗೆತ ತುಸು ಹೆಚ್ಚೇ ಆಯಿತು, ಉತ್ಪ್ರೇಕ್ಷಿತವೆನಿಸಿತು. ಆತ ಹುಬ್ಬುಗಂಟಿಕ್ಕಿಕೊಂಡು ಮುಂದೆ ನೋಡುತ್ತಿದ್ದ; ಬಲು ಸಪ್ಪೆ ಮುಖಮಾಡಿಕೊಂಡು ಅವನ ಪತ್ನಿಯೂ ಸೇವಕಿಯೂ ಒಬ್ಬೊಬ್ಬ ಹುಡುಗನನ್ನು ತಮ್ಮ ತೊಡೆಯಮೇಲೆ ಕೂರಿಸಿಕೊಂಡಿದ್ದರು.

ಪ್ರತಿಕ್ಷಣವೂ ಹುಡುಗರು "ಅಪ್ಪನನ್ನು ನೋಡಿ, ಅಪ್ಪನನ್ನು ನೋಡಿ" ಎಂದು ಹೇಳುತ್ತಿದ್ದರಲ್ಲದೆ, ಆನಂದ ತುಂದಿಲರಾಗಿ ಒಂದೇ ಸಮನೆ ಕಿರಿಚುತ್ತಿದ್ದರು. ಅಷ್ಟೊಂದು ಗಲಾಟೆಯಿಂದ ಗಾಬರಿಗೊಂಡ ಕುದುರೆ ವೇಗವಾಗಿ ಓಡಲಾರಂಭಿಸಿತು. ವಾಹನ ಚಾಲಕ ಗಾಡಿಯಿಂದ ಕೆಗಿಳಿದು ಟೋಪಿಯನ್ನು ಎತ್ತಿಕೊಳ್ಳಬೇಕಾಯಿತು. ಟೋಪಿನ್ನು ಮರಳಿ ಪಡೆದು, ಆತನ ತನ್ನ ಪತ್ನಿಗೆ "ಮಕ್ಕಳು ಕಿರಿಚಾಟವನ್ನು ನಿಲ್ಲಿಸುವಂತೆ ಮಾಡು. ಇಲ್ಲದಿದ್ದರೆ ಕುದುರೆಯು ಓಡಿಹೋಗುತ್ತದೆ" ಎಂದನು.

ಕಡೆಗೆ, ಗಮ್ಯಸ್ಥಾನವನ್ನು ಸೇರಿದಂತಾಯಿತು. ಬಿಟ್ಟಿಗಳನ್ನು ತೆರೆದು ಹುಲ್ಲಿನ ಮೇಲೆ ಕುಳಿತು ಊಟ ಮಾಡಿದರು. ವಾಹನ ಚಾಲಕನು ಕುದುರೆಗಳನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದಾಗ್ಯೂ, ಹೆಕ್ಟರ್ ಗಳಿಗೆಗೊಂದು ಬಾರಿ ತನ್ನ ಕುದುರೆಗೆ ಏನಾದರೂ ಬೇಕಾಗಿದೆಯೇನೋ ಎಂದು ನೋಡಿಕೊಂಡು ಬರುತ್ತಿದ್ದ. ಕುದುರೆಯ ಮೈಯನ್ನು ಸವರಿ, ಅದಕ್ಕೆ ಬ್ರೆಡ್, ಕೇಕ್ ಮತ್ತು ಸಕ್ಕರೆಯನ್ನು ತಿನ್ನಿಸಿದ.

ಆತ ತನ್ನ ಪತ್ನಿಗೆ ಹೇಳಿದ : "ಅದು ಒಳ್ಳೆಯ ತಳಿಯ ಕುದುರೆ, ಮೊದಲು ಅದು ನನ್ನನ್ನು ಅಲುಗಾಡಿಸಿತು. ಆದರೆ, ನೀನೇ ನೋಡಿದೆಯಲ್ಲ, ನಾನು ಎಷ್ಟು ಬೇಗನೆ ಅದನ್ನು ಹತೋಟಿಗೆ ತಂದೆ. ಅದು ಈಗ ನನ್ನ ಯಜಮಾನನೆಂದು ತಿಳಿದಿದೆ."

ಮೊದಲೇ ಒಪ್ಪಿಕೊಂಡಿದ್ದಂತೆ, ಛಾಪ್ಸ್ ಎಲಿಸಿ ಮಾರ್ಗವಾಗಿ ಮರಳಿದರು. ಹವಾಗುಣ ಹಿತಕರವಾಗಿದ್ದುದರಿಂದ ವಿಶಾಲವಾದ ಮಾರ್ಗದ ತುಂಬ ವಾಹನಗಳು ನೆರೆದಿದ್ದವು. ಕಾಲು ದಾರಿಗಳಲ್ಲಿ ಪಾದಚಾರಿಗಳ ಸಾಲು-ಸಾಲಾಗಿ ಹೋಗುತ್ತಿದ್ದರು. ಕುದುರೆ ಲಯವನ್ನು ಕಂಡ ಕದುರೆ ಇದ್ದಕ್ಕಿದ್ದಂತೆ ಓಡಲಾರಂಭಿಸಿತು. ಅದು ವಾಹನಗಳ ನಡುವೆ, ಬಿರುಗಾಳಿಯಂತೆ, ಬಿರುಸಾಗಿ ಓಡಲಾರಂಭಿಸಿತು. ಅದನ್ನು ನಿಲ್ಲಿಸಲು ಹೆಕ್ಟರ್ ಮಾಡಿದ ಪ್ರಯತ್ನಗಳೆಲ್ಲವೂ ವಿಫಲವಾದವು. ಆತನ ಕುಟುಂಬದವರು ಕುಳಿತಿದ್ದ ಗಾಡಿ ತುಂಬ ಹಿಂದೆ ಬರುತ್ತಿತ್ತು.

ಪ್ಯಾಲೇಸ್‌ದ ಲ ಇಂಡಸ್ಟ್ರಿಯ ಮುಂದೆ, ಕುದುರೆ ನಾಗಾಲೋಟದಲ್ಲಿ ಬಲಕ್ಕೆ ತಿರುಗಿತು. ಆ ವೇಳೆಯಲ್ಲಿ ಮುದುಕಿಯೊಬ್ಬಳು ನಿಧಾನವಾಗಿ ರಸ್ತೆ ದಾಟುತ್ತಿದ್ದಳು. ಕುದುರೆಯನ್ನು ನಿಲ್ಲಿಸಲಾಗದೆ ಹೆಕ್ಟರ್ "ಹೆ, ದಾರಿಬಿಡು, ಹೆ" ಎಂದು ಕಿರಿಚಿದ. ಆದರೆ, ಆ ಮುದುಕಿಗೆ ಕಿವಿ ಕೇಳಿಸುತ್ತಿರಲಿಲ್ಲವೋ ಏನೋ, ಆಕೆ ನಿಧಾನವಾಗಿಯೇ ರಸ್ತೆ ದಾಟುತ್ತಿದ್ದಳು. ಕುದುರೆ ಡಿಕ್ಕಿ ಹೊಡೆದ ರಭಸಕ್ಕೆ ಮುದುಕಿ ಮೂರು ಬಾರಿ ಪಲ್ಟಿ ಹೊಡೆದು, ಹತ್ತು ಅಡಿ ದೂರದಲ್ಲಿ ಬಿದ್ದಳು.

ಹೆಕ್ಟರ್ ದಿಗ್ಭ್ರಾಂತನಾಗಿ, ಕುದುರೆಯ ಕತ್ತಿನ ನೀಳವಾದ ಕೂದಲನ್ನು ಹಿಡಿದುಕೊಂಡು "ಸಹಾಯ ಮಾಡಿ, ಸಹಾಯ ಮಾಡಿ" ಎಂದು ಬೊಬ್ಬೆಯಿಡಲಾರಂಭಿಸಿದ. ಭೀಕರ ಆಘಾತದಿಂದ ಆತ ಕುದುರೆಯ ತಲೆಯ ಮೇಲೆ ಬಂದು ಬಿಟ್ಟ-ಬಾಣದಂತೆ, ತನ್ನತ್ತ ಬರುತ್ತಿದ್ದ ಪೋಲೀಸಿನವನ ತಕ್ಕೆಗೆ ಬಿದ್ದ. ಆಕ್ರೋಶಗೊಂಡ ಜನರ ಗುಂಪು ನೆರೆಯಿತು. ಬಿರುದಿನ ಪದಕವನ್ನು ಧಕ್ಕಿಸಿದ್ದ ಓರ್ವ ವೃದ್ಧನಂತೂ ತುಂಬ ಕುಪಿತನಾದ :

"ಹಾಳಾದವನೆ! ಕುದುರೆ ಸವಾರಿ ಮಾಡಲು ಬರದಿದ್ದ ಮೇಲೆ, ನೀನು ತೆಪ್ಪಗೆ ಮನೆಯಲ್ಲಿ ಕುಳಿತುಕೊಳ್ಳದೆ, ಜನರ ಮೇಲೆ ಏಕೆ ಕುದುರೆಯನ್ನು ಹಾಯಿಸುತ್ತೀಯೆ?" ಎಂದು ಕೇಳಿದ.

ನಾಲ್ಕು ಜನರು ಮುದುಕಿಯನ್ನು ಸಾಗಿಸುತ್ತಿದ್ದರು. ಆಕೆ ಸತ್ತು ಹೋಗಿದ್ದಂತೆಯೇ ಕಾಣಿಸುತ್ತಿದ್ದಳು.

ಆ ವೃದ್ಧ "ಆಕೆಯನ್ನು ಆಸ್ಪತ್ರೆಗೆ ಸಾಗಿಸಿ. ನಡೆಯಿರಿ, ನಾವು ಪೋಲಿಸ್ ಸ್ಟೇಷನ್‌ಗೆ ಹೋಗೋಣ" ಎಂದ.

ಇಬ್ಬರು ಪೋಲೀಸನವರ ನಡುವೆ ಹೋಗುತ್ತಿದ್ದ ಹೆಕ್ಟರ್‌ನನ್ನು ಜನರ ಗುಂಪು ಹಿಂಬಾಲಿಸುತ್ತಿತ್ತು. ಮೂರನೆಯ ಪೋಲೀಸಿನವ ಕುದುರೆಯನ್ನು ಹಿಡಿದಿದ್ದ. ಅಷ್ಟರಲ್ಲಿ, ವಾಹನ ಬಂದಿತು. ಕ್ಷಣಾರ್ಧದಲ್ಲಿ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡ ಆತನ ಪತ್ನಿ ಅವನತ್ತ ಓಡಿದಳು; ಸೇವಕಿಯೂ ಮಕ್ಕಳೂ ಆಕೆಯ ಹಿಂದೆ ಬಂದರು ಅಳುತ್ತ. ಆತ ತನ್ನ ಕುದುರೆ ಮಹಿಳೆಯೊಬ್ಬಳನ್ನು ನೆಲಕ್ಕುರುಳಿಸಿ ಬಿಟ್ಟಿತು. ಅಷ್ಟೇ ಅದೇನೂ ದೊಡ್ಡ ವಿಷಯವಲ್ಲ. ತಾನು ಬೇಗನೆ ಮನೆಗೆ ಬರುತ್ತೇನೆ ಎಂದು ವಿವರಿಸಿದ.

ಆತ ಪೊಲೀಸ್ ಸ್ಟೇಷನ್ ತಲುಪಿ, ತನ್ನ ಹೆಸರು, ತಾನು ಕೆಲಸ ಮಾಡುತ್ತಿರುವ ಸ್ಥಳದ ವಿವರಗಳನ್ನು ತಿಳಿಸಿ, ಗಾಯಗೊಂಡ ಮುದುಕಿಯ ಸ್ಥಿತಿಯ ಬಗ್ಗೆ ಸುದ್ದಿಗಾಗಿ ಕಾಯುತ್ತಿದ್ದ. ಅಷ್ಟರಲ್ಲಿ ಪೊಲೀಸಿನವನೊಬ್ಬ ಹಿಂತಿರುಗಿ ಬಂದು, ಮಹಿಳೆಯ ಹೆಸರು ಮದಾಂ ಸೈಮನ್ ಎಂದೂ, ಆಕೆ ದಿನಗೂಲಿಯ ಮನೆಕಲಸದಾಕೆಯೆಂದೂ, ಆಕೆಯ ವಯಸ್ಸು 65 ವರ್ಷಗಳೆಂದೂ ತಿಳಿಸಿದ. ಆಕೆಗೆ ಜ್ಞಾನವೇನೋ ಬಂದಿತ್ತು. ಆದರೆ, ಆಕೆ ತನಗೆ ಒಳ ಪೆಟ್ಟು ಆಂತರಿಕ ಹೊಡೆತ ಬಿದ್ದಿದೆಯೆಂದು ಹೇಳುತ್ತಾಳೆ. ಆಕೆ ಸತ್ತಿಲ್ಲವೆಂದು ತಿಳಿದು ಹೆಕ್ಟರ್ ಚೇತರಿಸಿಕೊಂಡ. ಆಕೆಯ ಚಿಕಿತ್ಸೆಯ ವೆಚ್ಚವನ್ನು ಭರಿಸುವುದಾಗಿ ಭರವಸೆಯಿತ್ತು ಅಲ್ಲಿಂದ ಆತ ಮುದುಕಿಯನ್ನು ನೋಡಲು ಆಸ್ಪತ್ರೆಗೆ ತೆರಳಿದ. ಆಸ್ಪತ್ರೆಯಲಿ ಜನರ ಭಾರಿ ಗುಂಪೇ ನೆರದಿತ್ತು. ಆಕೆ ನೋವಿನಿಂದ ನರಳುತ್ತ, ಅಳುತ್ತ ಗೋಳಾಡುತ್ತಿದ್ದಳು. ಆಕೆಯ ಸ್ಥಿತಿ ಕುರುಣಾಜನಕದಾಗಿತ್ತು. ಇಬ್ಬರು ವೈದ್ಯರು ಆಕೆಯುನ್ನು ಪರೀಕ್ಷೆ ಮಾಡುತ್ತಿದ್ದರು. ಅವರು ಹೇಳಿದರು : "ಮೂಳೆಗಳೇನೂ ಮುರಿದಿಲ್ಲ. ಆದರೆ, ಆಕೆಗೆ ಆಂತರಿಕ ಹೊಡೆತ ಬಿದ್ದಿರುವ ಆತಂಕವಿದೆ."

"ತುಂಬ ನೋವಾಗುತ್ತಿದೆಯೇ?" ಎಂದು ಕೇಳಿದ ಹೆಕ್ಟರ್

"ಓ, ಹೌದು"

"ಎಲ್ಲಿ?"

"ಒಳಗಡೆ ಬೆಂಕಿ ಹೊತ್ತಿಕೊಂಡು ಉರಿಯುತ್ತಿದೆ ಎನಿಸುತ್ತದೆ, ನನಗೆ"

"ಹಾಗಾದರೆ, ಈ ಅಪಘಾತಕ್ಕೆ ನೀವು ಕಾರಣರೇ?" ಎಂದು ಕೇಳಿದ, ವೈದ್ಯನೊಬ್ಬ, ಹತ್ತಿರ ಬಂದು.

"ಹೌದು, ಮಾನ್ಯರೆ" ಎಂದು ಹೆಕ್ಟರ್.

"ಈ ಮಹಿಳೆ ದುರ್ಬಲರ ಚಿಕಿತ್ಸಾಲಯ (Sanetorium)ಕ್ಕೆ ಹೋಗಬೇಕು. ನನಗೆ ಗೊತ್ತಿರುವ ಒಂದು ಸ್ಯಾನಿಟೋರಿಯಂನಲ್ಲಿ ಈಕೆಯನ್ನು ದಿನಕ್ಕೆ ಆರು ಫ್ರಾಂಕಗಳ ಶುಲ್ಕದ ಮೇಲೆ ಸೇರಿಸಿಕೊಳ್ಳುತ್ತಾರೆ. ನಿಮಗಾಗಿ ಅದನ್ನು ಗೊತ್ತು ಪಡಿಸಲೇ?"

ಹೆಕ್ಟರ್ ಆತನನ್ನು ಕೃತಜ್ಞತಾಪೂರ್ವಕವಾಗಿ ವಂದಿಸಿ, ಮನೆಗೆ ತೆರಳಿದ ಸಮಾಧಾನಚಿತ್ತನಾಗಿ. ಮನೆಯಲ್ಲಿ ಪತ್ನಿ ಅಳುತ್ತ ಕುಳಿತಿದ್ದುದನ್ನು ಕಂಡು ಆಕೆಯನ್ನು ಸಂತೈಸಿದ.

"ಚಿಂತಿಸ ಬೇಡ ಆಕೆಯ ಪರಿಸ್ಥಿತಿ ಈಗಾಗಲೇ ತುಂಬ ಸುಧಾರಿಸಿದೆ. ನಾನು ಆಕೆಯನ್ನು ಸ್ಯಾನಿಟೋರಿಯಂಗೆ ಕಳುಹಿಸಿದೆ. ಮೂರು ದಿನಗಳಲ್ಲಿ ಆಕೆ ಸಂಪೂರ್ಣವಾಗಿ ಗುಣಮುಖಳಾಗುತ್ತಾಳೆ."

ಮಾರನೆಯ ದಿನ ಕಲಸ ಮುಗಿಸಿಕೊಂಡು ಆತ ಮದಾಂ ಸೈಮನ್‌ಳನ್ನು ನೋಡಿಬರಲು ಆಸ್ಪತ್ರೆಗೆ ಹೋದ. ಆಕೆ ಗೋಮಾಂಸದ ಸೂಪ್‌ನ್ನು ಸೇವಿಸುತ್ತಿದ್ದಳು – ತುಂಬ ಇಷ್ಟದಿಂದ, ಬಾಯಿಚಪ್ಪರಿಸುತ್ತ.

"ಸರಿ, ಹೇಗಿದೆ ನಿನ್ನ ಆರೋಗ್ಯ?" ಎಂದು ಕೇಳಿದ ಹೆಕ್ಟರ್.

"ಏನೂ ಸುಧಾರಣೆ ಇಲ್ಲ. ಅಯ್ಯೋ, ನಾನು ಸತ್ತಂತೆಯೇ ಎನಿಸುತ್ತಿದೆ" ವೈದ್ಯರು ಕಾದು ನೋಡಬೇಕು. ಯಾವುದಾದರೂ ಸಮಸ್ಯೆಗಳು ತಲೆದೋರಲೂಬಹುದು ಎಂದರು. ಆತ ಮೂರು ದಿನ ಕಾದು, ನಂತರ, ಮುದುಕಿಯನ್ನು ಮತ್ತೊಮ್ಮೆ ನೋಡಿ ಬರಲು ಹೋದ. ಆಕೆಯ ಚರ್ಮ ನಿರ್ಮಲವಾಗಿತ್ತು. ಕಣ್ಣುಗಳು ಪ್ರಕಾಶಮಾನವಾಗಿದ್ದವು. ಆದರೆ ಹೆಕ್ಟರ್‌ನನ್ನು ಕಂಡಕೂಡಲೆ ನರಳಲಾರಂಭಿಸಿದಳು:

"ನಾನು ಇನ್ನು ನಡೆದಾಡುವಂತೆಯೇ ಇಲ್ಲ; ನನ್ನ ಉಳಿದ ಆಯುಷ್ಯವನ್ನೆಲ್ಲ ನಾನು ಹೀಗೆಯೇ ಕಳೆಯಬೇಕಾಗುತ್ತದೆ!"

ಹೆಕ್ಟರ್‌ನಿಗೆ ಬೆನ್ನಿನಲ್ಲಿ ನಡುಕುವುಂಟಾಯಿತು. ಆತ ವೈದ್ಯರನ್ನು ಕಂಡು ರೋಗಿಯ ಬಗ್ಗೆ ವಿಚಾರಿಸಿದ.

ವೈದ್ಯರು "ನಾನೇ ತಬ್ಬಿಬ್ಬಾಗಿದ್ದೇನೆ. ಆಕೆಯನ್ನು ಎಬ್ಬಿಸಲು ಅಥವಾ ಮಗ್ಗುಲು ಹೊರಳಿಸಲು ನಾವು ಪ್ರಯತ್ನಿಸಿದಾಗಲೆಲ್ಲ, ಆಕೆ ಹೃದಯ ವಿದ್ರಾಹಕವಾಗಿ ಚೀತ್ಕರಿಸುತ್ತಾಳೆ. ಏನೇ ಆಗಲಿ, ನಾನು ಆಕೆಯನ್ನು ನಂಬಲೇಬೇಕಾಗುತ್ತದೆ. ಆಕೆ ನಡೆದಾಡುವುದನ್ನು ನೋಡುವವರೆಗೆ, ನಾನು ಆಕೆ ನಟನೆ ಮಾಡುತ್ತಿದ್ದಾಳೆ ಎಂದು ಹೇಳಲಾರೆ" ಎಂದರು.

ಮುದುಕಿ ಗಮನವಿಟ್ಟು ಆಲಿಸಿದಳು. (ಆಕೆಯ ಮುಖಭಂಗಿಯು ಕೃತ್ರಿಮ, ಕಪಟೋಪಾಯವನ್ನು ಸೂಚಿಸುತ್ತಿತ್ತು) ಒಂದು ವಾರ, ಎರಡು ವಾರ, ಕಡೆಗೆ ಒಂದು ತಿಂಗಳು ಕಳೆಯಿತು. ಆದಾಗ್ಯೂ, ಮದಾಂ ಸೈಮನ್ ಕುರ್ಚಿಯನ್ನು ಬಿಟ್ಟು ಏಳಲಿಲ್ಲ. ಆಕೆ ಚೆನ್ನಾಗಿ ಹೊಟ್ಟೆ ತುಂಬ ಊಟ ಮಾಡುತ್ತಿದ್ದಳು. ಮೈಕೈ ತುಂಬಿಕೊಂಡಳು, ಇತರ ರೋಗಿಗಳೊಂದಿಗೆ ತಮಾಷೆ ಮಾಡುತ್ತಿದ್ದಳು. ದಿನಗೂಲಿಯ ಮನೆಕೆಲಸದಾಕೆಯಾಗಿ ಐವತ್ತು ವರ್ಷಗಳ ಕಾಲ ದುಡಿದದ್ದಕ್ಕೆ ಪ್ರತಿಫಲವಾಗಿ ಗಳಿಸಿಕೊಂಡ ವಿಶ್ರಾಂತಿಯೆಂದು ಆಕೆ ತನ್ನ ಪಾಲಿಗೆ ಬಂದ ಪರಿಸ್ಥಿತಿಯನ್ನು ಒಪ್ಪಿಕೊಂಡಂತೆ ಕಾಣುತ್ತಿದ್ದಳು.

ಹೆಕ್ಟರ್ ಪ್ರತಿದಿನವೂ ಆಸ್ಪತ್ರೆಗೆ ಹೋಗುತ್ತಿದ್ದ. ಆಕೆಯ ಪರಿಸ್ಥಿತಿ ಬದಲಾಗಲಿಲ್ಲ. ಯಾವಾಗಲೂ ಆಕೆ ಹೇಳುತ್ತಿದ್ದುದು ಒಂದೇ ಮಾತು.

"ನಾನು ನಡೆದಾಡಲಾರೆ. ಅಯ್ಯೋ, ಬಡಪಾಯಿಯೆ, ಇಲ್ಲ, ನಾನು ನಡೆಯಲಾರೆನಪ್ಪ."

ಹೆಕ್ಟರ್ ಮನೆಗೆ ಬಂದಾಗ, ಅವನ ಪತ್ನಿ ಆತಂಕದಿಂದ ಕೇಳುತ್ತಿದ್ದಳು: "ಮದಾಂ ಸೈಮನ್ ಹೇಗಿದ್ದಾಳೆ?"

"ಅದೇ ಪರಿಸ್ಥಿತಿ, ಕಿಂಚಿತ್ತೂ ಬದಲಾವಣೆ ಇಲ್ಲ" ಎಂದ, ಹೆಕ್ಟರ್ ನಿರುತ್ಸಾಹದ ದನಿಯಲ್ಲಿ ಹಿಂದೆಂದಿಗಿಂತಲೂ ಹೆಚ್ಚು ನಿರುತ್ಸಾಹದ ದನಿಯಲ್ಲಿ.

ಅವರು ಮನೆಕೆಲಸದಾಕೆಯನ್ನು ವಜಾ ಮಾಡಿದರು. ಮನೆಯ ಕರ್ಚು-ವೆಚ್ಚಗಳನ್ನು ಮಿತಗೊಳಿಸಿದರು. ಕಛೇರಿಯ ಮುಖ್ಯಸ್ಥರಿಂದ ಪಡೆದ ಹಣ ಖರ್ಚಾಗಿ

ಹೋಗಿತ್ತು. ಹೆಕ್ಟರ್ ಹತಾಶನಾದ. ಒಂದು ದಿನ ಆತ ನಾಲ್ವರು ವೈದ್ಯರನ್ನು ಕರೆದು, ಅವರೊಂದಿಗೆ ಸಮಾಲೋಚನೆ ನಡೆಸಿದ. ಅವರು ಅಕೆಯನ್ನು ಅಮೂಲಾಗ್ರವಾಗಿ ಪರೀಕ್ಷಿಸಿದರು. ಆಕೆಯಾದರೋ ಕುಹಕ ದೃಷ್ಟಿಯಿಂದ ಎಲ್ಲವನ್ನೂ ಗಮನಿಸುತ್ತಿದ್ದಳು.

"ಆಕೆಯನ್ನು ನಡೆಯುವಂತೆ ಮಾಡಬೇಕು" ಎಂದ ಓರ್ವ ವೈದ್ಯ.

"ನಾನು ನಡೆಯಲಾರೆ, ಮಾನ್ಯರೆ, ನಾನು ನಡೆಯಲಾರೆ."

ಆಕೆಯನ್ನು ಹಿಡಿದೆತ್ತಿ, ಕೆಲವು ಹೆಜ್ಜೆ ಎಳೆದುಕೊಂಡು ಹೋದರು. ಆದರೆ, ಆಕೆ ಬಿಡಿಸಿಕೊಂಡು, ನೆಲಕ್ಕುರುಳಿ, ಎಷ್ಟು ಮರ್ಮಭೇದಕವಾಗಿ ಚೀತ್ಕರಿಸಿದಳೆಂದರೆ, ಆಕೆಯನ್ನು ಬಹು ಮೆಲ್ಲನೆ ಮೇಲೆತ್ತಿ, ಕುರ್ಚಿಯ ಮೇಲೆ ಕುಳ್ಳಿರಿಸಬೇಕಾಯಿತು.

ವೈದ್ಯರು ತಮ್ಮ ಅಭಿಪ್ರಾಯವನ್ನು ಕಾದಿರಿಸಿದರಾದರೂ, ಆಕೆ ಕೆಲಸ ಮಾಡಲು ಅಸಮರ್ಥಳೆಂದು ತೀರ್ಮಾನಿಸಿದರು.

ಹೆಕ್ಟರ್ ಈ ಸುದ್ದಿಯನ್ನು ತನ್ನ ಪತ್ನಿಗೆ ತಿಳಿಸಿದಾಗ, ಆಕೆ ಕುಸಿದು ಬಿದ್ದಳು.

"ಅವಳನ್ನು ಇಲ್ಲಿಗೇ ಕರೆತರುವುದೇ ಮೇಲು; ಅದರಿಂದ ವೆಚ್ಚವಾದರೂ ಕಡಿಮೆಯಾಗುತ್ತದೆ."

"ನಮ್ಮ ಸ್ವಂತ ಮನೆಗೆ! ಏನು ಹೇಳುತ್ತಿದ್ದೀಯೆ?"

"ಪ್ರಿಯಸೆ, ನಾವು ಮತ್ತೇನನ್ನು ತಾನೆ ಮಾಡಲು ಸಾಧ್ಯ? ತಪ್ಪು ನನ್ನದಂತೂ ಅಲ್ಲ."

* * *

# ಒಂದು ಅಪಘಾತ

ಮೂಲ : ಫ್ರಾಂಕೊಯಿಸ್ ಕೊಪೆ          ಕನ್ನಡಕ್ಕೆ : ಎ. ಶ್ರೀನಿವಾಸ

ಸಂತ ಮೆಡಾರ್ಡ್‌ನ ಚರ್ಚ್. ಪಾಪ ನಿವೇದನೆ ಮಾಡಿಕೊಳ್ಳಲು ಒಬ್ಬ ಮನುಷ್ಯ ಅಲ್ಲಿಗೆ ಬಂದಿದ್ದಾನೆ. ಆ ಇಗರ್ಜಿಯ ಮಟ್ಟಿಗೆ ಹೇಳುವುದಾದರೆ, ಅದೊಂದು ಅಪೂರ್ವ ಘಟನೆಯೇ. ಚರ್ಚಿನ ಚೂಪಾದ ಕಮಾನಿನ ಕೆಳಗೆ ತೂಗುತ್ತಿದ್ದ ದೀಪದ ಕೆಂಪು ಬೆಳಕಿನಲ್ಲಿ ನಡುವಂಗಿ ತೊಟ್ಟು, ಮೊಳೆಹೊಡೆದ ಬೂಟುಗಳನ್ನು ಧರಿಸಿದ ಕಾರ್ಮಿಕನೊಬ್ಬ ಅಡ್ಡ ಬೀಳುತ್ತಿದ್ದಾನೆ. ಪಾದ್ರಿ ಅಬ್ಬೆ ಫೇಬರ್ ಆತ ಯಾವನೋ ಹಳೆಯ ಕಾಲದ ನಂಬಿಕೆ, ಧಾರ್ಮಿಕ ಶ್ರದ್ಧೆಗಳನ್ನು ಉಳಿಸಿಕೊಂಡು ಬಂದಿದ್ದ ಗ್ರಾಮೀಣ ಕಾರ್ಮಿಕನಿರಬಹುದೆಂದು ಎಣಿಸಿದ್ದರು.

ತಾವು ಕೇಳಲಿದ್ದ ಪಾಪನಿವೇದನೆಯಲ್ಲಿ ಅಂತಹ ವಿಶೇಷವೇನೂ ಇರಲಿಕ್ಕಿಲ್ಲವೆಂದೇ ಊಹಿಸಿದ ಪಾದ್ರಿ ಧಾರಾಳವಾಗಿ ನಶ್ಯವನ್ನು ಹಾಕಿಕೊಂಡು, ನಿಧಾನವಾಗಿ, ಶಾಂತಚಿತ್ತರಾಗಿ ಪಾಪನಿವೇದನೆಯ ಸ್ಥಳಕ್ಕೆ ಬಂದು, ಬನಾತು ಬಟ್ಟೆಯ ಪರದೆಯನ್ನು ಸರಿಸಿದರು. ಪಾದ್ರಿ ಕುಳಿತರು.

'ವೈದ್ಯ ಮಹಾಶಯರೆ' ಮೆಲ್ಲನೆ ಮಾತಾಡಲೆತ್ನಿಸಿದ ದನಿಯೊಂದು ತೊದಲಿತು.

'ಗೆಳೆಯ ನಾನು ವೈದ್ಯನಲ್ಲ ................ ನನ್ನನ್ನು 'ನನ್ನ ತಂದೆಯೇ' ಎಂದು ಕರೆದರೆ ಸಾಕು.'

ಕತ್ತಲೆಯಲ್ಲಿ ಪಾದ್ರಿಗೆ ಆ ವ್ಯಕ್ತಿಯ ಮುಖ ಸರಿಯಾಗಿ ಕಾಣಿಸಲಿಲ್ಲ. ಆತ ಮರೆತುಹೋಗಿದ್ದ ಪ್ರಾರ್ಥನೆಯ ನುಡಿಗಳನ್ನು ನೆನಪು ಮಾಡಿಕೊಳ್ಳುತ್ತ ತನಗೆ ತಾನೇ ಹೇಳಿಕೊಳ್ಳುವವನಂತೆ ಜಪಿಸಿದ. ನಂತರ, ಆತ ನೀರಸವಾಗಿ ಮುಂದುವರಿಸಿದ :

"ವೈದ್ಯ ಮಹಾಶಯರೆ, ಅಲ್ಲ, ನನ್ನ ತಂದೆಯೇ, ನಾನು ಮಾತನಾಡುವ ರೀತಿ ಸರಿಯಿಲ್ಲದಿದ್ದರೆ ಕ್ಷಮಿಸಿ. ನಾನು ನನ್ನ ಹಳ್ಳಿಯನ್ನು ಬಿಟ್ಟು ಪಟ್ಟಣವನ್ನು

ಸೇರಿದನಂತರ, ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಪಾಪನಿವೇದನೆ ಮಾಡಿಕೊಂಡದ್ದೇ ಇಲ್ಲ. ಈ ಪ್ಯಾರಿಸ್ ನಗರದ ಜೀವನ ತಮಗೆ ತಿಳಿದೇ ಇದೆಯಲ್ಲ. ಆದರೂ ನಾನು ಇತರರಿಗಿಂತ ಕೆಟ್ಟವನೇನೂ ಆಗಿರಲಿಲ್ಲ. 'ದೇವರು ದಯೆ ತೋರಿಸುತ್ತಾನೆ' ಎಂದುಕೊಳ್ಳುತ್ತಲೇ ನಾನು ಬದುಕನ್ನು ಸಾಗಿಸಿದೆ. ಆದರೆ, ಇಂದು ......... ಇಂದು ನನ್ನ ಮನಸ್ಸು ತುಂಬ ಹಗುರವಾಗಿದೆ. ನಾನೊಬ್ಬನೇ ಹೊರಲಾರದಷ್ಟು ಭಾರವಾಗಿದೆ. ಗುರುಗಳೇ, ಕೇಳಿ ನಾನು ಒಬ್ಬ ಮನುಷ್ಯನನ್ನು ಕೊಲೆ ಮಾಡಿದ್ದೇನೆ.'

ಪಾದ್ರಿ ಕುಳಿತಲ್ಲಿಯೇ ನಡುಗಿದರು. ಕೊಲೆಗಾರ! ಇದಕ್ಕೆ ಹೋಲಿಸಿದರೆ, ತಾವು ಇದುವರೆಗೆ ಧಾರಳವಾಗಿ ಕ್ಷಮಿಸಿದ್ದ ಅಪರಾಧಗಳು ತೀರ ಸಣ್ಣವು, ಕ್ಷುಲ್ಲಕವಾದವು. ಪ್ರಾರ್ಥನೆಯ ವೇಳೆಯಲ್ಲಿ ಅನ್ಯಮನಸ್ಕತೆ, ಮಹಿಳೆಯರ ಪರಸ್ಪರ ನಿಂದಾರೋಪಣೆ, ಚಾಡಿಕೋರತನ ಇವೇ ಮುಂತಾದವು – ಇಂತಹ ಸಣ್ಣ ಪುಟ್ಟ ಅಪರಾಧಗಳ ಬಗ್ಗೆ ಕಿವಿಗೊಟ್ಟು ಕೇಳದೆಯೇ ಧೈರ್ಯವಾಗಿ ಕ್ಷಮಿಸಿಬಿಡುತ್ತಿದ್ದ ಪಾದ್ರಿಗೆ ಇಂದು ಎಂತಹ ಅಘಾತ!

ಅಬ್ಬಾ! ಇಂದು ಓರ್ವ ಕಲೆಗಡುಕ ಬಂದಿದ್ದಾನೆ! ತನ್ನ ಎದುರಿಗೇ ನಿಂತಿದ್ದಾನೆ! ಇಷ್ಟು ಸಮೀಪ, ತನ್ನ ಬಳಿಯೇ ಬಾಗಿರುವ ಈ ತಲೆಯಲ್ಲಿ ಕೊಲೆಯಂತಹ ಮಹಾಪಾತಕದ ಯೋಜನೆ ಹುಟ್ಟಿ, ಕಾರ್ಯರೂಪಕ್ಕಿಳಿಯಿತೇ? ಕಟ್ಟೆಯ ಮೇಲೆ ಇಟ್ಟಿರುವ ಈ ಕೈಗಳೇ ಕೊಲೆ ಮಾಡಿದುವೇ? ಅವುಗಳಿಗೆ ರಕ್ತ ಇನ್ನೂ ಅಂಟಿಕೊಂಡಿರಬಹುದು! ಪಾದ್ರಿಯ ಮನಸ್ಸು ತಳಮಳಗೊಂಡು, ಆತನಿಗೆ ಸ್ವಲ್ಪ ಭಯವೇ ಆಯಿತು. ಆತ ಯಾಂತ್ರಿಕವಾಗಿ

"ಮಗನೆ, ನಿವೇದನೆ ಮಾಡಿಕೊ ಪರಮಾತ್ಮನ ದಯೆ ಅನಂತವಾದುದು" ಎಂದರು.

"ಹಾಗಾದರೆ, ನನ್ನ ಪೂರಾ ಕಥೆಯನ್ನು ಕೇಳಿ" ಎಂದಿತು ಆ ವ್ಯಕ್ತಿ ಯಾತನೆಯಿಂದ ಕಂಪಿಸುತ್ತಿದ್ದ ಧ್ವನಿಯಲ್ಲಿ.

"ನಾನೊಬ್ಬ ಗಾರೆ ಕೆಲಸದವ. ಇಪ್ಪತ್ತೈದು ವರ್ಷಗಳ ಹಿಂದೆ, ನಾನು ಪ್ಯಾರಿಸ್ ನಗರಕ್ಕೆ ಬಂದೆ, ನನ್ನ ಬಾಲ್ಯಸ್ನೇಹಿತನೊಂದಿಗೆ. ಬಾಲ್ಯದಲ್ಲಿ ನಾವು ಹಕ್ಕಿಗಳ ಗೂಡುಗಳನ್ನು ಧ್ವಂಸ ಮಾಡುತ್ತಿದ್ದೆವು. ಶಾಲೆಯುಲ್ಲಿ ಒಟ್ಟಿಗೆ ಓದಲು ಕಲಿತೆವು. ಆತ ನನ್ನ ಸಹೋದರನಂತಿದ್ದ. ಆತನ ಹೆಸರು ಫಿಲಿಪ್. ನನ್ನ ಹೆಸರು ಜಾಪ್ಸ್. ಆತ ಚೆನ್ನಾಗಿ ಬಳೆದಿದ್ದ; ಅಂಗ ಸೌಷ್ಟವದಿಂದ ಕೂಡಿದ ಸುಂದರಾಂಗ. ನಾನದರೋ ದಪ್ಪನೆಯ, ಒರಟು ಆಕೃತಿಯ ಮನುಷ್ಯ.

ಆತ ತುಂಬ ಒಳ್ಳೆಯ ಕೆಲಸಗಾರ. ನಾನದರೋ ಅಡ್ಡಾದಿಡ್ಡಿ ಕೆಲಸ ಮಾಡುವವನು. ಆತ ಒಳ್ಳೆಯವ, ಧೈರ್ಯಶಾಲಿ, ಆತನದು ತೆರೆದ ಮನಸ್ಸು, ತೆರೆದ ಹಸ್ತ. ಆತನ ಸ್ನೇಹಿತನೆನಿಸಿಕೊಳ್ಳಲು ನನಗೆ ಹೆಮ್ಮೆ. ಆತನ ಜೊತೆಯಲ್ಲಿ ಓಡಾಡಲು ನನಗೆ ತುಂಬ ಸಂತೋಷ. ಆತ ನನ್ನ ಬೆನ್ನ ಮೇಲೆ ಹೊಡೆದು 'ನೀನೊಬ್ಬ ಹೆಡ್ಡ'

ಎಂದಾಗ ನನಗೆ ಹೆಮ್ಮೆ ಅನಿಸುತ್ತಿತ್ತು. ನಾನು ಆತನನ್ನು ಮೆಚ್ಚಿದ್ದೆ. ಎಂತಲೇ, ನಾನು ಆತನನ್ನು ಪ್ರೀತಿಸುತ್ತಿದ್ದೆ.

ಇಲ್ಲಿಗೆ ಬಂದಮೇಲೆ ಏನು ಅದೃಷ್ಟ! ನಾವಿಬ್ಬರೂ ಒಬ್ಬನೇ ಯಜಮಾನನ ಬಳಿ ಕೆಲಸಕ್ಕೆ ಸೇರಿದೆವು. ಕೆಲಸ ಮುಗಿದ ಕೂಡಲೆ, ಆತ ತನ್ನ ಸ್ನೇಹಿತರೊಡನೆ ಹೊರಟು ಹೋಗುತ್ತಿದ್ದ, ಮನರಂಜನೆಗಾಗಿ. ಮುಕ್ಕಾಲು ಪಾಲು ಸಮಯ ಆತ ನನ್ನೊಬ್ಬನನ್ನೇ ಬಿಟ್ಟು ಹೋಗಿಬಿಡುತ್ತಿದ್ದ. ಆ ವಯಸ್ಸಿನಲ್ಲಿ ಅದೆಲ್ಲ ಸಹಜವೇ, ಸ್ವಾಭಾವಿಕವೇ. ಆತನಿಗೆ ಮೋಜು ಮಾಡುವ ಆಸೆ. ಮೇಲಾಗಿ, ಆತ ಸ್ವತಂತ್ರನಾಗಿದ್ದ. ಆತನಿಗೆ ಯಾವ ಜವಾಬ್ದಾರಿಯೂ ಇರಲಿಲ್ಲ. ನನಗೆ ಆತನಂತೆ ಇರುವುದು ಸಾಧ್ಯವಿರಲಿಲ್ಲ. ನಾನು ನಮ್ಮ ಹಳ್ಳಿಯಲ್ಲಿದ್ದ ನನ್ನ ರೋಗಗ್ರಸ್ತ ವೃದ್ಧಮಾತೆಯನ್ನು ಸಲಹಬೇಕಾಗಿತ್ತು. ಆಕೆಗೆ ಕಳುಹಿಸಲು ಹಣವನ್ನು ಉಳಿಸಬೇಕಾಗಿತ್ತು.

"ಆ ಕಾಲದಲ್ಲಿ ನಾನು ಹಣ್ಣು ಮಾರುವವಳೊಬ್ಬಳ ಮನೆಯಲ್ಲಿ ಊಟ ಮಾಡುತ್ತಿದ್ದೆ. ಆಕೆ ಗಾರೆ ಕೆಲಸದವರಿಗಾಗಿ ಅಡುಗೆ ಮಾಡಿ ಹಾಕುತ್ತಿದ್ದಳು. ಆಕೆಯ ಮನೆಯಲ್ಲಿಯೇ ನನ್ನ ಬಿಡಾರ. ನನ್ನ ಊಟ-ವಸತಿ ವ್ಯವಸ್ಥೆಯಿಂದ ಆಕೆಗೆ ಒಂದಿಷ್ಟು ಹಣ ಸಂಪಾದನೆಯಾಗುತ್ತಿತ್ತು. ನನಗೆ ಅದೊಂದು ಸಮಾಧಾನ. ನಿಜ ಸಂಗತಿಯನ್ನು ಹೇಳಬೇಕೆಂದರೆ, ನಾನು ಆಕೆಯ ಮಗಳು ಕ್ಯಾಥರೀನ್‌ಳನ್ನು ಕಂಡದಿನದಿಂದಲೂ ಪ್ರೀತಿಸುತ್ತಿದ್ದೆ. ಅಯ್ಯೋ, ಬಡ ಕ್ಯಾಥರೀನ್! ಈ ಪ್ರಣಯ ವ್ಯವಹಾರ ಹೇಗೆ ಕೊನೆಕೊನೆಗೊಂಡಿತು ಎಂಬುದು ಇನ್ನು ಸ್ವಲ್ಪ ಹೊತ್ತಿನಲ್ಲಿ ತಮಗೆ ತಿಳಿಯುತ್ತದೆ.

"ನಾನು ಮೂರು ವರ್ಷಗಳ ಕಾಲ ಕ್ಯಾಥರೀನ್‌ಳ ಮನೆಯಲ್ಲಿಯೇ ವಾಸವಾಗಿದ್ದರೂ ಆಕೆಯನ್ನು ನಾನು ಪ್ರೀತಿಸುತ್ತಿದ್ದೇನೆಂದು ತಿಳಿಸಲು ನನಗೆ ಸಾಧ್ಯವೇ ಆಗಲಿಲ್ಲ. ನಾನಾಗಲೇ ಹೇಳಿದಂತೆ, ನಾನೊಬ್ಬ ಸಾಮಾನ್ಯ, ಮಧ್ಯಮ ಮಟ್ಟದ ಕೆಲಸಗಾರ. ನನಗೆ ಬರುತ್ತಿದ್ದ ಕೂಲಿಯಲ್ಲಿ ನನ್ನ ತಾಯಿಗೆ ಹಣ ಕಳುಹಿಸಿದ ನಂತರ, ನನ್ನ ಬಳಿ ಉಳಿಯುತ್ತಿದ್ದ ಹಣ ನನ್ನೊಬ್ಬನಿಗೆ ಸಾಕಾಗುತ್ತಿರಲಿಲ್ಲ. ಇನ್ನು ನಾನು ಮದುವೆಯಾಗಿ ಮನೆ ಮಾಡುವುದೆಲ್ಲಿಂದ ಬಂತು?

"ಕಡೆಗೊಂದು ದಿನ ನನ್ನ ತಾಯಿ ಸ್ವಾಮಿಯ ಪಾದ ಸೇರಿದಳು. ನನಗೆ ಮುಜುಗರ ಕಡಿಮೆಯಾಯಿತು. ನಾನು ಹಣವನ್ನು ಉಳಿಸಲಾರಂಭಿಸಿದೆ. ನನ್ನ ಬಳಿ ಒಂದಿಷ್ಟು ಹಣ ಸೇರಿ, ನನಗೆ ಸಂಸಾರ ಹೂಡುವುದು ಸಾಧ್ಯವೆಂದು ಮನವರಿಕೆಯಾದಾಗ, ನಾನು ನನ್ನ ಮನಸ್ಸಿನ ಭಾವನೆಗಳನ್ನು ಕ್ಯಾಥರೀನ್‌ಳಿಗೆ ತಿಳಿಸಿದೆ.......

"ಮೊದಲು ಆಕೆ ಏನನ್ನೂ ಹೇಳಲಿಲ್ಲ. ನಾನು ನನ್ನ ಮನಸ್ಸನ್ನು ಬಿಚ್ಚಿಟ್ಟೊಡನೆಯೇ, ಆಕೆ ನನ್ನ ಕೊರಳಿಗೆ ಜೋತು ಬೀಳುವವಳಲ್ಲವೆಂದು ನನಗೆ ತಿಳಿದಿತ್ತು. ನನ್ನ ಮಾತುಕತೆ, ಪ್ರಣಯ ಸಲ್ಲಾಪ ಅಷ್ಟೇನು ಆಕರ್ಷಕವಾಗಿಯೂ ಇರಲಿಲ್ಲ. ಆದಾಗ್ಯೂ ಕ್ಯಾಥರೀನ್ ತನ್ನ ತಾಯಿಯನ್ನು ಕೇಳಿದಳು. ಆಕೆ ನಾನು ಸತತವಾಗಿ ಬಿಡದೇ ಕೆಲಸ ಮಾಡುವವನೆಂದೂ, ಒಳ್ಳೆಯ ಮನುಷ್ಯನೆಂದೂ ತಿಳಿಸಿದಳು. ನಮ್ಮ ಮದುವೆ

ನಿಶ್ಚಯವಾಯಿತು.......

"ಆಹಾ! ಕೆಲವು ವಾರಗಳು ಸುಖವಾಗಿ ಕಳೆದೆವು. ಆಕೆ ನನ್ನತ್ತ ಆಕರ್ಷಿತಳಾಗಿದ್ದದರಿಂದ ಆಕೆ ನಮ್ಮ ವಿವಾಹಕ್ಕೆ ಒಪ್ಪಿದ್ದಳೆಂದೇನೂ ಅಲ್ಲ. ಆದರೆ, ಆಕೆ ಒಳ್ಳೆಯ ಹೃದಯದವಳಾಗಿದ್ದುದರಿಂದ, ಒಂದಲ್ಲ ಒಂದು ದಿನ ಆಕೆ ನನ್ನನ್ನು ಪ್ರೀತಿಸುವಂತೆ ಮಾಡಬಹುದೆಂಬ ಆಶೆಯನ್ನಿಟ್ಟುಕೊಂಡಿದ್ದೆ.

ಸಹಜವಾಗಿಯೇ ನಾನು ಫಿಲಿಪ್‌ನಿಗೆ ಎಲ್ಲವನ್ನೂ ತಿಳಿಸಿದೆ. ಆತ ದಿನವೂ ನನಗೆ ಅಂಗಡಿಯಲ್ಲಿ ಸಿಕ್ಕುತ್ತಿದ್ದ. ನನ್ನ ಮತ್ತು ಕ್ಯಾಥರೀನಳ ಮದುವೆ ನಿಶ್ಚಯವಾದ ಮೇಲೆ, ಆತ ನನ್ನ ಭಾವೀಪತ್ನಿಯ ಪರಿಚಯಮಾಡಿಕೊಳ್ಳಲೆಂದು ಬಯಸಿದ......

"ಗುರುಗಳೇ, ಮುಂದೇನಾಯಿತೆಂಬುದನ್ನು ನೀವಾಗಲೇ ಊಹಿಸಿಕೊಂಡಿರಬಹುದು. ಫಿಲಿಪ್ ಸ್ಫುರದ್ರೂಪಿ, ಉಲ್ಲಾಸದ ಪ್ರವೃತ್ತಿಯ, ಎಲ್ಲರಿಗೂ ಪ್ರಿಯನಾಗಬಲ್ಲ ವ್ಯಕ್ತಿ. ತಾನೇ ಉದ್ದೇಶಪೂರ್ವಕವಾಗಿ ಯಾವ ಪ್ರಯತ್ನವನ್ನೂ ಮಾಡದೆಯೇ ಆತ ಕ್ಯಾಥರೀನಳನ್ನು ಮರುಳು ಮಾಡಿಬಿಟ್ಟ; ಆಕೆಯ ಹೃದಯವನ್ನು ಗೆದ್ದುಬಿಟ್ಟ. ಆದರೆ, ಕ್ಯಾಥರೀನ್ ಪ್ರಮಾಣಿಕ ಹೆಣ್ಣು – ಯಾವುದನ್ನೂ ಮುಚ್ಚಿಡುವವಳಲ್ಲ. ಆಕೆ ತನ್ನ ಮನಸ್ಸಿನ ಭಾವನೆಗಳನ್ನೆಲ್ಲ ಕೂಡಲೆ ನನಗೆ ತಿಳಿಸಿದಳು.......

"ಆದರೆ, ಅದೇನೇ ಇರಲಿ, ನಾನು ಆ ಕ್ಷಣವನ್ನು ಮಾತ್ರ ಎಂದಿಗೂ ಮರೆಯಲಾರೆ. ಅಂದು ಕ್ಯಾಥರೀನಳ ಹುಟ್ಟಿದ ಹಬ್ಬ. ಆಕೆಯ ಸಂತೋಷಾರ್ಥವಾಗಿ, ನಾನು ಚಿನ್ನದ ಶಿಲುಬೆಯೊಂದನ್ನು ಖರೀದಿಸಿ, ಎಕ್ಕಿದ ಹತಿಯಲ್ಲಿ ಸುತ್ತಿ ಪುಟ್ಟ ಪೆಟ್ಟಿಗೆಯೊಂದರಲ್ಲಿ ಇಟ್ಟುಕೊಂಡು ಬಂದೆ. ಹಿಂದಿನ ಅಂಗಡಿಯಲ್ಲಿ ನಾವಿಬ್ಬರೇ ಇದ್ದೆವು. ಆಗ ತಾನೆ ಕ್ಯಾಥರೀನ್ ನನಗೆ ಕುಡಿಯಲು ಎಸರನ್ನು ತಂದು ಕೊಟ್ಟದ್ದಳು. ಆಗ ನಾನು ಜೇಬಿನಿಂದ ಒಡವೆ ಪೆಟ್ಟಿಗೆಯನ್ನು ಹೊರತೆಗೆದು, ಅದರಲ್ಲಿದ್ದ ಒಡವೆಯನ್ನು ಆಕೆಗೆ ತೋರಿಸಿದೆ. ಆಕೆ ಅಳಲಾರಂಭಿಸಿದಳು.

"ಜಾಕ್ಸ್, ನನ್ನನ್ನು ಕ್ಷಮಿಸಿ. ಆ ಒಡವೆಯನ್ನು ನಿಮ್ಮ ಕೈಹಿಡಿಯುವ ಹುಡುಗಿಗೆ ಕೊಡಿ. ನಾನು ಎಂದಿಗೂ ನಿಮ್ಮ ಪತ್ನಿಯಾಗಲಾರೆ. ನಾನು ಬೇರೊಬ್ಬನನ್ನು ಪ್ರೀತಿಸುತ್ತಿದ್ದೇನೆ.... ನಾನು ಫಿಲಿಪ್‌ನನ್ನು ಪ್ರೀತಿಸುತ್ತಿದ್ದೇನೆ" ಎಂದಳು.

"ಗುರುಗಳೇ, ನನಗೆ ಸಿಟ್ಟು ಬಂತು, ತುಂಬ ಸಿಟ್ಟೇ ಬಂತು. ಆದರೇನು ಮಾಡಲಿ? ನಾನು ಅವರಿಬ್ಬರನ್ನೂ ಪ್ರೀತಿಸುತ್ತಿದ್ದೆ. ಅವರಿಬ್ಬರೂ ಮದುವೆಯಾಗುವುದೇ ಹಿತ, ವಿಹಿತ ಎಂದು ನನಗೆ ತೋರಿತು. ಅವರಿಬ್ಬರೂ ಮದುವೆಯಾಗುವುದರಿಂದ, ಅವರಿಬ್ಬರಿಗೂ ಸುಖ ದೊರಕುವುದೆಂದು ನಾನು ಭಾವಿಸಿದೆ. ಫಿಲಿಪ್ ಮೋಜಿನ ಮನುಷ್ಯನಾಗಿದ್ದುದರಿಂದ ಆತನ ಬಳಿ ಹಣವಿರಲಿಲ್ಲ. ಪೀಠೋಪಕರಣಗಳ ಖರೀದಿಗಾಗಿ ನಾನೇ ನನ್ನ ಬಳಿಯಿದ್ದ ಹಣವನ್ನು ಸಾಲವಾಗಿ ಕೊಟ್ಟೆ, ಫಿಲಿಪ್‌ನಿಗೆ. "ನಂತರ, ಅವರ ಮದುವೆಯಾಯಿತು. ಪ್ರಾರಂಭದಲ್ಲಿ ಎಲ್ಲವೂ ಚೆನ್ನಾಗಿಯೇ ನಡೆಯಿತು. ಅವರಿಗೆ ಒಂದು

ಗಂಡು ಮಗುವೂ ಹುಟ್ಟಿತು. ಕೊನೆಗೆ ನಾನೇ ದೇವಪಿತೃವಾದೆ. ಆ ಮಗುವಿಗೆ ಕ್ಯಾಮಿಲೆ ಎಂದು ನನ್ನ ತಾಯಿಯ ಹೆಸರನ್ನೇ ಇಟ್ಟದ್ದೂ ಆಯಿತು.

ಮಗು ಹುಟ್ಟಿದ ಸ್ವಲ್ಪ ಸಮಯದಲ್ಲಿಯೇ ಫಿಲಿಪ್‌ನ ನಡತೆ ಕೆಡಲಾರಂಭಿಸಿತು. ನಾನು ಎಣಿಸಿದ್ದು ತಪ್ಪಾಗಿತ್ತು. ಫಿಲಿಪ್ ಕೇವಲ ಮೋಜಿನ ಸರದಾರ. ಆತ ಸಂಸಾರಿಯಲ್ಲ. ಆತನಿಗೆ ಬೇಕಾಗಿದ್ದುದು ಮೋಜು, ಮಜಾ. ಮಜಾ ಹುಡುಕಿಕೊಂಡು ಅಲೆಯುತ್ತಿದ್ದ, ಆತ.

ಗುರುಗಳೆ, ಬಡವರಿರುವ ಪ್ರದೇಶದಲ್ಲಿ ವಾಸಿಸುವ ತಮಗೆ ಇಂತಹ ಕಥೆ ಕಂಠಪಾಠವಾಗಿರಬೇಕು. ಸೋಮಾರಿಯಾಗಿ, ಕುಡಿತದ ದುಶ್ಚಟಕ್ಕೆ ಬಲಿಯಾಗಿ, ವಾರದಲ್ಲಿ ಎರಡು-ಮೂರುದಿನ ಕೆಲಸಕ್ಕೆ ಹೋಗದೆ, ವಾರದ ಕೂಲಿಯನ್ನು ಮನೆಗೆ ಕೊಡದೆ, ಬರಿಗೈಯಾಗಿ ಮನೆಗೆ ಬಂದು, ಕೂಗಾಡಿ, ಜಗಳವಾಡಿ, ಹೆಂಡತಿಯನ್ನು ಹೊಡೆಯುವ ಬಡಕಾರ್ಮಿಕನ ಕಥೆ ಚಿರಪರಿಚಿತವೇ.

"ಎರಡು ವರ್ಷ ಕಳೆಯುವದರೊಳಗಾಗಿ ಫಿಲಿಪ್ ಅಂತಹ ಬಡ, ಕುಡುಕ ಕಾರ್ಮಿಕನಾಗಿಬಿಟ್ಟ. ನಾನು ಆತನಿಗೆ ಬುದ್ಧಿ ಹೇಳಿದೆ. ಮೊದಮೊದಲು ಆತ ತನ್ನ ದುರ್ವರ್ತನೆಗಾಗಿ ನಾಚಿಕೆಪಟ್ಟು ತಿದ್ದಿಕೊಳ್ಳಲು ಪ್ರಯತ್ನಿಸಿದ. ಆದರೆ, ಇಂತಹ ಪ್ರಯತ್ನಗಳು ಯಶಸ್ವಿಯಾಗಲಿಲ್ಲ. ಮುಂದೆ, ನಾನು ಸ್ನೇಹಭಾವದಿಂದ ನೀಡುತ್ತಿದ್ದ ಬುದ್ಧಿವಾದ ಆತನನ್ನು ಕೆರಳಿಸುತ್ತಿತ್ತು. ಒಂದು ದಿನ ನಾನು ಆತನ ಮನೆಗೆ ಹೋಗಿದ್ದೆ. ಗಿರವಿ ಸಾಲವನ್ನು ಮನೆಯ ಒಂದು ಕೋಣೆಯನ್ನು ಕೆಡಪಿಸಿದ್ದ. ಕ್ಯಾಥರೀನ್ ಕೃಶಕಾಯಳಾಗಿ, ದುಃಖದಿಂದ ಬಾಡಿ ಬಸವಳಿದು ಹೋಗಿದ್ದಳು. ನಾನು ಇದನ್ನೆಲ್ಲ ನೋಡುತ್ತಿದ್ದಾಗ, ಫಿಲಿಪ್ ಕೆರಳಿ ಕೆಂಡವಾದ.

"ಮತ್ತೊಂದು ದಿನ ಆತ ನನ್ನ ಶೀಲವನ್ನೇ ಶಂಕಿಸುವಷ್ಟು ದೂರಹೋಗಿಬಿಟ್ಟ. ಆತ ತನ್ನ ಹೆಂಡತಿಯ ವಿಷಯವಾಗಿ ನನ್ನೊಡನೆ ದೊಡ್ಡ ಜಗಳವನ್ನೇ ತೆಗೆದು, ನೀನು ನಮ್ಮ ಮದುವೆಗೆ ಮುಂಚೆ ಕ್ಯಾಥರೀನಳನ್ನು ಪ್ರೀತಿಸುತ್ತಿದ್ದೆ. ನೀನು ಈಗಲೂ ಅವಳನ್ನು ಪ್ರೀತಿಸುತ್ತಿದ್ದೀಯ ಎಂದು ಬಿಟ್ಟ!

"ಅಯ್ಯೋ! ಅಂದು ನಾವಿಬ್ಬರೂ ಕೈಕೈ ಮಿಲಾಯಿಸಿ ಹೊಡೆದಾಟಕ್ಕೆ ಇಳಿಯದಿದ್ದುದೇ ಪುಣ್ಯ. ಅಂದಿನಿಂದ ನಾನು ಆತನ ಮನೆಗೆ ಹೋಗುವುದನ್ನು ನಿಲ್ಲಿಸಿದೆ. ಕ್ಯಾಥರೀನಳನ್ನೂ, ಆಕೆಯ ಮಗ ಕ್ಯಾಮಿಲೆಯನ್ನೂ ನೋಡುವುದನ್ನೂ ಬಿಟ್ಟೆ. ಯಾವಾಗಲಾದರೊಮ್ಮೆ ಅಂಗಡಿಗೆ ಕೆಲಸಕ್ಕೆ ಬಂದಾಗ ಫಿಲಿಪ್ ಕಣ್ಣಿಗೆ ಬೀಳುತ್ತಿದ್ದ.

"ಆದರೆ, ಗುರುಗಳೇ, ನನಗೆ ಕ್ಯಾಥರೀನ್ ಮತ್ತು ಅವಳ ಮಗ ಕ್ಯಾಮಿಲೆ ಬಗ್ಗೆ ತುಂಬ ವಾತ್ಸಲ್ಯವಿದ್ದುದರಿಂದ, ಅವರನ್ನು ಸಂಪೂರ್ಣವಾಗಿ ಮರೆಯುವುದು ನನ್ನಿಂದಾಗಲಿಲ್ಲ. ಶನಿವಾರ ಮದ್ಯಾಹ್ನ ಕೂಲಿ ಹಣ ಕೈಗೆ ಬಂದೊಡನೆಯೇ, ಫಿಲಿಪ್, ತನ್ನ ಗೆಳೆಯರೊಂದಿಗೆ, ಕೂಲಿ ಹಣವನ್ನೆಲ್ಲ ಕುಡಿದು ಬರುತ್ತಿದ್ದನಷ್ಟೆ. ಅಂತಹ ಸಮಯ

ನೋಡಿಕೊಂಡು, ನಾನು ಆತನ ಮನೆಯಿದ್ದ ಪ್ರದೇಶದಲ್ಲಿ ಸುತ್ತಾಡಿ ಬುರತ್ತಿದ್ದೆ. ಆತನ ಮಗನನ್ನು ಕಂಡು ಮಾತನಾಡಿಸಿ, ಕಷ್ಟ-ಸುಖ ವಿಚಾರಿಸುತ್ತಿದ್ದೆ. ಅವರ ಮನೆಯ ಪರಿಸ್ಥಿತಿ ತುಂಬ ಕೆಟ್ಟಿದೆಯೆಂದು ತಿಳಿದಾಗ ನಾನು ಹುಡುಗನನ್ನು ಬರಿಗೈಯಲ್ಲಿ ಮನೆಗೆ ಕಳುಹಿಸುತ್ತಿರಲಿಲ್ಲ.

"ನಾನು ಆತನ ಪತ್ನಿಗೆ ಸಹಾಯ ಮಾಡುತ್ತಿದ್ದ ಸಂಗತಿ ಆತನಿಗೆ ತಿಳಿದಿರಬೇಕು. ಹೀಗೆ ಸಹಾಯ ದೊರಕುತ್ತಿದ್ದುದು ಅನುಕೂಲವೇ ಆಗಿದ್ದುದರಿಂದ, ಆತ ಕಣ್ಣು ಮುಚ್ಚಿಕೊಂಡು ಸುಮ್ಮನಾಗುತ್ತಿದ್ದನೆಂದೇ ನೆನಗೆನಿಸುತ್ತದೆ.....

"ಈ ದಾರುಣ ಕಥೆಯನ್ನು ಬೆಳೆಸುವುದು ನನಗೆ ಇಷ್ಟವಿಲ್ಲ. ಕೆಲವು ವರ್ಷಗಳು ಕಳೆದವು. ಫಿಲಿಪ್ ದುರ್ವ್ಯಸನದ ಕೆಟ್ಟ ಜೀವನದಲ್ಲಿ ನಖಶಿಖಾಂತ ಮುಳುಗಿಬಿಟ್ಟ. ನಾನು ಕ್ಯಾಥರೀನಳಿಗೆ ಆಕೆಯ ಮಗನನ್ನು ಬೆಳೆಸಿ ಮುಂದೆ ತರಲು ನನ್ನ ಕೈಲಾದಷ್ಟು ಸಹಾಯ ಮಾಡಿದೆ. ಈಗ ಆತ ಇಪ್ಪತ್ತರ ಹರೆಯದ ಯುವಕ; ತಾಯಿಯಷ್ಟೇ ಒಳ್ಳೆಯವನು, ಧೈರ್ಯಶಾಲಿ.

"ಆತ ಕಲಿಕಾರನಲ್ಲ, ವಿದ್ಯಾವಂತ. ಆತ ರಾತ್ರಿಶಾಲೆಗಳಲ್ಲಿ ರಚನಾವಿನ್ಯಾಸಗಳನ್ನು ಕಲಿತು, ಈಗ ಶಿಲ್ಪಿಯಾಗಿದ್ದಾನೆ. ಒಳ್ಳೆಯ ಸಂಪಾದನೆ ಮಾಡುತ್ತಿದ್ದಾನೆ.

"ಕುಡುಕ ಫಿಲಿಪ್‌ನ ಮನೆಯಲ್ಲಿ ದುಃಖ ತಪ್ಪಿರಲಿಲ್ಲವಾದರೂ ಪರಿಸ್ಥಿತಿ ತಕ್ಕಮಟ್ಟಿಗೆ ಸುಧಾರಿಸಿತ್ತು. ಕ್ಯಾಮಿಲೆ ತನ್ನ ತಾಯಿಯನ್ನು ತುಂಬ ಚೆನ್ನಾಗಿ ನೋಡಿಕೊಳ್ಳುತ್ತಿದ್ದ. ಒಂದೆರಡು ವರ್ಷಗಳ ನಂತರ ನಾನು ಕ್ಯಾಥರೀನಳನ್ನು ಕಂಡಾಗ ಆಕೆ ಬದಲಾಗಿದ್ದಳು. ಅಯ್ಯೋ, ಬಡಪಾಯಿ! ಸಭ್ಯಗೃಹಸ್ಥನ ಪೋಷಾಕು ಧರಿಸಿದ ಮಗನ ಹೆಗಲ ಮೇಲೆ ಆಕೆ ಕೈಹಾಕಿಕೊಂಡು ಹೋಗುತ್ತಿದ್ದುದನ್ನು ಕಂಡಾಗ ನನ್ನ ಹೃದಯ ಮಿಡಿಯಿತು.

"ಆದರೆ, ನಿನ್ನೆ ಸಂಜೆ ನಾನು ಊಟ ಮುಗಿಸಿಕೊಂಡು ಮನೆಗೆ ಹೋಗುತ್ತಿದ್ದಾಗ ದಾರಿಯಲ್ಲಿ ಕ್ಯಾಮಿಲೆಯನ್ನು ಕಂಡು ಕೈಕುಲಿಕಿಸಿ ಮಾತನಾಡಿಸಿದೆ. ಆತನಲ್ಲಿ ಗರ್ವವೆಂಬುದು ಎಳ್ಳಷ್ಟೂ ಇಲ್ಲ. ಪ್ಲಾಸ್ಟರ್ ಮೆತ್ತಿದ ಕೊಳಕು ಅಂಗಿ ತೊಟ್ಟ ನನ್ನೊಂದಿಗೆ ಕೈಕುಲುಕಿಸಲು ಆತನಿಗೆ ಮುಜುಗರವಾಗಲೇ ಇಲ್ಲ. ಆದಾಗ್ಯೂ, ಆತನ ಮಾತಿನಿಂದ ಏನೋ ವಿಶೇಷವಿರುವಂತೆ ಕಂಡುಬಂದಿತು.

"ಹೇಳು, ಏನಾಯಿತು?"

ನಿನ್ನೆಯಷ್ಟೆ ನಾನು ಲಾಟರಿಯಲ್ಲಿ ಪಲ್ಗೊಂಡೆ, (ಇಲ್ಲಿ 'ಲಾಟರಿ' ಎಂದರೆ ಹಣಗೆಲ್ಲುವ ಲಟರಿಯಲ್ಲ. ಮಿಲಿಟರಿ ಸೇವೆಗೆ ಯುವಕರನ್ನು ಆಯ್ಕೆ ಮಾಡಲು ನಡೆಸುತ್ತಿದ್ದ ಲಾಟರಿ.) ನನಗೆ ಬಂದ ಸಂಖ್ಯೆ 10. ಇಂತಹ ಸಂಖ್ಯೆ ಬಂದವರನ್ನು ನೌಕಾಪಡೆಯ ಸೈನಿಕರೊಂದಿಗೆ, ಜ್ವರದಿಂದ ನರಳಿ ಸಾಯಲು ವಸಾಹತುಗಳಿಗೆ ಕಳುಹಿಸಿಲಾಗುತ್ತದೆ. ಹೇಗಾದರೂ, ನಾನು ಅಮ್ಮನನ್ನು ಬಿಟ್ಟು ಐದು ವರ್ಷಕಾಲ

ದೂರವಿರಬೇಕಾಗುತ್ತದೆ. ಅಪ್ಪನೊಡನೆ ಅಮ್ಮನನ್ನು ಬಿಟ್ಟು ಹೋಗುವುದೇ? ಮನೆಯಲ್ಲಿ ಖರ್ಚಿಗೆ ಹಣವಿಲ್ಲ. ಇನ್ನು ಅಪ್ಪನೋ, ಈಗ ಹಿಂದೆಂದಿಗಿಂತಲೂ ಹೆಚ್ಚಾಗಿ ಕುಡಿಯುತ್ತಾರೆ! ಹಿಂದೆಂದಿಗಿಂತಲೂ ನಿರ್ದಯಿಯಾಗಿದ್ದಾರೆ. ಅವರ ಕೈಯಲ್ಲಿ ನಮ್ಮ ಅಮ್ಮ ಸತ್ತೇ ಹೋಗುತ್ತಾಳೆ! ಧರ್ಮಪಿತೃವೇ, ಬಡವರಿಗೆ ಕಷ್ಟ ಎಂದಿಗೂ ತಪ್ಪಿದ್ದಲ್ಲ."

"ಇಂದು ಬೆಳಗ್ಗೆ ನಾನು ಕೆಲಸಕ್ಕೆ ಹೋಗುವಾಗ – ಅರಾಗೊ ಸಾಲುಮರಗಳ ವಿಶಾಲ ಬೀದಿಯಲ್ಲಿ ನಿರ್ಮಾಣವಾಗುತ್ತಿರುವ ಕಟ್ಟಡಕ್ಕೆ ಹೋಗುವಾಗ – ನಾನು ರಾತ್ರಿಯೆಲ್ಲ ನಿದ್ದೆಯಿಲ್ಲದ ಮುದುಕನಂತೆ ಬಗ್ಗಿ ಹೋಗಿದ್ದೆ. ಮನಸ್ಸಿನಲ್ಲಿ ಎಷ್ಟೇ ದುಃಖವಿದ್ದರೂ ಕೆಲಸಕ್ಕಂತೂ ಹೋಗಲೇಬೇಕಲ್ಲವೆ? ಸರಿ, ಸಾರುವೆಯ ತುದಿಗೇರಿದೆ – ಕಟ್ಟಡದ ನಾಲ್ಕು ಅಂತಸ್ತುಗಳ ನಿರ್ಮಾಣ ಕಾರ್ಯ ಆಗಲೇ ಮುಗಿದಿತ್ತು. ನಾನು ನನ್ನ ಕಲಸವನ್ನು ಪ್ರಾರಂಭಿಸಿದೆ. ಹಿಂದಿನಿಂದ ಯಾರೋ ನನ್ನ ಬೆನ್ನು ತಟ್ಟಿದಂತಾಯಿತು. ತಿರುಗಿ ನೋಡಿದರೆ, ಫಿಲಿಪ್. ಈಗ ಆತ ಕೆಲಸಕ್ಕೆ ಸರಿಯಾಗಿ ಬರುತ್ತಿರಲಿಲ್ಲ. ಕುಡಿತಕ್ಕಾಗಿ ಒಂದಿಷ್ಟು ಹಣವನ್ನು ಸಂಪಾದಿಸಿಕೊಳ್ಳಲೆಂದು ಆತ ಇಂದು, ಒಂದು ದಿನದ ಮಟ್ಟಿಗೆ, ಕೆಲಸಕ್ಕೆ ಬಂದಿದ್ದ. ಬಹುಕಾಲದಿಂದ ನಾನು ಆತನನ್ನು ನೋಡಿಯೇ ಇರಲಿಲ್ಲ. ನನಗೆ ಆತನ ಗುರುತು ಹಿಡಿಯುವುದೇ ಕಷ್ಟವಾಯಿತು. ಬ್ರಾಂದಿ ಕುಡಿದು, ಕುಡಿದು ಆತನ ಸುಟ್ಟು ಬಾಡಿಹೋಗಿದ್ದ. ಆತನ ಗಡ್ಡ ನೆರೆತು ಹೋಗಿತ್ತು. ಆತನ ಕೈಗಳು ನಡುಗುತ್ತಿದ್ದವು. ಆತ ಮುದುಕನಾಗಿದ್ದ ಮಾತ್ರವಲ್ಲ ಕುಡಿತದಿಂದ ಜರ್ಝರಿತನಾಗಿ ಹೋಗಿದ್ದ.

"ಏನು, ಹುಡುಗನಿಗೆ ಒಂದು ಕೆಟ್ಟ ಸಂಸ್ಥೆ ಬಂದಿತಂತಲ್ಲ?" ಎಂದು ಕೇಳಿದೆ. "ಅದಕ್ಕೇನು ಮಾಡಬೇಕು?" ಕೆಟ್ಟ ಮುಖ ಮಾಡಿಕೊಂಡು ಒರಟು ಧ್ವನಿಯಲ್ಲಿ ಆತ ಉತ್ತರವಿತ್ತ. "ಕ್ಯಾಥರೀನಳೋ ಕ್ಯಾಮಿಲೆಯೂ ನನ್ನ ತಲೆ ತಿನ್ನುತ್ತಿರುವುದು ಸಾಲದೇ? ನೀನೂ ನನ್ನ ತಲೆ ತಿನ್ನಲು ಬಂದೆಯಾ? ಅಯ್ಯೋ, ದೇವರೆ! ನನ್ನ ಹೆಂಡತಿ ಮತ್ತು ಮಗನ ಮನಸ್ಸಿನಲ್ಲಿ ಏನಿದೆಯೆಂಬುದು ನನಗೆ ಚೆನ್ನಾಗಿ ಗೊತ್ತು. ನಾನು ಸತ್ತು ಹೋಗಿದ್ದರೆ, ಆತ ಹೋಗಬೇಕಾಗುತ್ತಿರಲಿಲ್ಲ. ಆದರೆ, ಇಂತಹ ಎಣಿಕೆಯಿಂದ ಅವರಿಗೇನೂ ಪ್ರಯೋಜನವಾಗುವುದಿಲ್ಲ. ನಾನಿನ್ನೂ ಗಟ್ಟಿ ಮುಟ್ಟಾಗಿದ್ದೇನೆ. ಕ್ಯಾಮಿಲೆ ವಿಧವೆಯ ಮಗನಲ್ಲ" "ವಿಧವೆಯ ಮಗ! ಅಯ್ಯೋ, ಗುರುಗಳೆ, ಈ ಹಾಳು ಶಬ್ದಗಳು ಆತನ ಬಾಯಿಂದ ಯಾಕಾದರೂ ಬಂದುವೋ? ನನ್ನ ಮನಸ್ಸಿನಲ್ಲಿ ಕೆಟ್ಟ ಆಲೋಚನೆ ಹುಟ್ಟಿತು. ಅದು ಇಡೀ ಬೆಳಿಗ್ಗೆಯೆಲ್ಲ ನನ್ನನ್ನು ಕಾಡಿತು.

'ಮಗ ಬಿಟ್ಟು ಹೋದ ಮೇಲೆ ಈ ಕೆಟ್ಟ ಕುಡುಕನೊಂದಿಗೆ ಒಬ್ಬಳೇ ಬಾಳಲು ಕ್ಯಾಥರೀನಳಿಗೆ ಎಷ್ಟು ಕಷ್ಟವಾಗಬಹುದೆಂದು ನಾನು ಆಲೋಚಿಸತೊಡಗಿದೆ. ಪಕ್ಕದ ಗಡಿಯಾರದ ಗೋಪುರದಿಂದ ಗಂಟೆಬಾರಿಸಿತು. ಹನ್ನೊಂದು ಗಂಟೆ. ಜೊತೆಯ ಕೆಲಸಗಾರರೆಲ್ಲ ಉಪಹಾರಕ್ಕಾಗಿ ಕೆಳಗಿಳಿಯುತ್ತಿದ್ದರು. ನಾವೇ–ನಾನೂ ಮತ್ತು ಫಿಲಿಪ್‌ನೇ– ಕಡೆಯವರು. ತನ್ನ ಸರದಿ ಬಂದಾಗ ಫಿಲಿಪ್ ಏಣಿಯ ಬಳಿ ಬಂದು, ಅದರ ಮೇಲೆ ಕಾಲಿಡುವಷ್ಟರಲ್ಲಿಯೇ, ಆತ ನನ್ನತ್ತ ತಿರಸ್ಕಾರಪೂರ್ವಕವಾಗಿ ನೋಡುತ್ತ, ಕುಡಿತದಿಂದ ಕೆಟ್ಟು ಹಾಳಾಗಿದ್ದ ಗೊಗ್ಗರು ದನಿಯಲ್ಲಿ ಹೇಳಿದ :

"ನೋಡು, ನನ್ನ ಕಾಲು, ಸೈನಿಕನ ಕಾಲಿನಂತೆ, ಇನ್ನೂ ಗಟಿಯಾಗಿಯೇ ಇದೆ. ಕ್ಯಾಮಿಲೆ ವಿಧವೆಯ ಮಗನಾಗುವ ಕಾಲ ಇನ್ನೂ ಹತ್ತಿರ ಬಂದಿಲ್ಲ ಹ್ಹ ಹ್ಹ !" "ನನಗೆ ಸಿಟ್ಟು, ರಕ್ತ ಒಮ್ಮೆಲೇ ನೆತ್ತಿಗೇರಿಬಿಟ್ಟವು! ನಾನು ಏಣಿಯ ಎರಡು ಮೇಲ್ತುದಿಗಳನ್ನು ನನ್ನ ಎರಡು ಕೈಗಳಿಂದ ಹಿಡಿದುಕೊಂಡೆ. ಏಣಿಯನ್ನು ಹಿಡಿದುಕೊಂಡಿದ್ದ ಫಿಲಿಪ್ "ಸಹಾಯ ಮಾಡಿ' ಎಂದು ಕಿರಿಚಿದ. ನಾನು ಒಂದು ಬಾರಿ ಬಲವಾಗಿ ನೂಕಿದ್ದೇ ತಡ, ಫಿಲಿಪ್ ಆಕಾಶಕ್ಕೆ ಹಾರಿಬಿಟ್ಟ!

"ಆತ ಸ್ಥಳದಲ್ಲಿಯೇ ಮೃತಪಟ್ಟ. ಎಲ್ಲರೂ ಅದೊಂದು ಅಪಘಾತವೆಂದು ಭಾವಿಸಿದರು. ಆದರೆ, ಕ್ಯಾಮಿಲೆ ಈಗ ವಿಧವೆಯ ಮಗ. ಆತ ತಾಯಿಯನ್ನು ಬಿಟ್ಟು ಹೋಗಬೇಕಾಗಿಲ್ಲ.

"ಇದೇ ನಾನು ಮಾಡಿರುವ ಕೃತ್ಯ! ಇದನ್ನೇ ನಾನು ನಿಮಗೂ, ದಯಾಮಯನಾದ ಭಗವಂತನಿಗೂ ನಿವೇದಿಸಿಕೊಳ್ಳಬೇಕಾಗಿದೆ! ನಾನು ಮಾಡಿದ ಕೃತ್ಯಕ್ಕಾಗಿ ಪಶ್ಚಾತ್ತಾಪ ಪಡುತ್ತೇನೆ; ಅದಕ್ಕಾಗಿ ಕ್ಷಮೆ ಕೋರುತ್ತೇನೆ. ಅದಂತೂ ಸರಿಯೇ ಸರಿ.... ಆದರೆ ಕಪ್ಪುಶೋಕ ವಸ್ತ್ರಗಳನ್ನು ಧರಿಸಿದ ಕ್ಯಾಥರೀನ್ ತನ್ನ ಮಗನ ಭುಜದ ಮೇಲೆ ಕೈಹಾಕಿಕೊಂಡು ಸುಖವಾಗಿ ಓಡಾಡುವುದನ್ನು ನಾನು ನೋಡಬಯಸುವುದಿಲ್ಲ. ನಾನು ಆ ದೃಶ್ಯವನ್ನು ನೋಡಿದ್ದೇ ಆದರೆ, ನಾನು ಮಾಡಿದ ಅಪರಾಧಕ್ಕಾಗಿ ಪಶ್ಚಾತ್ತಾಪ ಪಡಲು ನನ್ನಿಂದ ಸಾಧ್ಯವೇ ಆಗದು. ಅದನ್ನು ತಪ್ಪಿಸಿಕೊಳ್ಳಲು ನಾನು ಅಮೆರಿಕಕ್ಕೆ ವಲಸೆ ಹೋಗಿಬಿಡುತ್ತೇನೆ.

"ಇನ್ನು ಪರಿಹಾರ ಕಾಣಿಕೆಯ ವಿಷಯ ........... ನೋಡಿ, ಗುರುಗಳೇ, ಇಗೋ ಇಲ್ಲಿದೆ, ಬಂಗಾರದ ಶಿಲುಬೆ – ಕ್ಯಾಥರೀನಳು ತಾನು ಫಿಲಿಪ್‌ನನ್ನು ಪ್ರೀತಿಸುತ್ತಿರುವುದಾಗಿ ಒಪ್ಪಿಕೊಂಡು, ನನ್ನಿಂದ ಪಡೆಯಲು ನಿರಾಕರಿಸಿದ ಬಂಗಾರದ ಶಿಲುಬೆ. ನಾನು ನನ್ನ ಇಡೀ ಜೀವನದಲ್ಲಿ ಒಂದೇ ಒಂದು ಬಾರಿ ಕಂಡ ಸುಖದ ದಿನಗಳ ನೆನಪಿಗಾಗಿ ಇದನ್ನು ಯಾವಾಗಲೂ ನನ್ನೊಡನೆಯೇ ಇಟ್ಟುಕೊಂಡು ಬಂದಿದ್ದೇನೆ. ಇದನ್ನು ತೆಗೆದುಕೊಳ್ಳಿ. ಇದನ್ನು ಮಾರಿ, ಬಂದ ಹಣವನ್ನು ಬಡವರಿಗೆ ಹಂಚಿ."

ಚಾರ್ಕ್ಸ್ ಅಬ್ಬೆ ಫೆಬರ್ ಪಾದ್ರಿಯಿಂದ ಶಾಸ್ತ್ರಸ್ನಾನವನ್ನು ಪಡೆದನೇ? ಇಷ್ಟಂತೂ ನಿಜಃ ಪಾದ್ರಿಯ ಆ ಪುಟ್ಟ ಬಂಗಾರದ ಶಿಲುಬೆಯನ್ನು ಮಾರಲಿಲ್ಲ. ಅದರ ಬೆಲೆಗೆ ಸರಿಹೊಂದುವಷ್ಟು ಮೊಬಲಗಿನ ಹಣವನ್ನು ಚರ್ಚಿನ ಬಡವರ ಪೆಟ್ಟಿಗೆಗೆ ಹಾಕಿದರು. ಆ ಒಡವೆಯನ್ನು ಕನ್ಯಾಮಾತೆಯ ದೇವಾಲಯದ ಪವಿತ್ರ ಸ್ಥಾನದಲ್ಲಿ, ಹರಕೆಯ ರೂಪದಲ್ಲಿ, ತೂಗು ಹಾಕಿದ್ದಾರೆ. ಪಾದ್ರಿ ಅಬ್ಬೆ ಫೆಬರ್ ಬಡಗಾರೆಯನಿಗಾಗಿ ಪ್ರಾರ್ಥಿಸಲು ಆಗಾಗ್ಗೆ ಆ ದೇವಾಲಯಕ್ಕೆ ಹೋಗುವುದುಂಟು.

* * *

# ಉರಿಯ ನಾಲಗೆಯ ಮೇಲೆ

ಕಲ್ಲೇಶ್ ಕುಂಬಾರ್

'ರತ್ನವ್ವ, ನಾಳೆ ದಿನ ನಿನ್ಗ ಕಿಚ್ಚುಹಾಯ್ಲಿಕ್ಕೆ ಬಿಡದಿಲ್ಲ !'

ಹೈಸ್ಕೂಲಿನ ಚೇರ್ಮನ್ ಈರನಗೌಡ, ಸಿಟ್ಟಿನಲ್ಲಿ ಕಡ್ಡಿ ತುಂಡು ಮಾಡಿದಂತೆ ಹೇಳಿದ. ಆ ಮಾತುಗಳನ್ನು ಕೇಳಿದ ರತ್ನವ್ವನಿಗೆ ತಲೆ ತಿರುಗಿದಂತಾಯಿತು. ಆಕೆ, ತಟ್ಟನೆ ಎದ್ದು ನಿಂತಳು. ಆ ಕ್ಷಣದಲ್ಲಿ ಆಕೆಯ ಮೈಮೇಲೆ ಎಲ್ಲಮ್ಮ ದೇವಿ ಆಡತೊಡಗಿದಂತಾಗಿ, ಇಡಿಯಾಗಿ ದೇಹವನ್ನು ಜಿಲ್ಲಿನಂತೆ ಮಣಿಸಿ; ತನ್ನೆರಡೂ ಕೈಗಳನ್ನು ಮುಷ್ಟಿ ಮಾಡಿ; ಗಾಳಿಯಲ್ಲಿ ಮೇಲೆ–ಕೆಳಗೆ ಆಡಿಸುತ್ತ, ಸಣ್ಣಗೆ ದನಿ ತಗೆದು ಚಿಕ್ಕಳಿಸಿದಳು. ಹೈಸ್ಕೂಲಿನ ಮುಂದೆ ಬಯಲಿನಲ್ಲಿ ನೆರೆದಿದ್ದ ಟ್ರಸ್ಟಿನ ಮಂದಿಯನ್ನು ನುಂಗುವಂತೆ ನೋಡುತ್ತ, ಅಲ್ಲಿಂದ ಬಿರಬಿರನೆ ನಡೆದಳು. ಬೆಳದಿಂಗಳ ಬೆಳಕಲ್ಲಿ ದಡದಡನೆ ಹೆಜ್ಜೆಹಾಕುತ್ತ, ಹೈಸ್ಕೂಲಿನ ಬಯಲನ್ನು ದಾಟಿಕೊಂಡು ಮುಂದೆ ಬಂದಳು. ಆಕೆ, ನಡೆದಂತೆ ಕಾಲುಗಳಲ್ಲಿಯ ಕಸುವು ಕುಂದುತ್ತಿತ್ತು. ಗಂಟಲು ಒಣಗಿ ಬಂದಂತೆನಿಸಿ, ಉಗುಳು ನುಂಗಿದಳು. ಆಗ, ಆ ಬಯಲಿಗೆ ಅಂಟಿಕೊಂಡಂತೆ ಇದ್ದ ಎಲ್ಲಮ್ಮ ದೇವಿಯ ಗುಡಿ ಕಂಡಿತು, ಆಕೆಗೆ. ಗುಡಿಯಲ್ಲಿ ಜನರ ಉಲುವು ಇತ್ತು. ನಾಳೆದಿನ ಬನದ ಹುಣ್ಣಿವಿ. ಬೆಳಗಾದರೆ ಎಲ್ಲಮ್ಮ ದೇವಿಯ ಕೊಂಡದ ಜಾತ್ರೆ. ದಾಸರ ಪರಸ್ಯಾ ಗುಡಿಗೆ ಸುಣ್ಣ ಬಳಿಯುತ್ತಿದ್ದ. ಒಂದಿಬ್ಬರು ಆಳುಗಳು ಗುಡಿಯ ಅಂಗಳದಲ್ಲಿ ನಾಲ್ಕೂ ದಿಕ್ಕಿಗೆ ಗಳಗಳನ್ನು ನಿಲ್ಲಿಸಿ ; ಮೇಲೆ ಅಡ್ಡಲಾಗಿ ಕೋಲುಗಳನ್ನು ಕಟ್ಟಿ, ಬಾಳೆಯ ಎಲೆಗಳಿಂದ ಹಂದರ ಹಾಕುತ್ತಿದ್ದರು. ಇನ್ನೊಂದಿಬ್ಬರು ಗುಡಿಯ ಎದುರಿಗೆ ಕೊಂಡದ ಗುಳಿ ತೋಡುತ್ತಿದ್ದರು. ಹತ್ತಿಪ್ಪತ್ತು ಮಂದಿ ಜೋಗಿತಿಯರು, ಗುಡಿಯ ಪಕ್ಕದಲ್ಲಿದ್ದ ಕಟ್ಟೆಯ ಮೇಲೆ ಕುಂತು; ಚವಡಿಕೆ ನುಡಿಸುತ್ತ, ಹಾಡುವುದರಲ್ಲಿ ತಲ್ಲೀನರಾಗಿದ್ದರು. ಅವರು ನುಡಿಸುತ್ತಿದ್ದ ಚವಡಿಕೆಯನಾದ, ಅಲೆ ಅಲೆಯಾಗಿ ಗಾಳಿಯಲ್ಲಿ ತೇಲಿಬಂದು, ರತ್ನವ್ವನ ಕಿವಿಯ ಮೇಲೆ ಬೀಳುತ್ತಿದ್ದಂಗೆ ಮನದೊಳಗೆ ನೆಮ್ಮದಿಪಟ್ಟಳು. ಅವರೆಲ್ಲ ಜಾತ್ರೆಗೆ ದೇವಿಯ ಗುಡಿಯನ್ನು ಸಜ್ಜುಗೊಳಿಸುತ್ತಿರುವುದನ್ನು ಕಂಡು, ಆಕೆಯ ಮನಸ್ಸು ನಿರಾಳವಾಯಿತು.

ರತ್ನವ್ವ, ಕಳೆದ ನಾಲ್ಕು ವರ್ಷದಿಂದ ಬನದ ಹುಣ್ಣಿವಿಗೆ ತಾನೇ ಮುಂದಾಗಿ ಎಲ್ಲಮ್ಮದೇವಿಯ ಕೊಂಡದ ಜಾತ್ರೆಯನ್ನು ಮಾಡುತ್ತ ಬಂದಿದ್ದಳು. ಈ ಸಲವೂ ದೇವಿಯ ಜಾತ್ರೆಯನ್ನು ಅದ್ಧೂರಿಯಿಂದ ಮಾಡಬೇಕೆಂದುಕೊಂಡಿದ್ದ ಆಕೆ, ತಿಂಗಳಿಂದ ಐದಾರು ಊರುಗಳಿಗೆ ತಿರುಗಾಡಿ, ತನಗೆ ಗೊತ್ತಿದ್ದ ಎಲ್ಲ ಜೋಗಿತಿಯರನ್ನು ಕಂಡು, ಜಾತ್ರೆಗೆ ಆಹ್ವಾನಿಸಿ ಬಂದಿದ್ದಳು. ಬರುವಾಗ, 'ನೀವೇ ಎಲ್ಲನೂ ಸುಸೂತ್ರಾಗಿ ನಡಿಸ್ಕಡ್ಬೇಕು...' ಎಂದು ಅವರಿಗೆಲ್ಲ ವಿನಂತಿಸಿಕೊಂಡಿದ್ದಳು. ಸುತ್ತಲಿನ ಹಳ್ಳಿಗಳಲ್ಲಿ ಆಕೆ, ಬನದ ಹುಣ್ಣಿವಿಯಂದು ನೆರವೇರಿಸುವ ದೇವಿಯ ಕೊಂಡದ ಜಾತ್ರೆ ಹೆಸರಾಗಿತ್ತು. ಜಾತ್ರೆಯ ದಿನ ಎಲ್ಲಮ್ಮದೇವಿಯ ಝುಗೆಯನ್ನು ಹೊತ್ತು, ಕಿಚ್ಚ ಹಾಯುವುದನ್ನು ನೋಡಲು ಜನರು ಹಿಂಡುಗಟ್ಟಿ ಬರುತ್ತಿದ್ದರು. ಮಣಭಾರದ ಝುಗೆಯನ್ನು ತಲೆಯ ಮೇಲೆ ಹೊತ್ತು, ಮರಳ ಮೇಲೆ ನಡೆದವರಂತೆ ಆಕೆ, ಕೊಂಡದೊಳಗಿನ ನಿಗಿ ನಿಗಿ ಕೆಂಡದ ಮೇಲೆ ನಡೆದು ಹೋಗುವುದನ್ನು ನಿಂತ ಜನರೆಲ್ಲ ಉಸಿರು ಬಿಗಿಹಿಡಿದು ನೋಡುತ್ತಿದ್ದರು. ಆ ಕ್ಷಣದಲ್ಲಿ, ಜೋಗಿತಿಯರು ನುಡಿಸುತ್ತಿದ್ದ ಚವಡಿಕೆಯನಾದ, ಅಲ್ಲಿದ್ದವರ ಕಿವಿಯ ಮೂಲಕ ದೇಹದ ನರ ನಾಡಿಗಳಲ್ಲೆಲ್ಲ ದಟ್ಟವಾಗಿ ವ್ಯಾಪಿಸಿದಂತಾಗಿ, ಅವರೆಲ್ಲ ಭಕ್ತಿಯ ಪರಾಕಾಷ್ಠೆಗೆ ತಲುಪಿ ಬಿಡುತ್ತಿದ್ದರು. ಅದೆಲ್ಲ ಈಗ, ರತ್ನವ್ವನಿಗೆ ನೆನಪಾಗಿ ಸಂಕಟಪಟ್ಟಳು. ಆ ಸಂಕಟದಲ್ಲಿ ಗುಡಿಯೊಳಗಿದ್ದ ಎಲ್ಲಮ್ಮ ದೇವಿಯ ಝುಗೆಯನ್ನು ದಿಟ್ಟಿಸಿದಳು. ದೇವಿಯ ಮುಖದಿಂದ ಹಸುರು ಸೀರೆಯುಟ್ಟು, ಸಿಂಗಾರಗೊಂಡಿದ್ದ ಜೋಗಿತಿಯೊಬ್ಬಳು ಚವಡಿಕೆ ನುಡಿಸುತ್ತ ತನ್ನತ್ತ ನಡೆದು ಬಂದಂತಾಗಿ ತಳಮಳಿಸಿದಳು. ಆ ತಳಮಳದಲ್ಲಿ ಗುಡಿಯತ್ತ ಹೋಗಬೇಕೆಂದುಕೊಂಡಳು. ಆದರೆ ಹೋಗದೇ ಅಲ್ಲೇ ನಿಂತಳು. ತುಸು ಹೊತ್ತು ಅಲ್ಲೇ ಚಿಂತಿಸುತ್ತ ನಿಂತಿದ್ದ ಆಕೆ, ಕೈ ಮುಗಿದು ಮುಂದೆ ನಡೆದಳು.

ರತ್ನವ್ವ, ಸೋತ ಮುಖ ಹೊತ್ತು ಮನೆಗೆ ಬಂದು ; ಮನೆ ಮುಂದಿನ ಕಟ್ಟೆಯ ಮೇಲೆ ನಿಟ್ಟುಸಿರು ಬಿಡುತ್ತ ಕುಂತಳು. ತಣ್ಣಗೆ ಗಾಳಿ ಬೀಸುತ್ತಿತ್ತು. ಆ ಗಾಳಿಗೆ ಮೈಯೊಡ್ಡಿದಾಗ ದೇಹಕ್ಕೆ ಹಿತವೆನಿಸಿತು. ಮುಂದು ಮಾಡಿದ್ದ ಬಾಗಿಲ ಸಂದಿಯಿಂದ ಕುಂತಲ್ಲಿಂದಲೇ ಒಳಗೆ ಇಣುಕಿ ನೋಡಿದಳು. ಪಡಸಾಲೆಯಲ್ಲಿ ಯಲ್ಲವ್ವ ಮಲಗಿದ್ದು ಕಂಡಿತು. ವಾರದಿಂದ ಜಾತ್ರೆಯ ಕೆಲಸದಲ್ಲಿ ತೊಡಗಿದ್ದ ಆಕೆ, ಮೈ ಮೇಲೆ ಎಚ್ಚರವಿಲ್ಲದಂಗೆ ದಣಿದು ಮಲಗಿದ್ದನ್ನು ಕಂಡು ಕಸಿವಿಸಿಗೊಂಡಳು. ಆ ಕಸಿವಿಸಿಯಿಂದಾಗಿ ಇದ್ದಕ್ಕಿದ್ದಂಗೆ ಚೇಳುಗಳು ಮೈ ಮೇಲೆ ಹರಿದಾಡಿದಂತಾಗಿ ಚಡಪಡಿಸಿದಳು. ಆಗ, ಬುರ್ಲಟ್ಟೇರ ಓಣಿಯ ಚಂದಪ್ಪ ಕಣ್ಣ ಮುಂದೆ ಬಂದು ನಿಂತಂತಾಯಿತು. ಆತ, ಕಣ್ಮುಂದೆ ಬರುತ್ತಿದ್ದಂಗೆ ಹಾವು ತುಳಿದವರಂತೆ ಬೆಚ್ಚಿ ಬಿದ್ದಳು. ಅಂದು, 'ರತ್ನವ್ವ, ಎಣ್ಣೆ ಬಂದಾಗ ಕಣ್ಣು ಮುಚ್ಚಕಬಾರ್ದು. ನೀನು ಮನ್ಸು ಮಾಡಿದೆಂದ್ರ ಈರನಗೌಡ ನಿನ್ನ ಕೈಬಿಡದಿಲ್ಲ...! ' ಎಂದು ಆತ, ಬುದ್ಧಿ ಹೇಳಲು ಬಂದಿದ್ದ. ಆ ಮಾತುಗಳು ಆಕೆಯ ಎದೆಯೊಳಗೆ ಮುಳ್ಳಿನಂತೆ ಚುಚ್ಚುತ್ತಿದ್ದವು ! ದೂರದಲ್ಲಿ ನಾಯಿಗಳು ಊಳಿಡುತ್ತಿದ್ದುದು ಕಿವಿಗೆ ಬೀಳುತ್ತಿದ್ದಂಗೆ ಆಕೆ, ದೃಷ್ಟಿ ಕದಲಿಸಿದಳು. ಬೆಳದಿಂಗಳ ಬೆಳಕು ಆಕೆಯನ್ನು ಅಣಕಿಸಿದಂತಾಯಿತು. ಕತ್ತೆತ್ತಿ ಮೇಲೆ ನೋಡಿದಳು. ನೀಲಾಕಾಶದಲ್ಲಿ ತೇಲುತ್ತಿದ್ದ ಪೂರ್ಣಚಂದ್ರ, ಉಂಡು ಎಸೆದ ಪತ್ರಾವಳಿಯಂತೆ ಕಂಡ, ಆಕೆಗೆ. ಆಕೆ,

ಪೂರ್ಣಚಂದ್ರಾಮನನ್ನು ತರ್ದೇಕ ಚಿತ್ತದಿಂದ ನೋಡತೊಡಗಿದಳು. ಆಗ, ಒಂದು ವರ್ಷದ ಹಿಂದೆ ನಡೆದ ಆ ಘಟನೆಯ ನೆಪ್ಪು ಬಂದಿತು.....

ಇಲ್ಲಿನ ಜನರ ಬುದ್ಧಿಯನ್ನು ಹರಿತ ಮಾಡುವ ಸಾಣೆಗಲ್ಲಿನಂತಿದ್ದ ಈ ಊರಿನ ಹೈಸ್ಕೂಲಿನಲ್ಲಿ ಓದುತ್ತಿದ್ದ ರತ್ನವ್ವನ ಮಗಳು, ಯಲ್ಲವ್ವ, ತನ್ನ ವಯಸ್ಸಿಗೂ ಮೀರಿದ ದೇಹ ಸಿರಿಯನ್ನು ಹೊಂದಿ; ಆಗಷ್ಟೇ ತುಟಿಯ ಮೇಲೆ ಮೀಸೆ ಮೂಡುತ್ತಿದ್ದ ಸ್ಕೂಲಿನ ಹುಡುಗರ ನಿದ್ದೆ ಕೆಡಿಸಿದ್ದಳು. ಓದಿನಲ್ಲಿ ಹಿಂದಿದ್ದರೂ ಹೈಸ್ಕೂಲಿನಲ್ಲಿ ಆಗಾಗ ಜರುಗುತ್ತಿದ್ದ ಭಾಷಣ, ಹಾಡು, ಕುಣಿತಗಳಂಥ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಯಾವಾಗಲೂ ಮುಂದಿರುತ್ತಿದ್ದಳು. ಗುಡಿಯಲ್ಲಿ, ಎಲ್ಲಮ್ಮದೇವಿಯ ಭಕ್ತರಿಂದ ಬರುತ್ತಿದ್ದ ಬಾನವನ್ನು ಉಂಡು; ದೇಹದ ಆಯ ಕಟ್ಟಿನ ಜಾಗೆಯಲ್ಲೆಲ್ಲ ರಕ್ತ-ಮಾಂಸವನ್ನು ತುಂಬಿಕೊಂಡು; ದುಂಡಗಾಗಿದ್ದ ಆಕೆ ಅದೊಮ್ಮೆ ಹೈಸ್ಕೂಲಿನ ಕಾರ್ಯಕ್ರಮವೊಂದರಲ್ಲಿ, 'ಛೋಲಿಕೆ ಪೀಚೆ ಕ್ಯಾಹೈ...' ಹಾಡಿಗೆ ಮೈಯೆಲ್ಲ ಸಿಂಗರಿಸಿಕೊಂಡು ಕುಣಿಯುವಾಗ, ಆ ಕಾರ್ಯಕ್ರಮಕ್ಕೆ ಅತಿಥಿಯಾಗಿ ಆಗಮಿಸಿದ್ದ ಹೈಸ್ಕೂಲಿನ ಚೇರ್ಮನ್ ಈರನಗೌಡನ ಕಣ್ಣಿಗೆ ಬಿದ್ದಳು!. ಹಾಗೆ, ಕಣ್ಣಿಗೆ ಬಿದ್ದ ಕ್ಷಣದಲ್ಲೇ ಯಲ್ಲವ್ವನ ಅಂದ ಚೆಂದಕ್ಕೆ ಮರುಳಾಗಿ ಹೋದ ಆತ, ದಿನವೂ ಯಾವುದಾದರೊಂದು ನೆಪವೊಡ್ಡಿ, ಸ್ಕೂಲಿನ ಆಫೀಸು ರೂಮಿನಲ್ಲಿ ಬಂದು ಕೂತುಕೊಳ್ಳಲಾರಂಭಿಸಿದ. ತಾನು, ಈ ಸ್ಕೂಲಿನ ಚೇರ್ಮನ್ ಎಂಬ ಗತ್ತಿನಲ್ಲಿ, ಶಿಕ್ಷಕರಿಂದಲೇ ಆಕೆಯನ್ನು ಆಫೀಸು ರೂಮಿಗೆ ಕರೆಸಿಕೊಂಡು ಚೇಷ್ಟೆಯ ಮಾತಗಳನ್ನಾಡುತ್ತ ಸಿಲ್ಲತೊಡಗಿದ. ಇದನ್ನೆಲ್ಲ ಕಿಟಿಕಿಯ ಮುಖಾಂತರ ಕಳ್ಳಗಣ್ಣಿನಿಂದ ನೋಡುತ್ತಿದ್ದ ಶಿಕ್ಷಕರೆಲ್ಲ ಅವರಿಬ್ಬರ ನಡುವೆ ಸಂಬಂಧ ಕಲ್ಪಿಸಿ ಮಾತಾಡಿಕೊಳ್ಳತೊಡಗಿದರು. ದಿನಕಳೆದಂತೆ ಈರನಗೌಡ ಮಾಡುವ ಚೇಷ್ಟೆ ಮತ್ತು ಜನರ ವ್ಯಂಗ್ಯದ ಮಾತುಗಳು ಹೆಚ್ಚಾದಾಗ, 'ಇನ್ನು ನನ್ನಿಂದ ತಡ್ಕಲಿಕ್ಕಾಗಲಿಲ್ಲ....' ಎಂದು ಮನದೊಳಗೆ ಅಂದುಕೊಂಡ ಯಲ್ಲವ್ವ ಅದೊಂದು ದಿನ ಸಂಜೆ ಸ್ಕೂಲಿನಿಂದ ಮುಖ ಒಣಗಿಸಿಕೊಂಡು ಮನೆಗೆ ಬಂದಳು. ಹೀಗೆ ಮುಖ ಒಣಗಿಸಿಕೊಂಡು ಬಂದ ಮಗಳನ್ನು ಕಂಡು, ಚಿಂತೆಗೊಳಗಾದ ರತ್ನವ್ವ, 'ಯಾಕವ್ವ, ಸಪ್ಪಗಿದ್ದೆಲ್ಲ....!? ಎಂದು ಆಕೆಯನ್ನು ರಮ್ಮಿಸಿ ಕೇಳಿದಳು. ಆಕೆ, ಹಾಗೆ ಕೇಳಿದ್ದೇ ತಡ ಯಲ್ಲವ್ವ, ರೊಯ್ಯೆಂದು ದನಿ ತೆಗೆದು ಅಳುತ್ತ, 'ಯವ್ವ, ಇನ್ಮ್ಯಾಲೆ ನಾನೇನು ಸ್ಕೂಲುಗೆ ಹೋಗಾಕಿಲ್ಲ ವ್ವೊ..... ! ಚೇರ್ಮನ್ ಈರನಗೌಡ... ನನ್ನ ಕಂಡ್ರ ಹೆಂಗೆಂಗ ಮಾಡ್ತಾನು ! ಮೈಮುಟ್ಟ ಬರ್ತಾನವುನು ! ನನ್ನ ಎದೆಯ ಮ್ಯಾಲಿನ ಮೊಲಿ ಹಿಡ್ದು......' ಎಂದು ಅರ್ಧಕ್ಕೆ ಮಾತುಗಳನ್ನು ತುಂಡರಿಸಿ, ಅಳುತ್ತ ನಿಂತಳು. ಆಕೆ, ಹೇಳಿದ್ದನ್ನು ಕೇಳಿ ರತ್ನವ್ವನಿಗೆ ಸಿಟ್ಟು ಉಕ್ಕೇರಿ ಬಂತು. ಆ ಸಿಟ್ಟಿನಲ್ಲಿ, 'ಅವ್ವನ ಹಲ್ಲಾಗ ಹಾಂಟು ಸುರೀಲಿ....! ಅವ್ವನ ಮನ್ಯಾಗ ಅಕ್ಕ-ತಂಗೇರು ಇಲ್ಲಂತೆನು.....!? ಜೋಗ್ಯಾನ ತಂದು....' ಎಂದು ಬೈದುಕೊಳ್ಳುತ್ತ, ನಿಂತ ಕ್ಷಣದಲ್ಲೇ ಯಲ್ಲವ್ವನ ಕೈಹಿಡಿದುಕೊಂಡು ದಡದಡನೆ ಈರನಗೌಡನ ಮನೆಯತ್ತ ಹೆಜ್ಜೆ ಹಾಕಿದಳು. ರೋಷಾವೇಶದಲ್ಲಿದ್ದ ರತ್ನವ್ವ, ಬಂದವಳೇ ಆತನ ಮನೆ ಎದುರು ನಿಂತು, 'ಲೇ, ಸೂಳಿಮಗನ... ಹೊರಗ ಬಾರ್ಲೇ ! ' ಎಂದು ಗಂಟಲಿನ ನರ ಕಿತು ಹೋಗುವಂತೆ ಚೀರಿದಳು. ಆಕೆಯ ದನಿ ಕೇಳಿ ಈರನಗೌಡ ಮನೆಯಿಂದ ಹೊರಬಂದು ಬಾಗಿಲಲ್ಲಿ ನಿಂತುಕೊಂಡ. ದುರ್ಗಿ

ಅವತಾರದಲ್ಲಿ ನಿಂತಿದ್ದ ರತ್ನವ್ವನನ್ನು ಕಂಡದ್ದೇ ತಡ ದಂಗಾಗಿ ಹೋದ ಆತನ ಮುಖದ ಮೇಲೆ ಬೆವರೊಡೆಯಿತು. ಮಾತುಗಳು ಹೊರಡದೇ ತಬ್ಬಿಬ್ಬಾಗಿ ನಿಂತಿದ್ದ ಆತನನ್ನು ಕಂಡು, ರತ್ನವ್ವ, 'ಲೇ, ಮಿಂಡ್ರಿ ಮಗನ... ಮಂದಿ ಹೆಣ್ಮಕ್ಳಂದ್ರ ಏನಂತ ತಿಳ್ಕಂಡಿದ್ದೀಲೆ!? ನಿನ್ನ ಮನ್ಯಾಗ ಅಕ್ಕ – ತಂಗೇರಿಲ್ಲೆನು...!? ಲೇ, ನಿನ್ಗ ಗಂಡ್ಸತನ ಇದ್ರ.... ನನ್ನ ಮಗಳ್ಯಾಕ ಬೇಕು!? ನಿನ್ನ ಅಕ್ಕತಂಗೇರ್ನ ಇಟ್ಕಲೇ... ಹಾದ್ರಗಿತ್ತಿ ಮಗನ...' ಎಂದು ದನಿ ಏರಿಸಿ ಬೇಯುತ್ತ ನಿಂತಳು. ಆಕೆ, ಹಾಗೆ ಬೈಯುತಿದ್ದರೆ ಕೇರಿಯ ಜನರು ಹಿಂಡುಗಟ್ಟಿ ನೋಡುತ್ತಿದ್ದರು. ಇದರಿಂದ ಅವಮಾನಿತನಾದ ಈರನಗೌಡ ತುಟಿ ಬಿಚ್ಚದೆ, ಮುಖ ಕೆಳಗೆ ಹಾಕಿ ನಿಂತುಕೊಂಡ. ರತ್ನವ್ವ, ಬೈದು...ಬೈದು ಸುಸ್ತಾಗಿ, ಕೊನೆಗೆ ಯಲ್ಲಮ್ಮನ ಕೈಹಿಡಿದು ಮನೆಯತ್ತ ನಡೆದಳು. ಆಗ, ಇದುವರೆಗೂ ಸುಮ್ಮನಿದ್ದ ಈರನಗೌಡ, 'ರತ್ನವ್ವ, ನನ್ನ ಮರ್ಯಾದಿ ತಗದೆಲ್ಲ ...... ಬಿಡದಿಲ್ಲ ನಿನ್ನ ! ಈವೊತ್ತೇ ನನ್ನ ಕಣ್ಣಾಗ ಉಳ್ಕಂಡ ಬಿಟ್ಟಿದ್ದಿ.... ನೋಡ್ಕಂತಿನಿ, ಹೋಗು...' ಎಂದು ಮನೆ ಬಾಗಿಲಲ್ಲೇ ನಿಂತುಕೊಂಡು ಧಮಕಿ ಹಾಕಿದ. ಯಲ್ಲಮ್ಮನ ಕೈಹಿಡಿದು ನಡೆದಿದ್ದ ರತ್ನವ್ವ, ಆತನ ಧಮಕಿಯ ಮಾತುಗಳನ್ನು ಕೇಳಿ, ತಟ್ಟನೆ ಹಿಂದಿರುಗಿ ನಿಂತು, 'ಲೇ, ಮೂಳ, ನಿನ್ನ ಧಮಕಿ ಮಾತು.... ನನ್ನ ತೊಡೆ ಸಂದ್ಯಾಗಿನ ಸ್ಯಾಟಕ್ಕ ಸಮಾನ, ತಿಳ್ಕ....' ಎಂದು ಅಲ್ಲಿ ನೆರೆದಿದ್ದ ಎಲ್ಲರಿಗೂ ಕೇಳುವಂತೆ ಅಂದುಕೊಳ್ಳುತ್ತ ಬಿರಬಿರನೆ ಹೊರಟು ಹೋಗಿದ್ದಳು.ಅಂದೇ ಕೊನೆಯಾಯಿತು. ಮುಂದೆಂದೂ ಯಲ್ಲವ್ವ, ಹೈಸ್ಕೂಲಿನ ಕಟ್ಟೆ ಏರಲಿಲ್ಲ.....

ದೂರದ ಜಾಲಿ ಮರದಲ್ಲಿ ಕುಂತಿದ್ದ ಹಾಲಕ್ಕಿ, 'ಕಿಲಿಬಿಲಿ...ಕಿಲಿಬಿಲಿ.....' ಎಂದು ಮಾತಾಡಿಕೊಂಡದ್ದು ಕಿವಿಗೆ ಬೇಳುತ್ತಿದ್ದಂಗೆ ರತ್ನವ್ವ ತಟ್ಟನೆ ವಾಸ್ತವಕ್ಕೆ ಬಂದಳು. ನೆನಪುಗಳಲ್ಲಿ ಹುದುಗಿ ಹೋಗಿದ್ದ ಆಕೆ, ಕಲ್ಲಿನಂತೆ ಕುಂತೇ ಇದ್ದಳು. ಆ ನೆನಪುಗಳಿಂದಾಗಿ ಆಕೆ, ದೀರ್ಘವಾಗಿ ಉಸಿರೆಳೆದುಕೊಂಡು, 'ಎಲ್ಲಮ್ಮ ದೇವಿ, ಯಾಕೋ ಬದುಕು ಬ್ಯಾಸ್ರಾದಂಗಾಗೆದ' ಎಂದುಕೊಳ್ಳುತ್ತ ಕಣ್ಣಿಗೆ ನೀರು ತಂದಳು. 'ಯಣ್ಣಾ, ನೀನು ಸಾಯ್ಬರ್ದಿತ್ತು !' ಎಂದು ತುಟಿಯೊಳಗೆ ಅಂದುಕೊಳ್ಳುತ್ತ ಕಣ್ಣು ಮುಚ್ಚಿದಳು. ಆ ಕ್ಷಣದಲ್ಲಿ, ಆಕೆಯ ಕಣ್ಣೊಳಗೆ ಶಿವರಾಯಿ ತುಂಬಿಕೊಂಡಿದ್ದ!

## ಎರಡು

ಆ ರಾತ್ರಿ, ಊಟ ಮಾಡಿ, ಮನೆ ಮುಂದಿನ ಕಟ್ಟೆಯ ಮೇಲೆ ಗಾಳಿಗೆ ಮೈಯೊಡ್ಡಿ ಕುಂತಿದ್ದವನು, ಇದ್ದಕ್ಕಿದಂಗೆ, 'ಯಾಕೇನ... ಎದ್ಯಾಗ ಚುಚ್ಚುಲಿಕ್ಕತ್ತೇದ' ಎನ್ನುತ ಬಂದು ಹಾಸುಗೆಯಲ್ಲಿ ಮಲಗಿದ ಶಿವರಾಯಿಗೆ ಮರುದಿನದ ಹಗಲು ಇಲ್ಲವಾಗಿತ್ತು! ಅಂದು ಬೆಳಗಿನ ಜಾವದ ಕೋಳಿ ಕೂಗುವ ಮುನ್ನ ಆತನಿಗೆ ಎದೆ ನೋವು ಹೆಚ್ಚಾಗಿ; ತಡೆದುಕೊಳ್ಳಲಾಗದೆ, ಹಾಸುಗೆಯ ಪಕ್ಕದಲ್ಲಿ ಆರೈಕೆ ಮಾಡುತ್ತ ಕುಂತಿದ್ದ ರತ್ನವ್ವನಿಗೆ, 'ನಾನು ಬದುಕದಿಲ್ಲನಸ್ತೈತಿ! ಇನ್ಮ್ಯಾಲೆ ದೇವಿ ಚಾಕ್ರಿನ ನೀನೇ ಮಾಡ್ಕಂಡೋಗು. ಹಂಗS ಯಲ್ಲವ್ವನಿಗಂದು ಮದವಿ ಮಾಡಿ... ಅಕಿನ ಮೆಟ್ಟಿಗಚ್ಚು. ದೇವಿ, ನಿನ್ಗ ಛಲೂದ ಮಾಡ್ತಾಳು. ಅಕಿ ಯಾವತ್ತಿದ್ರೂ ನಿನ್ನ ಕೈ ಬಿಡದಿಲ್ಲ... ಎಂದು ಹೇಳಿ, ಆಕೆಯ ಉಡಿಯಲ್ಲಿ ತಲೆಯಿಟ್ಟು ಕಣ್ಣು ಮುಚ್ಚಿದ್ದ. ತಿಪ್ಪಣ್ಣ ಸತ್ತ ನಂತರ ಇದ್ದೊಬ್ಬ ಮಗಳೊಂದಿಗೆ ತೌರುಮನೆಗೆ ಬಂದು,

ಶಿವರಾಯಿಯ ಆಸರೆಯಲ್ಲಿದುಕೊಂಡಿದ್ದ ರತ್ನವ್ವನಿಗೆ ಏಕಾಏಕಿ ಆತ, ಸತ್ತು ಹೋದಾಗ ದಿಕ್ಕು ತೋಚದಂತಾಗಿತ್ತು. ಆ ಕ್ಷಣದಲ್ಲಿ ಮುಂದಿನ ಬದುಕು ಹೇಗೆ ಎಂಬ ಚಿಂತೆಯಲ್ಲಿ ಆತನ ಹೆಣದ ಮುಂದೆ ಕುಂತು, 'ಯಣ್ಣಾ, ನನ್ನ ಪರ್ದೇಸಿನ ಮಾಡ್ಯೋದೆಲ್ಲೋ... ಎಂದು ಎದೆ ಬಿರಿದು ಹೋಗುವಂತೆ ಹಾಡಾಡಿಕೊಂಡು ಅತ್ತಿದ್ದಳು.

ತನಗೆ ಬುದ್ಧಿ ತಿಳಿಯುವ ಮುನ್ನವೇ ಅಪ್ಪ-ಅವ್ವನನ್ನು ಕಳೆದುಕೊಂಡಿದ್ದ ರತ್ನವ್ವನಿಗೆ, ಆ ದಿನಗಳಲ್ಲಿ ಅಣ್ಣ, ಶಿವರಾಯಿಯೇ ಆಸರೆಯಾಗಿದ್ದ. ಅಪ್ಪ-ಅವ್ವ ಸತ್ತ ನಂತರ ಮನೆಯ ಜವಾಬ್ದಾರಿಯನ್ನು ಹೊತ್ತುಕೊಂಡಿದ್ದ ಆತ, ಅವರಿವರ ಮನೆಯಲ್ಲಿ ಚಾಕ್ರಿ ಕೆಲಸ ಮಾಡಿ, ಬದುಕನ್ನು ಸವೆಸುತ್ತಿದ್ದ. ಅಂಥ ಕಷ್ಟದ ದಿನಗಳಲ್ಲೂ ಸಹ ರತ್ನವ್ವನಿಗೆ ಯಾವೊಂದು ಕೊರತೆಯೂ ಬಾರದಂತೆ ಜೋಪಾನ ಮಾಡಿದ್ದ. ಮುಂದೆ, ಆಕೆ ವಯಸ್ಸಿಗೆ ಬಂದ ಮೇಲೆ ಹಾರೀಗೇರಿಯಲ್ಲಿ ತನ್ನಂತೆ ಅಪ್ಪ-ಅವ್ವನನ್ನು ಕಳೆದುಕೊಂಡು ಹೊಟ್ಟೆ ಪಾಡಿಗೆಂದು ಹೊಸ ಮನೆಗಳಿಗೆ ಸುಣ್ಣ-ಬಣ್ಣ ಬಳಿಯುವ ಕೆಲಸ ಮಾಡಿಕೊಂಡಿದ್ದ ತಿಪ್ಪಣ್ಣನಿಗೆ ಮದಿವಿ ಮಾಡಿಕೊಟ್ಟಿದ್ದ. ಮದಿವಿಯಾದ ಹೊಸದರಲ್ಲಿ ನಗು ನಗುತ್ತ ಗಂಡನ ಮನೆಗೆ ಹೋಗಿದ್ದ ರತ್ನವ್ವ, ವರ್ಷ ತುಂಬುವುದರೊಳಗೆ ಯಲ್ಲವ್ವನಿಗೆ ಜನ್ಮ ನೀಡಿದ್ದಳು.

ಆಕೆ, ಹೊಟ್ಟೀಲೆ ನಿಂತಾಗ ಹೆಣ್ಣು ಕಳ್ಳಿನ ಶಿವರಾಯಿ ಸಂಭ್ರಮಪಟ್ಟಿಹ. ಚೊಚ್ಚಲು ಹೆರಿಗೆಗೆಂದು ತೌರು ಮನೆಗೆ ಕರೆದುಕೊಂಡು ಬಂದು, ನೆರೆ ಹೊರೆಯ ಹೆಣ್ಣು ಮಕ್ಕಳ ಸಹಾಯದಿಂದ ಬಾಣಂತನ ಮಾಡಿಸಿದ್ದ. ಆದರೆ, ರತ್ನವ್ವ, ಬಾಣಂತನ ಮುಗಿಸಿಕೊಂಡು ಮರಳಿ ಗಂಡನ ಮನೆಗೆ ಹೋಗುವಾ, 'ಯಣ್ಣಾ, ಅವ್ನು..... ಕುಡೀತಾನು!' ಎಂದು ತಿಪ್ಪಣ್ಣನ ಸೆರೆ ಕುಡಿಯುವ ಚಟದ ಬಗ್ಗೆ ಹೇಳಿಕೊಂಡು ಕಣ್ಣಲ್ಲಿ ನೀರು ತಂದಿದ್ದಳು. ಆಗ, ಶಿವರಾಯಿಯೇ, 'ಇಂಥದ್ದೆಲ್ಲ ಎಲ್ರ ಮನ್ಯಾಗೂ ಇದ್ದದ್ದೇ.... ಅದನ್ನೆಲ್ಲ ನೀನು, ತಲಿಗಚ್ಕಂಡು ಕುಂತ್ಕಬ್ಯಾಡ. ಮಗಳ ಮಾರಿ ನೋಡಿ.... ಜಲಮಾ ಮಾಡು' ಎಂದು ಬುದ್ಧೀ ಹೇಳಿ ಕಳಿಸಿದ್ದ. ಆತನ ಬುದ್ಧಿ ಮಾತುಗಳಿಗೆ ಕಟ್ಟುಬಿದ್ದು, ಗಂಡನ ಮನೆಗೆ ಹೋದ ಆಕೆಗೆ, ತಿಪ್ಪಣ್ಣ ಜಲುಮ ಮಾಡಲು ಬಿಡಲೇ ಇಲ್ಲ! ಮದಿವಿಗೆ ಮುಂಚೆಯೇ ಸೆರೆ ಕುಡಿಯುವ ಚಟ ಅಂಟಿಸಿಕೊಂಡಿದ್ದ ಆತ, ತಾನು ದುಡಿದು ತಂದದ್ದನ್ನೆಲ್ಲ ಸೆರೆ ಅಂಗಡಿಗೆ ಸುರಿದು, ನಿಧಾನವಾಗಿ ತನ್ನ ಮನೆಯನ್ನೇ ಕಳಾಹೀನ ಮಾಡುತ್ತಿದ್ದ. ಆ ಚಟದಿಂದ ಹೊರ ಬರಲಾಗದೆ ದಿನದಿಂದ ದಿನಕ್ಕೆ ಹಂಚೀಕಡ್ಡಿಯಂತಾಗುತ್ತ ನಡೆದಿದ್ದ ತಿಪ್ಪಣ್ಣ, ಕೊನೆಗೊಂದು ದಿನ ರಾತ್ರಿ, ಅದರ ಅಮಲಿನಲ್ಲಿರುವಾಗಲೇ ಹಾಸುಗೆಯಲ್ಲಿ ಹೆಣವಾಗಿದ್ದ.

ಯಲ್ಲಮ್ಮ ಹುಟ್ಟಿದ ಮೇಲೆ ರತ್ನವ್ವನ ಬಾಳು ಮೆಟ್ಟಗತ್ತು ಎಂದುಕೊಂಡಿದ್ದಾಗಲೇ ತಿಪ್ಪಣ್ಣ ಸತ್ತು ಹೋಗಿ, ತನ್ನ ಜವಾಬ್ದಾರಿಯನ್ನು ಶಿವರಾಯಿಯ ಕೊಳ್ಳಿಗೆ ಕಟ್ಟಿದ್ದ. ಆತ ಸತ್ತ ನಂತರ, ಯಲ್ಲವ್ವನೊಂದಿಗೆ ತನ್ನ ಆಸರೆಗೆ ಬಂದು ನಿಂತುಕೊಂಡಿದ್ದ ರತ್ನವ್ವನ ಬೋಳು ಹಣೆಯನ್ನು ಕಂಡಾಗಲೆಲ್ಲ ಶಿವರಾಯಿಗೆ ದುಃಖ ಉಮ್ಮಳಿಸಿ ಬರುತ್ತಿತ್ತು. ಆ ದುಃಖದಿಂದಾಗಿ ಆತನೊಳಗೆ ಈ ಲೌಕಿಕ ಪ್ರಪಂಚ ಬಗ್ಗೆ ಬೇಸರ ಹುಟ್ಟಲಾರಂಭಿಸಿತು. ಅಂಥ ಬೇಸರದ ದಿನಗಳಲ್ಲೇ, ಮಾತುಗಳು ಬತ್ತಿ ಹೋದಂತಾಗಿ, ದಿನದ ಇಪ್ಪತ್ನಾಲ್ಕು ತಾಸು, ಯಲ್ಲವ್ವನನ್ನು ತೊಡೆಯ ಮೇಲೆಳೆದುಕೊಂಡು, ಸೂರು ನೋಡುತ್ತ ಮನೆ

ಮೂಲೆಯಲ್ಲಿ ಕುಂತು ಬಿಡುತ್ತಿದ್ದ ರತ್ನವ್ವನನ್ನು ಕಂಡು, 'ಚಿಂತೆ ಮಾಡ್ಬ್ಯಾಡ... ಎಲ್ಲದಕ್ಕೂ ದೇವ್ರಿದ್ದಾನು!' ಎಂದು ಧೈರ್ಯ ಹೇಳುತ್ತಿದ್ದ ಶಿವರಾಯಿಯ ಮೈಮೇಲೆ ಇದ್ದಕ್ಕಿದ್ದಂಗೆ ಎಲ್ಲಮ್ಮ ದೇವಿ ಆಡತೊಡಗಿದಳು! ಹಾಗೊಮ್ಮೆ ಮೈಮೇಲೆ ಆಡತೊಡಗಿದ ದೇವಿ, ಆತ, ಜೋಗಿತಿಯರ ಸಮ್ಮುಖದಲ್ಲಿ ಶಾಸ್ತ್ರೋಕ್ತವಾಗಿ ಸೀರೆಯುಟ್ಟು ಕೈಯಲ್ಲಿ ಪಡಲಿಕೆ ಹಿಡಿದು ಆಕೆಯ ವಾರದ ದಿನಗಳಂದು ಮನೆ ಮನೆ ಸುತ್ತಿ ಜೋಗ ಬೇಡುವವರೆಗೂ ಬಿಟ್ಟಿರಲಿಲ್ಲ. ಊರ ಜನರಿಗೆ ಮೊದಮೊದಲು ಇದೆಲ್ಲ ವಿಚಿತ್ರವೆಂಬಂತೆ ಕಂಡು ಬಂದರೂ ಮೈಮೇಲ ಎಲ್ಲಮ್ಮ ದೇವಿ ಆಡತೊಡಗಿದಾಗ ಆತನ ಬಾಯಿಯಿಂದ ಬರುತ್ತಿದ್ದ ಹೇಳಿಕೆಗಳು, ಮುಂದಿನ ದಿನಗಳಲ್ಲಿ ಸತ್ಯವಾಗತೊಡಗಿದ್ದನ್ನು ಕಂಡುದಂಗಾಗಿ ಹೋಗಿದ್ದರು. ಮುಂದೆ, ಅವರೆಲ್ಲ ದೇವಿಯ ಭಕ್ತರಾಗಿ ಪರಿವರ್ತನೆಗೊಂಡು, ಶಿವರಾಯಿಗೆ ಊರ ಹೊರಗಿದ್ದ, ಹೈಸ್ಕೂಲಿನ ಬಯಲಿಗೆ ಅಂಟಿಕೊಂಡಂತಿದ್ದ ಗೋಮಾಳವನ್ನು ಸ್ವಚ್ಛಮಾಡಿ ಅಲ್ಲೊಂದು ಗುಡಿ ಕಟ್ಟಿಸಿ, ಎಲ್ಲಮ್ಮ ದೇವಿಯ ಝುಗೆಯನ್ನು ಪ್ರತಿಷ್ಠಾಪಿಸಿ ಕೊಟ್ಟಿದ್ದರು. ಸೀರೆಯುಟ್ಟ ನಂತರ, ಎಲ್ಲಮ್ಮ ದೇವಿಯ ಚಾಕ್ರಿ ಮಾಡುವುದಕ್ಕೆಂದೇ ತನ್ನ ಬದುಕನ್ನು ಮೀಸಲಿಟ್ಟ ಶಿವರಾಯಿ, ಪ್ರತೀ ವರ್ಷದ ಬನದ ಹುಣ್ಣಿವಿಗೆ ದೇವಿಯ ಜಾತ್ರೆ ಮಾಡುತ್ತಿದ್ದ. ಜಾತ್ರೆಯ ದಿನ, ಐದಾರು ಊರುಗಳಿಂದ ಆಗಮಿಸುತ್ತಿದ್ದ ಭಕ್ತರ ಸಮ್ಮುಖದಲ್ಲಿ ತಲೆಯ ಮೇಲೆ ದೇವಿಯ ಝುಗೆಯನ್ನು ಹೊತ್ತು, ಕಿಚ್ಚ ಹಾಯುತ್ತಿದ್ದ. ಆತ, ಮೈಮೇಲೆ ದೇವಿ ಬಂದ ಸ್ಥಿತಿಯಲ್ಲಿ ಜೋಗಿತಿಯರು ನುಡಿಸುತ್ತಿದ್ದ ಚವಡಿಕೆಯ ನಾದದ ನಡುವೆ, ಕೊಂಡದೊಳಗಿನ ನಿಗಿ ನಿಗಿ ಕೆಂಡದ ಮೇಲೆ ಏದುಸಿರು ಬಿಡುತ್ತ, ನಡೆದು ಹೋಗುವುದನ್ನು ಕಂಡು, ಜನರು ದಂಗಾಗಿ ಹೋಗುತ್ತಿದ್ದರು.

ಹೀಗೆ, ಶಿವರಾಯಿ, ಸೀರೆಯುಟ್ಟು ದೇವಿಯ ಚಾಕ್ರಿಯಲ್ಲಿ ತೊಡಗಿದ ಮೇಲೆ ರತ್ನವ್ವನಿಗೆ ಬದುಕು ಬೇಸೆನಿಸಲಾರಂಭಿಸಿತ್ತು. ಆಕೆ, ತನ್ನೆಲ್ಲ ನೋವುಗಳನ್ನು ಮರೆತು, ಆತನಿಗೆ ಸಹಾಯಕಳಾಗಿ ನಿಂತಿದ್ದಳು. ಯಲ್ಲವ್ವ, ಅಕ್ಷರ ತಿದ್ದಲು ಗೌರಮೆಂಟು ಸ್ಕೂಲಿಗೆ ಹೊಂಟಿದ್ದಳು.

## ಮೂರು

ಶಿವರಾಯಿ ಸತ್ತಾಗ, 'ದೇವಿಯ ಜಾತ್ರೆ ನಿಂತಂಗಾತು!' ಅಂತಂದುಕೊಂಡವರೆಲ್ಲ ನಿಬ್ಬೆರಗಾಗುವಂತೆ ರತ್ನವ್ವ, ಮುಂದೆ ಬಂದ ಬನದ ಹುಣ್ಣಿವಿಗೆ ಎಲ್ಲಮ್ಮ ದೇವಿಯ ಕೊಂಡದ ಜಾತ್ರೆ ಮಾಡಿದ್ದಳು. ಆಕೆಗೆ, ಜಾತ್ರೆಗೆ ಇನ್ನೂ ವಾರ ಇರುವಾಗ ಕಿಚ್ಚ ಹಾಯುವ ವಿಚಾರದಲ್ಲಿ ಆತಂಕವಿತ್ತಾದರೂ ಜಾತ್ರೆಯ ದಿನ, ದೇವಿಯ ಪೂಜೆಯ ನಂತರ, ಗಟ್ಟಿ ಮನಸ್ಸು ಮಾಡಿ, ಕೊಂಡದ ಮುಂದೆ ನಿಂತಿದ್ದಳು. ಆಕೆ, ದೇವಿಯ ಝುಗೆಯನ್ನು ಹೊತ್ತು ಶಿವರಾಯಿಯನ್ನು ಕಣ್ಮುಂದೆ ತಂದುಕೊಳ್ಳುತ್ತ, 'ಯಣ್ಣಾ, ನೀನೇ ಕಿಚ್ಚ ಹಾಯಿಸ್ಬೇಕು!' ಎಂದು ಮನದೊಳಗೆ ಅಂದುಕೊಳ್ಳುತ್ತ ಕೊಂಡದೊಳಗೆ ಕಾಲಿಟ್ಟವಳು, ನಿಂತು ನೋಡುತ್ತಿದ್ದ ಜನರೆಲ್ಲ ಅಚ್ಚರಿ ಪಡುವಂತೆ ನಿಧಾನವಾಗಿ ಕೆಂಡದ ಮೇಲೆ ನಡೆಯುತ್ತ, ಕೊಂಡದ ಇನ್ನೊಂದು ತುದಿಯಿಂದ ಹೊರಬಂದು, ಏದುಸಿರು ಬಿಡುತ್ತ ನೆಲದ ಮೇಲೆ ಕುಂತಿದ್ದಳು. ಆ ಗಳಿಗೆಯಲ್ಲಿ ಜೋಗಿತಿಯರು ನುಡಿಸುತ್ತಿದ್ದ ಚವಡಿಕೆಯ ನಾದವನ್ನು ಕಿವಿಯೊಳಗೆ

ತುಂಬಿಕೊಳ್ಳುತ್ತ, ಭಕ್ತಿಯ ಉನ್ಮಾದದಲ್ಲಿ ಮುಳುಗಿ ಹೋಗಿದ್ದ ಜನರೆಲ್ಲ, 'ದೇವಿ.... ರತ್ನವ್ವನ ಕೈಬಿಡ್ಲಿಲ್ಲ!' ಎಂದು ಮಾತಾಡಿಕೊಳ್ಳುತ್ತಿದ್ದರು.

ಅಂದು, ಕಿಚ್ಚಹಾಯ್ದು ನೆರೆದ ಜನರಿಂದ ಸೈ ಎನಿಸಿಕೊಂಡಿದ್ದ ರತ್ನವ್ವ, ಕಳೆದ ವರ್ಷದ ಬನದ ಹುಣ್ಣಿಮೆಯವರೆಗೂ ಕೊಂಡದ ಜಾತ್ರೆಯನ್ನು ನಿರಾತಂಕವಾಗಿ ಮಾಡಿಕೊಂಡು ಬಂದಿದ್ದಳು. ಆಕೆ, ಈ ಸಲವೂ ಜಾತ್ರೆಗೆ ಎಲ್ಲ ರೀತಿಯ ಸಿದ್ಧತೆಗಳನ್ನು ಮಾಡಿಕೊಂಡಿದ್ದಳಾದರೂ ಸಹ ಆತಂಕದಲ್ಲಿದ್ದಳು. ಜಾತ್ರೆ ನಡೆಸುವ ವಿಚಾರದಲ್ಲಿ ಆಕೆಗೆ, ಹೈಸ್ಕೂಲಿನ ಚೇರ್ಮನ್ ಈರನಗೌಡ ಅಡ್ಡಗಾಲು ಹಾಕಿದ್ದ! ರತ್ನವ್ವ, ಐದಾರು ತಿಂಗಳ ಹಿಂದೆ, ಯಲ್ಲವ್ವನ ಮೇಲೆ ಕಣ್ಣು ಹಾಕಿದ್ದ ಈರನಗೌಡ ಮನೆ ಬಾಗಿಲವರೆಗೂ ಹೋಗಿ, ಆತನ ಮುಖದ ಮೇಲಿನ ನೀರಿಳಿಸಿ ಬಂದಿದ್ದಳು. ಅದು, ನಾಳೆ ದಿನದ ಕೊಂಡದ ಜಾತ್ರೆಗೆ ಮುಳುವಾಗಿತ್ತು.

------

ಆ ದಿನ, ಕೇರಿಯ ಜನರ ಮುಂದೆ ತನ್ನ ಮಾನವನ್ನು ತಗೆದಿದ್ದ ರತ್ನವ್ವನ ಮೇಲೆ ಸೇಡು ತೀರಿಸಿಕೊಳ್ಳುವುದಕ್ಕಾಗಿ ಈರನಗೌಡ, 'ಆಕಿ ಮೈಮ್ಯಾಲ ದೇವಿ ಆಡದಿಲ್ಲ.... ಎಲ್ಲ ನಾಟಕ ಮಾಡ್ತಾಳವ್ಳು!' ಎಂದು ಊರಿಲ್ಲೆಲ್ಲ ಹೇಳಿಕೊಂಡು ತಿರುಗಾಡಿದ್ದ. ಜನರು, ಆ ಮಾತುಗಳನ್ನು ನಂಬದಾದಾಗ ಅಷ್ಟಕ್ಕೇ ಸುಮ್ಮನಾಗಿದ್ದ. ಆದರೆ, ಯಲ್ಲವ್ವನ ಮೇಲಿನ ಆಸೆ ಮಾತ್ರ ಕಮ್ಮೀಯಾಗಿರಲಿಲ್ಲ. ದಿನದಿಂದ ದಿನಕ್ಕೆ ತನ್ನೊಳಗೆ ಬಲಿತುಕೊಳ್ಳಲಾರಂಭಿಸಿದ್ದ ಆ ಆಸೆಯಿಂದಾಗಿ, ರತ್ನವ್ವನ ಮನವೊಲಿಸಲೆಂದು ಅದೊಂದು ದಿನ, ಆಕೆಯ ಮನೆಗೆ ತನ್ನ ಬಲಗೈ ಭಂಟನಂತಿದ್ದ ಬುರ್ಲಟ್ಟೇರ ಓಣಿಯ ಚಂದಪ್ಪನನ್ನು ಕಳಿಸಿದ್ದ. ಸಂಜೆ ಹೊತ್ತಿನಲ್ಲಿ ರತ್ನವ್ವ, ಮನೆ ಮುಂದಿನ ಕಟ್ಟೆಯ ಮೇಲೆ ಕುಂತು, ಅಕ್ಕಿ ಹಸುನು ಮಾಡುವಾಗ ಚಂದಪ್ಪ ಬಂದಿದ್ದ. ಆಕೆ ಹೊತ್ತಿಲ್ಲದ ಹೊತ್ತಿನಲ್ಲಿ ಇವನ್ಯಾಕೆ ಬಂದ ಅಂತಂದುಕೊಳ್ಳುವಾಗಲೇ, 'ರತ್ನವ್ವ, ಎಣ್ಣೆ ಬಂದಾಗ ಕಣ್ಣು ಮುಚ್ಚಬಾರ್ದು. ನೀನು ಮನಸು ಮಾಡ್ದೆಂದ್ರ ಈರನಗೌಡ ನಿನ್ನ ಕೈ ಬಿಡದಿಲ್ಲ ....!' ಎಂದು ಆಕೆಯ ಪಕ್ಕದಲ್ಲಿ, ಕಟ್ಟೆಯ ಮೇಲೆ ಕುಂಡೆಯೂರುತ್ತ ಮಾತು ಶುರು ಮಾಡಿದ್ದ. ಆಕ್ಷಣದಲ್ಲಿ, ಆತನ ಮಾತಿನ ಹಿಂದಿರುವ ಉದ್ದೇಶವನ್ನು ಕಂಡುಕೊಂಡದ್ದೇ ತಡ ಆಕೆಗೆ ಸಿಟ್ಟು ಉಕ್ಕೇರಿ ಬಂದಿತ್ತು. ಆ ಸಿಟ್ಟನ್ನು ತನ್ನೊಳಗೆ ಅದುಮಿಟ್ಟುಕೊಳ್ಳಲಾಗದೆ, 'ಚಂದಪ್ಪ, ಬೇಕಿದ್ರ ನಿನ್ನೆಂಡ್ತಿನ ಅವ್ವನ ಬುಡಕ್ಕ ಕೊಡು ಹೋಗು ....' ಎಂದು ಬೇದು ಕಳಿಸಿದ್ದಳು. ಆಕೆಯಿಂದ ಮುಖದ ಮೇಲಿನ ನೀರಿಳಿಸಿಕೊಂಡು ಬಂದ ಚಂದಪ್ಪ, 'ನಿಮ್ಮೆಂಡ್ತಿನ.... ಜ್ಯಾರೆದಾವ್ರ ಬುಡಕ್ಕ ಕೊಡಗಂತೇಳಂದ್ಳು!' ಎಂದು ಈರನಗೌಡ ಮುಂದೆ ಸುಳ್ಳು ಹೇಳಿದ್ದ. ಮಾತುಗಳನ್ನು ಕೇಳಿ ಕುದ್ದು ಹೋದ ಆತ, ಆಕೆಯ ಮೇಲೆ ಒಳಗೊಳಗೆ ಹಲ್ಲು ಮಸೆಯತೊಡಗಿದ.

ರತ್ನವ್ವ, ಯಾವುದಕ್ಕೂ ಬಗ್ಗದಾದಾಗ ಈರನಗೌಡ, ಆಕೆಗೆ ಬುದ್ಧಿ ಕಲಿಸಿಯೇ ತೀರುತ್ತೇನೆಂದು ಹಟಕ್ಕೆ ಬಿದ್ದ. ಹಗಲು-ರಾತ್ರಿ ನಿದ್ದೆಗೆಟ್ಟು ಆಕೆಯ ಅನ್ನಕ್ಕೆ ಆಧಾರವಾಗಿದ್ದ ಎಲ್ಲಮ್ಮದೇವಿಯ ಗುಡಿಯಿರುವ ಗೋಮಾಳದ ಜಾಗೆಯನ್ನು ಹೈಸ್ಕೂಲು ಟ್ರಸ್ಟಿನ ಹೆಸರಿಗೆ ಮಾಡಿಕೊಳ್ಳುವ ತಂತ್ರ ರೂಪಿಸಿದ. ಆ ತಂತ್ರ ಫಲಿಸುವುದಕ್ಕಾಗಿ ಟ್ರಸ್ಟಿನ ಜನರಿಗೆ ಏನೇನೂ

ಹೇಳಿ ಕಿವಿ ತುಂಬಿದ. ಅವರೆಲ್ಲ, 'ಹ್ಞೂಂ, ಆತು.... ನೀನೇಳ್ದಂಗೆ' ಎಂದು ತಲೆ ತೂಗಿದ್ದೇ ತಡ, ತನ್ನ ಪ್ರಭಾವವನ್ನು ಬಳಸಿ ಗ್ರಾಮ ಪಂಚಾಯ್ತಿಯಲ್ಲಿ ಕಾಗದ ಪತ್ರಗಳನ್ನು ತಿದ್ದಿಸಿದ. ಈಗ ವಾರದ ಹಿಂದೆ ರತ್ನವ್ವನನ್ನು ಸ್ಕೂಲಿನ ಆಫೀಸು ರೂಮಿಗೆ ಕರೆಸಿ, ತಿದ್ದಿಸಿ ತಂದ ಕಾಗದ ಪತ್ರಗಳನ್ನು ಆಕೆಯ ಮುಖದೆದುರು ಹಿಡಿದು, 'ರತ್ನವ್ವ, ಇಲ್ನೋಡು.... ದೇವಿಗುಡಿ, ಹೈಸ್ಕೂಲಿನ ಜಾಗೆದಾಗದ! ನಾವು.... ನಿನ್ಗ ಇಲ್ಲಿತಂಕ ಹೇಳಿರ್ಲಿಲ್ಲ. ಆದ್ರ.... ಈಗ, ಟ್ರಸ್ಟಿನೋರೆಲ್ಲ ದೇವಿ ಗುಡಿನ ಹೈಸ್ಕೂಲಿನ ಸುಪರ್ದಿಗೆ ತಗಂಡು.... ಸುಧಾರಣೆ ಮಾಡ್ಲಿಕ್ಕೆ ನಿರ್ಧಾರ ಮಾಡ್ಯಾರು. ಇನ್ಮ್ಯಾಲೆ ದೇವಿಗುಡಿ ಜೀರ್ಣೋದ್ಧಾರ ಮಾಡದು..... ಇಂಥ ವಿಚಾರೆಲ್ಲ ಹೈಸ್ಕೂಲಿನ ಟ್ರಸ್ಟಿಗೆ ಬಿಟ್ಟದ್ದು! ಅದಕ್ಕೇ..... ಈ ಸಲ ನೀನು, ಕೊಂಡದ ಜಾತ್ರೆ ಮಾಡ್ಬ್ಯಾಡ' ಎಂದು ಎಂದು ತಾಕೀತು ಮಾಡಿದ್ದ. ಆದರೆ ಮಾತುಗಳನ್ನು ರತ್ನವ್ವ ಕಿವಿಗೆ ಹಾಕಿಕೊಂಡಿರಲಿಲ್ಲ. ಆಕೆ. 'ದೇವಿ... ಯಾವತ್ತಿದ್ರೂ ನನ್ನವ್ಳೇ!' ಎಂದು ಮನದೊಳಗೆ ಅಂದುಕೊಳ್ಳುತ್ತ, ತುಟಿ ಬಿಚ್ಚಿ ಒಂದೂ ಮಾತಾಡದೆ ತಿರುಗಿ ಬಂದಿದ್ದಳು. ಆ ನಂಬಿಕೆಯಿಂದಲೇ ಈ ಸಲದ ಜಾತ್ರೆಗೂ ಸಿದ್ಧತೆ ಮಾಡಿಕೊಂಡಿದ್ದಳು.

ಇದರಿಂದ ಇನ್ನಷ್ಟು ರೋಷಿ ಹೋದ ಈರನಗೌಡ, ಇಂದು ಸಂಜೆ ಅವಸರವಸರವಾಗಿ ಟ್ರಸ್ಟಿನ ಜನರನ್ನೆಲ್ಲ ಹೈಸ್ಕೂಲಿನ ಬಯಲಿನಲ್ಲಿ ಸೇರಿಸಿ, ಅವರೆಲ್ಲರ ಸಮ್ಮುಖದಲ್ಲೇ, 'ರತ್ನವ್ವ, ನಾಳೆ ದಿನ ನಿನ್ಗ ಕಿಚ್ಚ ಹಾಯ್ಲಿಕ್ಕೆ ಬಿಡದಿಲ್ಲ!' ಎಂದು ಸಿಟ್ಟಿನಿಂದ ಅಂದಿದ್ದ....

'ಯವ್ವ, ಇಲ್ಲ್ಯಾಕ್ ಕುಂತಿದ್ದಿ...!? ಈರನಗೌಡ ಕರ್‍ದಾನಂತೇಳಿ.... ಸಾಲಿ ಕಡಿಗ ಹೋಗಿದ್ದೆಲ್ಲ !. ಯಾವಾಗ್ಬಂದಿ.... !? ಬಂದು .... ಭಾಳತ್ತಾತೇನು? ಹಂಗs ಕುಂತಿದ್ದೆಲ್ಲ....! ಒಳಗ ಬಂದು.... ನನ್ನ ಎಬ್ಬಿಸ್ಬಾರ್ದಿತ್ತೇನು!?'

ಪಡಸಾಲೆಯಲ್ಲಿ ಮಲಗಿದ್ದ ಯಲ್ಲವ್ವನಿಗೆ ಎಚ್ಚರವಾಗಿ, ಎದ್ದು ಬಂದು, ಮೈದಡವಿ ಮಾತಾಡಿಸುತ್ತಿದ್ದಂಗೆ ರತ್ನವ್ವ, 'ಹ್ಞಾಂ....' ಎನ್ನುತ್ತ ಸರಕ್ಕನೆ ವಾಸ್ತವಕ್ಕೆ ಬಂದಳು. ಆಕೆಯತ್ತ ದೃಷ್ಟಿ ಹರಿಸಿ, 'ಹ್ಞೂಂ, ಭಾಳತ್ತಾತು....ಬಂದು!' ಎಂದು ತಡವರಿಸಿದಳು. ಆಗ, ತದೇಕ ಚಿತ್ತದಿಂದ ತನ್ನನ್ನೇ ನೋಡುತ್ತ ನಿಂತಿದ್ದ ಮಗಳನ್ನು ಕಂಡು, ಆಕೆಯ ಕಣ್ಣುಗಳು ತುಂಬಿ ಬಂದವು. ಆ ಗಳಿಗೆಯಲ್ಲಿ ಆಕೆಗೆ, ಯಲ್ಲವ್ವನ ಮುಖದೊಳಗೆ ದೇವಿಯ ಝುಗೆ ಮೂಡಿ ಬಂದಂತೆನಿಸಿ ಕುಂತಲ್ಲೇ ಸಂಕಟಪಟ್ಟಳು. ಆ ಸಂಕಟದಿಂದಾಗಿ, ಈರನಗೌಡ ಕಣ್ಮುಂದೆ ಬಂದಂತೆನಿಸಿತು. ಆತ, ಕಣ್ಮುಂದೆ ಬರುತ್ತಿದ್ದಂತೆ ಬೆಚ್ಚಿಬಿದ್ದಳು. ಆಗ, 'ರತ್ನವ್ವ, ನಾಳೆ ದಿನ ನಿನ್ಗ ಕಿಚ್ಚ ಹಾಯ್ಲಿಕ್ಕೆ ಬಿಡದಿಲ್ಲ!?' ಎಂದು ಆತ, ಅಂದ ಮಾತು ಕಿವಿಯೊಳಗೆ ಖಣ ಖಣಿಸಿದಂತಾಗಿ ಒಳಗೊಳಗೆ ತಳಮಳಿಸಿದಳು. ಆ ತಳಮಳದಲ್ಲಿ ಆಕೆಗೆ, ಸಿಟ್ಟು ಉಕ್ಕೇರಿ ಬಂದು, ಕಟ ಕಟನೆ ಹಲ್ಲು ಕಡಿದಳು. ಅದೇ ಸಿಟ್ಟಿನಲ್ಲಿ, 'ನಾನು, ಈ ಸಲ.... ದೇವಿ ಜಾತ್ರೆ ಮಾಡೇ ಮಾಡ್ತೀನಿ! ಹಂಗs ಕಿಚ್ಚನೂ ಹಾಯ್ತೀನಿ! ಅವುನೇನು ಹರ್‍ಕಂತಾನೊ ಹರ್‍ಕಲಿ.... ನಾನೂ ನೋಡೇ ಬಿಡ್ತೀನಿ!' ಎಂದು ಮನದೊಳಗೆ ಅಂದುಕೊಂಡಳು. ತಣ್ಣಗೆ ಗಾಳಿ ಬೀಸುತ್ತಿತ್ತು. ಅದು, ಅವಳ ಮನಸ್ಸನ್ನು ಹಗುರು ಮಾಡಿತ್ತು. ಆಕೆ, ದೀರ್ಘವಾದ ನಿಟ್ಟುಸಿರೊಂದನ್ನು ಬಿಡುತ್ತ ಸುತ್ತಲೂ ಕಣ್ಣಾಡಿಸಿದಳು. ತನ್ನೊಳಗಿನ ತುಮುಲವನ್ನು

ತೋರುಗೊಡದೆ, 'ನಡಿಯವ್ವ, ಬೆಳಕು ಹರೀಲಿಕ್ಕೆ ಬಂತು.... ಒಲಿ ಮ್ಯಾಲೆ.... ನೀರು ಕಾಯ್ಲಿಕ್ಕೆ ಇಡುವಂತೆ. ಲಗೂನ ಜಳಕ ಮಾಡಿ... ಗುಡಿಕಡಿಗ ಹೋಗುನು. ಸಣ್ಣಂಗಿ ಮಂದಿ ಸೇರ್ಲಿಕತ್ತಿರ್ತಾರು. ದೇವಿ ಪೂಜೆಗ ತಡ ಆತಂದ್ರ.... ಬಿಸಲಾಗ ಕಿಚ್ಚ ಹಾಯ್ಲಿಕ್ಕೆ ತ್ರಾಸ ಆಕ್ಕೇತಿ' ಎಂದು ಯಲ್ಲವ್ವನಿಗೆ ಹೇಳುತ್ತ, ಕಟ್ಟೆಯ ಮೇಲಿಂದ ತಟ್ಟನೆ ಎದ್ದು, ಆಕೆಯ ಬೆನ್ನ ಹಿಂದೆ ಒಳಗೆ ನಡೆದಳು.

ಆಕೆ, ಹಾಗೆ ಮನೆಯೊಳಗೆ ನಡೆದು ಹೋಗುವಾಗ ಕತ್ತು ತಿರುಗಿಸಿ ಹಿಂದೆ ನೋಡಿದಳು. ಆಗ, ಪೂರ್ವದ ಮುಗಿಲಿಗೆ ಕೆಂಪು ಅಡರುತ್ತಿದ್ದುದು ಆಕೆಯ ಕಣ್ಣಿಗೆ ಬಿತ್ತು.

* * *

# ಲೇಖಕರ ವಿಳಾಸಗಳು


೧. **B. R. Nagesh**
G-117 (I Floor)
J. M. Nagar Complex, PL.
Din Doyal Roul, Dombivili
(W), Thane Dist: Mumbai

೨. **ಗುರುರಾಜ ಎಲ್ಲಾಪುರ**
ಅಧ್ಯಾಪಕರು,
ಪ್ರೌಢಶಾಲಾ ವಿಭಾಗ, ಸ.ಪ.ಪೂ.
ಕಾಲೇಜು, ವಿಜಯಪುರ,
ದೇವನಹಳ್ಳಿ ತಾಲೂಕು,
ಬೆಂಗಳೂರು
ಗ್ರಾ. ಜಿಲ್ಲೆ-೫೬೨೧೩೫

೩. **ಶುಭದಾ ಅ. ಅಮಿನಭಾವಿ**
C/o ಅಶೋಕ ಲ ಅಮಿನಬಾವಿ
E/1A ಯುಬಿ ಹಿಲ್ ರಸ್ತೆ,
ಮಾಳಮಡ್ಡಿ, ಧಾರವಾಡ-೭

೪. **ಮೇಟಿ ಮಲ್ಲಿಕಾರ್ಜುನ**
ಸಹ್ಯಾದ್ರಿ ಕಲಾ ಕಾಲೇಜು,
ಕುವೆಂಪು, ವಿಶ್ವವಿದ್ಯಾಲಯ,
ಶಿವಮೊಗ್ಗ-೩

೫. **ಲಕ್ಷ್ಮಣ ಬದಾಮಿ**
ನೇಕಾರ ಪೇಟೆ,
ಸೀರೂರು-೫೮೭೧೨೦

೬. **ಕೆ. ಪರಿಘಾ**
ಎ.ಪಿ.ಎಂ.ಸಿ. ಹರಿಹರ್,
ದಾವಣಗೇರಿ ಜಿಲ್ಲೆ

೭. **ಗುರುಮೂರ್ತಿ ಪೆಡಂಕೂರು**
ಹಗರಿಬೊಮ್ಮನಹಳ್ಳಿ,
ಬಳ್ಳಾರಿ ಜಿಲ್ಲೆ

೮. **ಬಸವರಾಜ ಕೋಡಕುಂಟಿ**
ದ್ರಾವಿಡ ವಿಶ್ವವಿದ್ಯಾಲಯ,
ಕುಪ್ಪಮ್-೫೭೭೪೨೫

೯. **ಕಲ್ಲೇಶ್ ಕುಂಬಾರ್**
ಜಿಲ್ಲಾ ಕೇಂದ್ರ ಗ್ರಂಥಾಲಯ
ಶಾಖೆ: ತೇರದಾಳ,
ತಾ: ಜಮಖಂಡಿ
ಬಾಗಲಕೋಟ ಜಿಲ್ಲೆ-೫೮೭೩೧೫

೧೦. **ಬಸು ಬೇವಿನಗಿಡದ**
ಪ್ರೋಗ್ರಾಂ ಆಫೀಸರ್
ಆಕಾಶವಾಣಿ
ಧಾರವಾಡ-೩

